# 'ಧ್ವನಿ-ವರ್ಣ-ಅಕ್ಷರಮಾಲೆ'

(ಕನ್ನಡ - ಸಂಸ್ಕೃತ ತೌಲನಿಕ ಅಧ್ಯಯನ) ಪಿ.ಹೆಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಮಂಡಿಸುತ್ತಿರುವ ಮಹಾಪ್ರಬಂಧ


ಸಂಶೋಧಕರು:

ಗಣೇಶರಾಮಚಂದ್ರ ಭಟ್,

ಕನ್ನಡ ಉಪನ್ಯಾಸಕರು,

ಸ. ಪ. ಪೂ. ಕಾಲೇಜು ನಡ, ಬೆಳ್ತಂಗಡಿ ತಾಲೂಕು, ದ. ಕ.

ಮಾರ್ಗದರ್ಶಕರು

ಡಾ॥ ಈ. ಮಹಾಬಲ ಭಟ್ಟ,

ಉಪಪ್ರಾಂಶುಪಾಲರು ಹಾಗೂ ಮುಖ್ಯಸ್ಥರು, ಸಂಸ್ಕೃತ ವಿಭಾಗ,

ಶ್ರೀ. ಧ. ಮಂ. ಕಾಲೇಜು ಉಜಿರೆ, ಬೆಳ್ತಂಗಡಿ ತಾಲೂಕು, ದ. ಕ.



ಅಧ್ಯಯನ ಕೇಂದ್ರ

ಡಾ॥ ಹಾ.ಮಾ.ನಾ. ಸಂಶೋಧನಾ ಕೇಂದ್ರ,

ಶ್ರೀ. ಧ. ಮಂ. ಕಾಲೇಜು ಉಜಿರೆ, ಬೆಳ್ತಂಗಡಿ ತಾಲೂಕು, ದ. ಕ.

ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ ಹಂಪಿ,

ವಿದ್ಯಾರಣ್ಯ, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ.

01-08-2011

481

'ಧ್ವನಿ–ವರ್ಣ–ಅಕ್ಷರಮಾಲೆ' (ಕನ್ನಡ ಸಂಸ್ಕೃತ ತೌಲನಿಕ ಅಧ್ಯಯನ ) ಪಿ.ಹೆಚ್.ಡಿ

ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸುತ್ತಿರುವ ಮಹಾಪ್ರಬಂಧ


ಸಂಶೋಧಕರು:

ಗಣೇಶರಾಮಚಂದ್ರ ಭಟ್,

ಕನ್ನಡ ಉಪನ್ಯಾಸಕರು,

ಸ.ಪ.ಪೂ.ಕಾಲೇಜು ನಡ, ಬೆಳ್ತಂಗಡಿತಾಲೂಕು, ದ.ಕ.

ಮಾರ್ಗದರ್ಶಕರು

ಡಾ॥ ಈ. ಮಹಾಬಲ ಭಟ್ಟ,

ಉಪಪ್ರಾಂಶುಪಾಲರು ಹಾಗೂ ಮುಖ್ಯಸ್ಥರು, ಸಂಸ್ಕೃತವಿಭಾಗ,

ಶ್ರೀ.ಧ.ಮಂ.ಕಾಲೇಜು ಉಜಿರೆ, ಬೆಳ್ತಂಗಡಿತಾಲೂಕು, ದ.ಕ.

ಅಧ್ಯಯನ ಕೇಂದ್ರ

ಡಾ॥ ಹಾ.ಮಾ.ನಾ. ಸಂಶೋಧನಾಕೇಂದ್ರ,

ಶ್ರೀ.ಧ.ಮಂ.ಕಾಲೇಜು ಉಜಿರೆ, ಬೆಳ್ತಂಗಡಿತಾಲೂಕು, ದ.ಕ.



ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ ಹಂಪಿ,

ವಿದ್ಯಾರಣ್ಯ, ಹೊಸಪೇಟೆ ತಾಲೂಕು, ಬಳ್ಳಾರಿಜಿಲ್ಲೆ.

01–08–2011

# ಪ್ರಮಾಣ ಪತ್ರ

'ಧ್ವನಿ–ವರ್ಣ–ಅಕ್ಷರಮಾಲೆ' (ಕನ್ನಡ–ಸಂಸ್ಕೃತ ತೌಲನಿಕ ಅಧ್ಯಯನ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿ.ಹೆಚ್.ಡಿ.ಪದವಿಗಾಗಿ ಸಿದ್ಧಪಡಿಸಲಾಗಿದೆ. ಡಾ॥ಈ.ಮಹಾಬಲಭಟ್ಟ, ಉಪಪ್ರಾಂಶುಪಾಲರು ಹಾಗೂ ಮುಖ್ಯಸ್ಥರು ಸಂಸ್ಕೃತವಿಭಾಗ, ಎಸ್.ಡಿ.ಎಂ.ಕಾಲೇಜು ಉಜಿರೆ, ಬೆಳ್ತಂಗಡಿತಾಲೂಕು, ದ.ಕ. ಜಿಲ್ಲೆ ಇವರು, ಪ್ರಬಂಧ ರಚನೆಗೆ ಮಾರ್ಗದರ್ಶನಮಾಡಿದ್ದಾರೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲೀ ಇಲ್ಲವೆ ಬೇರೆ ಯಾವುದೇ ಪ್ರಕಟಣೆಗಾಗಲೀ ಬಳಸಿಕೊಂಡಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 01–08–2011
ಸ್ಥಳ : ಬೆಳ್ತಂಗಡಿ.

ಗಣೇಶರಾಮಚಂದ್ರ ಭಟ್,
ಕನ್ನಡ ಉಪನ್ಯಾಸಕ,
ಸರಕಾರಿ ಪದವಿಪೂರ್ವಕಾಲೇಜು ನಡ,
ಬೆಳ್ತಂಗಡಿ ತಾ. ದ.ಕ.ಜಿಲ್ಲೆ.

# ದೃಢೀಕರಣ ಪತ್ರ

ಗಣೇಶರಾಮಚಂದ್ರ ಭಟ್ ಇವರು, 'ಧ್ವನಿ–ವರ್ಣ–ಅಕ್ಷರಮಾಲೆ' (ಕನ್ನಡ–ಸಂಸ್ಕೃತ ತೌಲನಿಕ ಅಧ್ಯಯನ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿ.ಹೆಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಮಂಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಅಭ್ಯರ್ಥಿಯ ಯಾವುದೇ ಪದವಿಗಾಗಲೀ ಇಲ್ಲವೆ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 01–08–2011

ಸ್ಥಳ: ಉಜಿರೆ.

ಡಾ. ಮಹಾಬಲಭಟ್ ಈ.,
ಉಪಪ್ರಾಂಶುಪಾಲರು ಹಾಗೂ ಮುಖ್ಯಸ್ಥರು,
ಸಂಸ್ಕೃತವಿಭಾಗ, ಎಸ್.ಡಿ.ಎಂ. ಕಾಲೇಜು ಉಜಿರೆ,
ಬೆಳ್ತಂಗಡಿತಾಲೂಕು, ದ.ಕ. ಜಿಲ್ಲೆ.

# ಪರಿವಿಡಿ

Ω____ ____Ω____ ____Ω

# ಅಧ್ಯಾಯ 1 : ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ.

## 1.1. ಅಧ್ಯಯನದ ಉದ್ದೇಶ.

ಜೀವನದ ಪರಮೋಚ್ಚವಾದ ಆಸ್ತಿ ಭಾಷೆ. ಭಾಷೆಯನ್ನು ಸರಿಯಾಗಿಬಳಸಲು ಕಲಿತಾಗ ಮಾತ್ರ ಆತ ಜೀವನದ ಪಯಣವನ್ನು ಸುಲಭವಾಗಿ ಮಾಡಬಲ್ಲವನಾಗುತ್ತಾನೆ. ಭಾಷೆ ಪರಿಣಾಮಕಾರಿಯಾಗುವುದು, ಸುಲಭವಾಗಿ ಕರಗತವಾಗುವುದು, ಭಾಷೆಯ ಬಳಕೆಯಲ್ಲಿ ಆತ್ಮವಿಶ್ವಾಸಪ್ರಾಪ್ತವಾಗುವುದು ಅದನ್ನು ಶಾಸ್ತ್ರೀಯವಾಗಿ ಅರಿತುಕೊಂಡಾಗ ಮಾತ್ರ. ಭಾಷೆಯನ್ನು ಸರಿಯಾಗಿ ಕಲಿಯುವುದೆಂದರೆ ಕೇವಲ ಪಠ್ಯಪುಸ್ತಕವನ್ನು ತೆಗೆದುಕೊಂಡು ಮಾತ್ರ ಕಲಿಯುವುದಲ್ಲ. ಜೀವನದ ಪಲವಾರು ಸಂದರ್ಭದಲ್ಲಿ ಹಲವಾರುಕಡೆಯಿಂದ ನಾವು ಮಾಹಿತಿ ಸಂಗ್ರಹಿಸಲು ಅವಕಾಶವಿದೆ. ಪಡೆದ ಮಾಹಿತಿಯನ್ನು ನಿತ್ಯಜೀವನದಲ್ಲಿ ನಿರಂತರವಾಗಿ ರೂಢಿಸಿಕೊಳ್ಳುತ್ತಿರಬೇಕಾಗುತ್ತದೆ. ಭಾಷೆಯ ಕಲಿಕೆಗೆ ಶಾಸ್ತ್ರೀಯತೆಯ ಚೌಕಟ್ಟು ಅಗತ್ಯವೇ? ಅಥವಾ ಮಾನವನು ಸಹಜವಾಗಿಯೇ ಹುಟ್ಟನಿಂದ ಭಾಷೆಯನ್ನು ರೂಢಿಸಿಕೊಂಡುಹೋದರೆ ಸಾಕೆ? ಎನ್ನುವ ಮೂಲಭೂತ ಪ್ರಶ್ನೆಯನ್ನು ಎತ್ತಿಕೊಂಡಾಗ ಶಾಸ್ತ್ರೀಯತೆಯ ಚೌಕಟ್ಟು ಅತ್ಯವಶ್ಯ ಎನ್ನಬೇಕಾಗುತ್ತದೆ. ಇಲ್ಲವಾದಲ್ಲಿ ಭಾಷೆಯು ಬಹುಕಾಲ ಬಾಳಿಕೆ ಬರುವುದಿಲ್ಲ. ಭಾಷೆಗೆ ತನ್ನದೇ ಆದ ಚೌಕಟ್ಟಿದ್ದರೆ ಅದು ಭಾಷೆಯು ಸದೃಢವಾಗಿರುವುದರ ಪ್ರತೀಕ. ಅದೊಂದು ಮಾದರಿ ಭಾಷೆಯಾಗಲು ಸಾಧ್ಯವಿದೆ. ಭಾಷಾಪ್ರಗತಿಯಾಗಲೂ ಸಾಧ್ಯವಿದೆ. ಆದ್ದರಿಂದ ಭಾಷೆಗೆ ಶಾಸ್ತ್ರೀಯ ಚೌಕಟ್ಟು ಅಗತ್ಯವೆಂದು ವಾದಿಸಿದರೆ ಭಾಷೆಯು ಶಾಸ್ತ್ರೀಯ ಚೌಕಟ್ಟನ್ನು ಮೀರಿ ಅಂದರೆ ಅವುಗಳಿಲ್ಲದೆಯೂ ಬಳಕೆಯಾಗಬಲ್ಲುದಾಗಿದೆ ಎಂಬುದಕ್ಕೆ ಸಾಕಷ್ಟು ಪುರಾವೆಗಳು ಸಿಗುತ್ತವೆ. ಉದಾಹರಣೆಗೆ ನಾವು ನಿತ್ಯಜೀವನದಲ್ಲಿ ನಮ್ಮ ತಾಯಿಯಿಂದ ಮೊದಲಾಗಿ ಸಹಜವಾಗಿಯೇ ಭಾಷೆಯನ್ನು ರೂಢಿಸಿಕೊಂಡು ಹೋಗುತ್ತೇವೆ. ಯಾವುದೇ ಪದವಿ ಅಥವಾ ಶಿಕ್ಷಣಪಡೆಯದ ಅನಕ್ಷರಸ್ಥವ್ಯಕ್ತಿಯೂ ಕೂಡ ಸುಗಮವಾಗಿಯೇ ಭಾಷೆಯಲ್ಲಿ ವ್ಯವಹರಿಸಬಲ್ಲ. ಶಿಕ್ಷಣಪಡೆದವರಿಗಿಂತಲೂ ಪರಿಣಾಮಕಾರಿಯಾಗಿ ಭಾಷೆಯನ್ನು ಬಳಸಬಲ್ಲವರೂ ಇದ್ದಾರೆ. ಈ ಅಂಶವನ್ನು

ಗಮನಿಸಿದರೆ ಭಾಷೆಗೆ ಶಾಸ್ತ್ರೀಯತೆಯ ಚೌಕಟ್ಟು ಎಷ್ಟರಮಟ್ಟಿಗೆ ಪೂರಕವಾದದ್ದು ಎನ್ನುವುದು ಪ್ರಶ್ನೆಯಾಗಿಯೇ ಉಳಿಯತ್ತದೆ.

ಈ ಮೇಲಿನ ಎರಡು ರೀತಿಯ ಅಭಿಪ್ರಾಯಗಳನ್ನು ಗಮನಿಸಿದಾಗ ಭಾಷೆಗೆ ಶಾಸ್ತ್ರೀಯತೆಯಚೌಕಟ್ಟು ಅಗತ್ಯವಾದದು ಎನ್ನುವವಾದವನ್ನು ಎತ್ತಿಹಿಡಿಯುವುದು ಸೂಕ್ತವಾದುದು. ಶಾಸ್ತ್ರೀಯತೆಯಚೌಕಟ್ಟೆಂದರೆ ಭಾಷೆಯ ಒಳಪದರಗಳಾದ ಧ್ವನಿವ್ಯವಸ್ಥೆ, ಶಬ್ದವ್ಯವಸ್ಥೆ, ವಾಕ್ಯ ಮತ್ತು ಅರ್ಥವ್ಯವಸ್ಥೆಗಳು ಒಂದು ಮಾದರಿ ನೆಲೆಗಟ್ಟಿನಮೇಲೆ ನಿಂತಿರುವಂತದ್ದು. ಯಾವುದೇ ಭಾಷೆಯಾಗಲೀ ಅದು ಒಂದು ಮಾದರೀಗುಣಲಕ್ಷಣಗಳನ್ನು ಹೊಂದಿಲ್ಲ ಎಂದಾದರೆ ಅವು ವಿಭಿನ್ನ ಕವಲುಗಳಾಗಿ ಒಡೆದು ಆಂತರಿಕ ಕಲಹಕ್ಕೆ ಕಾರಣವಾಗಿ ಕಾಲಾಂತರದಲ್ಲಿ ನಶಿಸಿಹೋಗುತ್ತವೆ. ಉದಾಹರಣೆಗೆ ಸಂಸ್ಕೃತ ಭಾಷೆಯನ್ನು ಗಮನಿಸಿದಾಗ ಒಂದು ಮಾದರಿ ಭಾಷಾಚೌಕಟ್ಟಿದೆ. ಸಂಸ್ಕೃತಭಾಷೆಯು ಮೃತಭಾಷೆಯೆಂದು ಕೆಲವರು ಕರೆದರೂ ಅದು ಇಂದಿಗೂ ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿದೆ. ತನ್ನ ಗ್ರಂಥದ ಮೌಲ್ಯವನ್ನು ಎತ್ತಿತೋರಿಸುತ್ತಿದೆ. ಅದೇರೀತಿ ಇಂಗ್ಲೀಷ್ ಭಾಷೆಯನ್ನು ನಾವು ಇಂದು ಹೇರಳವಾಗಿ ಕಲಿಯುತ್ತಿದ್ದೇವೆ, ಬಳಸುತ್ತಿದ್ದೇವೆ. ಆದರೆ ಇಂಗ್ಲೀಷ್ ಭಾಷೆಯನ್ನು ಕಲಿಯುವಾಗ ನಾವು ಅದರ ವ್ಯಾಕರಣದ ಶಿಸ್ತನ್ನು ಕಲಿತುಕೊಂಡು ರೂಢಿಸಿಕೊಳ್ಳುತ್ತೇವೆ. ಅದನ್ನೆ ಕನ್ನಡಕ್ಕೆ ಹೋಲಿಸಿಕೊಂಡಾಗ ತದ್ವಿರುದ್ಧವಾದ ಪರಂಪರೆ. ನಾವು ಬೇರೆ ಭಾಷಾ ಪ್ರಾಂತ್ಯಕ್ಕೆ ಹೋದಾಗ ಆಯಾ ಪ್ರಾಂತ್ಯದ ಭಾಷೆಯನ್ನು ರೂಢಿಸಿಕೊಳ್ಳಲು ಮುಂದಾಗುತ್ತೇವೆಯೇ ಹೊರತು ಕನ್ನಡ ಭಾಷೆಯನ್ನು ಅವರಿಗೆ ರೂಢಿಸಲು ಮುಂದಾಗುವುದಿಲ್ಲ. ಉದಾಹರಣೆಗೆ ನಾವು ನಮ್ಮ ನೆರೆಯ ರಾಜ್ಯವಾದ ತಮಿಳುನಾಡಿಗೆ ಹೋದಾಗ ತಮಿಳು ಭಾಷೆಯನ್ನು ಕಲಿಯಲು ಮುಂದಾಗುತ್ತೇವೆ. ಅದೇ ತಮಿಳಿಗರು ಕರ್ನಾಟಕಕ್ಕೆ ಬಂದರೆ ಅವರು ತಮಿಳು ಭಾಷೆಯಲ್ಲಿಯೇ ವ್ಯವಹರಿಸಲಾರಂಭಿಸುತ್ತಾರೆ. ಬೆಂಗಳೂರಿನಲ್ಲಿರುವ ತಮಿಳು ಮೂಲದವರನ್ನು ಗಮನಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಇನ್ನೊಂದು ದೃಷ್ಟಿಕೋನದಿಂದ ವಿಚಾರಿಸಿದಾಗ ಒಬ್ಬ ಅನಕ್ಷರಸ್ಥನು ಭಾಷೆಯನ್ನು ವ್ಯವರಿಸುವುದಕ್ಕೂ ಒಬ್ಬ ಅಕ್ಷರಸ್ಥನು ಭಾಷೆಯನ್ನು ಬಳಸುವುದಕ್ಕೂ ತುಂಬ ವ್ಯತ್ಯಾಸವಿದೆ. ಆದ್ದರಿಂದ ಭಾಷೆಯ ಪರಿಪೂರ್ಣಕಲಿಕೆಯಲ್ಲಿ ಶಾಸ್ತ್ರೀಯತೆಯಚೌಕಟ್ಟು ಬಹುಮುಖ್ಯವಾದುದಾಗಿದೆ.

ಪ್ರಸ್ತುತ ಕನ್ನಡಭಾಷೆಗೆ ಸಂಬಂಧಿಸಿದಂತೆ ಒಂದು ಮಾದರೀ ಭಾಷಾಮಾದರಿಯ ಅಗತ್ಯ ತುರ್ತಾಗಿದೆ. ಇಂದು ಕನ್ನಡಭಾಷೆಯು ಅಂತಾರಾಜ್ಯಮತ್ತು ಅಂತಾರಾಷ್ಟ್ರೀಯ ಭಾಷೆಗಳ ಪ್ರಭಾವಕ್ಕೊಳಗಾಗಿ ಬಹಳ ಸಂಕಷ್ಟದ ಪರಿಸ್ಥಿತಿಯನ್ನು ಎದುರಿಸುತ್ತಿದೆ. ಉದಾಹರಣೆಗೆ ಕನ್ನಡವು ಉಳಿದ ಯಾವ ಭಾಷೆಗಳೂ ಹೊಂದಿರಲಾರದಂತಹ ಪ್ರಾದೇಶಿಕ ವೈವಿಧ್ಯವನ್ನು ಭಾಷೆಯಲ್ಲಿ ಹೊಂದಿದೆ. ಕರಾವಳಿಕನ್ನಡ, ಮೈಸೂರುಕನ್ನಡ, ಬೆಂಗಳೂರು ಕನ್ನಡ ಹೀಗೆ ಅನೇಕ ಪ್ರಾದೇಶಿಕ ಭಿನ್ನತೆಗಳನ್ನು ಹೆಸರಿಸಬಹುದು. ಈ ರೀತಿಯ ಪ್ರಾದೇಶಿಕ ಪರಂಪರೆಗಳು ಇಂದು ಅತಿಯಾಗಿ ಪ್ರತಿಯೊಂದು ಜಲ್ಲೆಗೂ ಒಂದು ರೀತಿಯ ಭಾಷಾಪ್ರಭೇದಹುಟ್ಟುವ ಮುನ್ಸೂಚನೆಗಳನ್ನು ನೀಡುತ್ತಿವೆ. ಈ ಹಿನ್ನೆಲೆಯಲ್ಲಿ ಕನ್ನಡಭಾಷೆಗೆ ತನ್ನದೇ ಆದ ಒಂದುಮಾದರಿ ಭಾಷಾಚೌಕಟ್ಟು ವಾಸ್ತವದ ಅಗತ್ಯವಾಗಿದೆ. ಇಲ್ಲವಾದರೆ ಮುಂದೊಂದು ದಿನ ಕನ್ನಡ ಭಾಷೆಯು ಸಂಪೂರ್ಣವಾಗಿ ಪರಕೀಯರ ದಾಳಿಗೆ ಅಳಿಯುವುದು ನಿಶ್ಚಿತ. ಪ್ರಾದೇಶಿಕ ಭಿನ್ನತೆಗೆಕಾರಣಗಳು ಅನೇಕ. ಮುಖ್ಯವಾಗಿ ಭಾಷಾರೂಢಿಯಲ್ಲಿ ಮಾದರಿಗಳು ಪ್ರಬಲವಾಗಿಲ್ಲದಿರುವುದು ಕಂಡುಬರುತ್ತದೆ. ಇರುವ ಮಾದರಿಗಳುಕೂಡ ಪ್ರಾದೇಶಿಕ ಭಿನ್ನತೆಯನ್ನು ಪೋಷಿಸುವಂತಿವೆ. 'ಭಾಷೆಯಮಾದರಿ'ಗಳೆಂದರೆ ಭಾಷೆಯನ್ನು ಕಲಿಯುವ ಪ್ರಾರಂಭದಲ್ಲಿ ಯಾವರೀತಿಯಲ್ಲಿ ಕಲಿಯಬೇಕು, ವರ್ಣಮಾಲೆಯಿಂದ ಆರಂಭಿಸಿ, ಧ್ವನಿಗಳ ಉಚ್ಚಾರ, ಅವುಗಳ ಬಳಕೆ, ಶಬ್ದ ರಚನೆ, ವಾಕ್ಯರಚನೆ ಮತ್ತು ಸಂಭಾಷಣೆಗಳನ್ನು ಏಕರೀತಿಯಲ್ಲಿ ಹೇಗೆ ರೂಢಿಸಿಕೊಳ್ಳಬೇಕು ಎಂಬ ಒಂದು ರೀತಿಯ ಆದರ್ಶಸಂಪ್ರದಾಯವನ್ನು ಒಂದು ಭಾಷೆಯು ರೂಢಿಸಿಕೊಂಡಿದ್ದರೆ ಅದು ಆ ಭಾಷೆಯ ಮಾದರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡಭಾಷೆಯನ್ನು ಗಟ್ಟಿಗೊಳಿಸುವ ಕಾರ್ಯ ಆಗಬೇಕಾಗಿದೆ. ಕನ್ನಡಭಾಷೆಯ ಅಭಿವೃದ್ಧಿಗೆ ಈ ತನಕ ಮೌಲ್ಯಯುತವಾದ ಕೃತಿಗಳು, ವ್ಯಾಕರಣಗ್ರಂಥಗಳು, ಭಾಷೆಯಮಹತ್ತ್ವವನ್ನು ಎತ್ತಿತೋರಿಸುವ ಸಾಕಷ್ಟು ಪುಸ್ತಕಗಳು ಬಂದಿವೆ. ಪ್ರಸ್ತುತ ಈ ಮೇಲಿನ ಅಧ್ಯಯನವು ವಿನೂತನವಾಗಿದ್ದು ಭಾಷಾಕಲಿಕೆಯಲ್ಲಿ ಮೂಲಭೂತವಾದ ವರ್ಣಮಾಲೆಯ ಕಲಿಕೆಯ ಕುರಿತು ಸಮಗ್ರವಾದ ಮಾಹಿತಿಯನ್ನು ನೀಡುವುದು ಎಂಬ ಆಶಯಹೊಂದಿದೆ. ಧ್ವನಿಗಳನ್ನು ಉಚ್ಚರಿಸುವಾಗ ಎದುರಾಗಬಹುದಾದ ತೊಂದರೆಗಳನ್ನು ನಿವಾರಿಸುವ ಭರವಸೆಯಿದೆ. ಮುಂದಿನ ಕನ್ನಡ ಪೀಳಿಗೆ ಏಕರೀತಿಯಲ್ಲಿ ವರ್ಣಮಾಲೆಯನ್ನು ಕಲಿಯುವ ಮತ್ತು ರೂಢಿಸಿಕೊಳ್ಳುವ,

ಉಚ್ಚಾರಮಾಡುವ ಪ್ರಯತ್ನಮಾಡುವುದೆಂದು ನಂಬುತ್ತೇನೆ. ಕನ್ನಡ ಭಾಷೆಯ ವಿವಿಧ ಪ್ರಾದೇಶಿಕಭಿನ್ನತೆಯನ್ನು ಹೋಗಲಾಡಿಸಿ ಕನ್ನಡವು ಏಕರೀತಿಯಲ್ಲಿ ಪ್ರಾಥಮಿಕಹಂತದಲ್ಲಿ ಒಂದು ಆದರ್ಶ ಸಂಪ್ರದಾಯವನ್ನು ರೂಡಿಸಿಕೊಳ್ಳುವ ವಿಶ್ವಾಸವಿದೆ. ವರ್ಣಮಾಲೆಯ ವಿವಿಧತೆರನಾದ ವರ್ಣಧ್ವನಿಗಳನ್ನು ಯಾವರೀತಿ ಉಚ್ಚರಿಸ ಬೇಕೆಂಬ ದೃಶ್ಯಗೋಚರ ಚಿತ್ರಗಳಿಂದಾಗಿ ಸುಲಭವಾಗಿ ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲು ಕೇವಲ ಹೊಸಬರಿಗೆ ಮಾತ್ರವಲ್ಲ ಈಗಾಗಲೇ ಭಾಷೆಯನ್ನು ರೂಢಿಸಿಕೊಂಡವರಿಗೂ ಅವಕಾಶವಿದೆ.

## 1.2 ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯಯನವು ಒಟ್ಟು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ಭಾಷೆಯ ಸ್ಥೂಲ ಇತಿಹಾಸದ ಪರಿಚಯವನ್ನು ಮಾಡಿಕೊಡುತ್ತಾ. ಆರಂಭವಾದ ಅಧ್ಯಾಯವು ಪ್ರಾಚೀನ ಸಂಸ್ಕೃತ ಭಾಷೆಯ ಪರಂಪರೆ, ಆಧುನಿಕ ಭಾರತೀಯ/ಸಂಸ್ಕೃತ ಭಾಷೆಯ ಪರಂಪರೆ, ಪ್ರಾಚೀನ/ಹಳಗನ್ನಡ ಭಾಷೆಯ ಪರಂಪರೆ,ಆಧುನಿಕ ಕನ್ನಡ ಭಾಷೆಯ ಪರಂಪರೆ ಭಾಷೆಯ ಉಗಮ/ಉತ್ಪತ್ತಿ ಸಿದ್ಧಾಂತಗಳನ್ನು ಕುರಿತು ಮೊದಲ ಅಧ್ಯಾಯದಲ್ಲಿ ವಿವರಿಸಲಾಗಿದೆ. ಭಾಷೆ ಮತ್ತು ಭಾಷಾವಿಜ್ಞಾನ ಇವುಗಳ ಸಂಬಂಧವನ್ನು ವಿಮರ್ಶಿಸಲಾಗಿದೆ. ಭಾಷೆ ಮತ್ತು ವಿಜ್ಞಾನ, ಭಾಷೆ ಮತ್ತು ಭಾಷಾವಿಜ್ಞಾನ, ವ್ಯಾಕರಣ ಮತ್ತು ಭಾಷಾವಿಜ್ಞಾನ, ಭಾಷಾವಿಜ್ಞಾನ ಮತ್ತು ಧ್ವನಿವಿಜ್ಞಾನ ಗಳ ಕುರಿತು ಎರಡನೇ ಅಧ್ಯಾಯದಲ್ಲಿ ವಿವರಿಸಲಾಗಿದೆ. ಅಧ್ಯಾಯ ಮೂರರಲ್ಲಿ ಧ್ವನಿ, ಅರ್ಥ – ನಾನಾರ್ಥಗಳು, ಧ್ವನಿನಿರ್ಧಾರಕಗಳು, ಧ್ವನಿ ಉಗಮದ ರಹಸ್ಯ ಧ್ವನಿ ಮತ್ತು ಅದರಪ್ರಸಾರ ಕುರಿತು ಚರ್ಚಿಸಲಾಗಿದೆ. ಐದನೇ ಅಧ್ಯಾಯದಲ್ಲಿ ವರ್ಣ ಅವುಗಳ ಅರ್ಥವನ್ನು ವಿವರಿಸಲಾಗಿದೆ. ವರ್ಣ ಮತ್ತು ಅಕ್ಷರ, ವರ್ಣಗಳ ಪರಸ್ಪರ ಸಾದೃಶ್ಯ ವರ್ಣಗಳ ರೂಪವಿಕಾಸಚರಿತ್ರೆ ಮತ್ತು ಗುಣಲಕ್ಷಣಗಳ ಕುರಿತು ವಿವರಿಸಲಾಗಿದೆ. ಅಧ್ಯಾಯ ಆರರಲ್ಲಿ ವರ್ಣಮಾಲೆ/ವರ್ಣಸಮಾಮ್ನಾಯದ ಅರ್ಥ, ವರ್ಣಗಳ ವರ್ಗೀಕರಣ, ಸ್ವರಗಳ ವರ್ಗೀಕರಣ, ವ್ಯಂಜನಗಳ ವರ್ಗೀಕರಣ, ಸಂಸ್ಕೃತದ ವಿವಿಧವರ್ಣಮಾಲೆಗಳು, ಕನ್ನಡದ ವಿವಿಧವರ್ಣಮಾಲೆಗಳನ್ನು ಕುರಿತು ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಯನವು ಧ್ವನಿ, ಅಕ್ಷರ, ವರ್ಣಮಾಲೆ, ಇವುಗಳಿಗೆ ಮಾತ್ರ ಸೀಮಿತವಾಗಿದೆ. ತೌಲನಿಕ ಅಧ್ಯಯನವಾದದ್ದರಿಂದ ಕನ್ನಡ ಮತ್ತು ಸಂಸ್ಕೃತದ

ವ್ಯಾಕರಣ ಸಂಪ್ರದಾಯವನ್ನು ಅನುಸರಿಸಿದೆ. ಪ್ರಾಚೀನಕಾಲದಿಂದಲೂ ಸಂಸ್ಕೃಭಾಷೆಯ ಕೊಡುಗೆ ಕನ್ನಡಭಾಷೆಗೆ ಅಪಾರವಾದದ್ದು, ಅದರಲ್ಲಿಯೂ ಕನ್ನಡಭಾಷೆಯ ವ್ಯಾಕರಣಕ್ಕೊಂದು ಮಾದರಿ ರೂಪುರೇಖೆಯನ್ನು ನೀಡಿದ್ದು ಸಂಸ್ಕೃತ. ಆದ್ದರಿಂದ ವರ್ಣಮಾಲೆಗೆ ಸಂಬಂಧಪಟ್ಟ ಅಧ್ಯಯನದಲ್ಲಿ ಸಂಸ್ಕೃತಭಾಷೆ ಮತ್ತು ಕನ್ನಡಭಾಷೆಗಳನ್ನು ತೌಲನಿಕ ಅಧ್ಯಯನಕ್ಕೊಳಪಡಿಸಲಾಗಿದೆ. ಸಂಸ್ಕೃತದಲ್ಲಿ ಅಸಂಖ್ಯಾತ ವ್ಯಾಕರಣ ಗ್ರಂಥಗಳಿದ್ದರೂ ಮುಖ್ಯವಾಗಿ ಪಾಣಿನಿಯ ಅಷ್ಟಾಧ್ಯಾಯಿ, ಪತಂಜಲಿಮಹಾಭಾಷ್ಯ, ಭಟ್ಟೋಜಿದೀಕ್ಷಿತರ ಸಿದ್ಧಾಂತಕೌಮುದೀ, ಪಾಣಿನಿಯಶಿಕ್ಷಾ ಮತ್ತು ಪ್ರಾತಿಶಾಖ್ಯಗಳನ್ನು ಅಧ್ಯಯನಕ್ಕೆ ಪೂರಕ ಆಧಾರವನ್ನಾಗಿ ಲಕ್ಷಿಸಲಾಗಿದೆ. ಹಳಗನ್ನಡದಲ್ಲಿ ಕೇಶಿರಾಜನ ಶಬ್ದಮಣಿದರ್ಪಣ, ನಾಗವರ್ಮನ ಶಬ್ದಸ್ಮೃತಿ, ಕರ್ನಾಟಕಭಾಷಾಭೂಷಣ ಭಟ್ಟಾಕಳಂಕನ ಶಬ್ದಾನುಶಾಸನ, ಕೃತಿಗಳನ್ನು ಮುಖ್ಯಾಧಾರವಾಗಿ ಲಕ್ಷಿಸಲಾಗಿದೆ. ಐತಿಹಾಸಿಕ ಭಾಷಾವಿಜ್ಞಾನ, ವರ್ಣನಾತ್ಮಕಭಾಷಾವಿಜ್ಞಾನಗಳಿಗೆ ಸಂಬಂಧಪಟ್ಟ ಗ್ರಂಥಗಳಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ.

## 1.3 ಅಧ್ಯಯನ ವಿಧಾನ.

ಪ್ರಸ್ತುತ "ಧ್ವನಿ–ಅಕ್ಷರ–ವರ್ಣಮಾಲೆ" ಅಧ್ಯಯನವು ತುಲನಾತ್ಮಕ ಅಧ್ಯಯನವಾಗಿದೆ. ಕನ್ನಡ ಮತ್ತು ಸಂಸ್ಕೃತಗ್ರಂಥಗಳನ್ನು ತೌಲನಿಕವಾಗಿ ವಿಮರ್ಶಿಸಿ ಆಧಾರಗಳನ್ನು ಕಲೆಹಾಕಲಾಗಿದೆ. ಈ ಅಧ್ಯಯನವು ಚಾರಿತ್ರಿಕವಿಧಾನವನ್ನೂ ಅಳವಡಿಸಿಕೊಂಡಿದೆ. ಸಂಸ್ಕೃತ ಮತ್ತು ಕನ್ನಡ ಭಾಷೆಯ ಪ್ರಾಚೀನ ಕಾಲದ ವ್ಯಾಕರಣಾಂಶಗಳ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅವುಗಳನ್ನು ವೈಜ್ಞಾನಿಕ ವಿಶ್ಲೇಷಣೆಗೊಳಪಡಿಸಲಾಗಿದೆ. ಪ್ರಾಚೀನಕಾಲದಲ್ಲಿ ಧ್ವನಿ ಮತ್ತು ವರ್ಣಮಾಲೆಯನ್ನು ಹೇಗೆ ಬಳಸುತ್ತಿದ್ದರು ಎಂಬ ಆಧಾರದಮೇಲೆ ಇಂದಿನ ಮತ್ತು ಮುಂದಿನ ಪೀಳಿಗೆ ಹೇಗೆ ಬಳಸಬೇಕೆಂಬುದನ್ನು ಸ್ಪಷ್ಟಪಡಿಸಲಾಗಿದೆ. ಚಾರಿತ್ರಿಕ ವಿಧಾನದ ಲಕ್ಷಣಗಳಂತೆ ಇದು ವರ್ಣನಾತ್ಮಕ ಸ್ವರೂಪದ್ದಾಗಿದೆ.

# ಅಧ್ಯಾಯ 2 ಭಾಷೆ

## 2.1 ಭಾಷೆಯ ಸ್ಥೂಲನೋಟ.

ಭಾಷೆ ಮನುಕುಲದ ಜೀವನಾಡಿ. ಮಾನವನ ಜೀವನದ ಮೂಲಭೂತ ಆವಶ್ಯಕತೆಗಳಲ್ಲೊಂದಾಗಿದೆ. ಆದ್ದರಿಂದ ಮಾನವನು ಬೇರೆಯದೇನನ್ನಾದರೂ ಕಲಿಯದಿದ್ದರೂ ಚಿಂತೆಯಿಲ್ಲ ಮೊದಲು ಭಾಷೆಯನ್ನು ಸರಿಯಾಗಿ ವ್ಯವಹರಿಸಲು ಕಲಿಯಬೇಕು. ನಮ್ಮ ಸಕಲವ್ಯವಹಾರವೂ ಸುಗಮವಾಗುವುದು ಭಾಷೆಯಿಂದ ಎನ್ನುವಷ್ಟರಮಟ್ಟಿಗೆ ಭಾಷೆಯ ಅಗತ್ಯತೆಯಿದೆ. ದಂಡಿಯು ತನ್ನ ಕಾವ್ಯಾದರ್ಶ ಗ್ರಂಥದಲ್ಲಿ

"ಇದಮಂಧಂ ತಮಃಕೃತ್ಸ್ನಂ ಜಾಯೇತಭುವನತ್ರಯಂ

ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಂ ನ ದೀಪ್ಯತೇ"[1]

ಎಂದು ಹೇಳಿದ್ದಾನೆ. **ಅಂದರೆ ಶಬ್ದಶಾಸ್ತ್ರವೆಂಬ ದೀಪವು ಮೂರುಲೋಕಗಳಲ್ಲಿ ವ್ಯಾಪಿಸದೇ ಇದ್ದಿದ್ದರೆ ಎಲ್ಲೆಡೆ ಕೇವಲ ಕತ್ತಲೆಯೇ ಕವಿದಿರುತ್ತಿತ್ತು.** ಅರ್ಥಾತ್ ಮಾನವಸಮಾಜವು ಅಜ್ಞಾನದಿಂದ ಕೂಡಿರುತ್ತಿತ್ತು. ಇತರ ಪ್ರಾಣಿಗಳಂತೆ ಮಾನವ ಒಂದು ಸಾಮಾನ್ಯ ಪ್ರಾಣಿಯಂತಿರುತ್ತಿದ್ದ. ಭಾಷೆಯನ್ನುಕಲಿಯುವುದೆಂದರೆ ಅದರ ವ್ಯಾಕರಣವನ್ನು ಕಲಿಯಬೇಕು ಎಂಬುದು ಪ್ರಾಚೀನವೈಯಾಕರಣಿಗಳ ಅಭಿಮತವಾಗಿತ್ತು. ಹಾಗಾಗಿಯೇ ನಮ್ಮಹಿರಿಯರು ಹೇಳಿದ್ದು

'ಯದ್ಯಪಿ ಬಹುನಾಧೀಷೇ ತಥಾಪಿ ಪಠ ವ್ಯಾಕರಣಂ'.[2]

(ಅಂದರೆ ಮಗು, ಬಹಳಷ್ಟು ಕಲಿಯಲು ಸಾಧ್ಯವಾಗದಿದ್ದರೂ ಚಿಂತೆಯಿಲ್ಲ. ವ್ಯಾಕರಣವನ್ನಾದರೂ ಕಲಿ ಎಂದು ಅರ್ಥ.) ವ್ಯಾಕರಣದ ಅಧ್ಯಯನಕ್ಕೆ ಬಹುಮಹತ್ತ್ವದ

---

[1] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 16ರಲ್ಲಿ ಎರಡನೇ ಶ್ಲೋಕ. ಇದು ದಂಡಿಯ ಕಾವಾದರ್ಶದಲ್ಲಿ ಬರುವ ಶ್ಲೋಕ.

[2] ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ ಪೀಠಿಕಾ ಭಾಗ ಪುಟ ಸಂಖ್ಯೆ :1 ಮೊದಲನೆಯ ಸಾಲು.

ಸ್ಥಾನವಿತ್ತಿನ್ನುವುದು ಗೋಚರವಾಗುತ್ತದೆ. ವ್ಯಾಕರಣಶಾಸ್ತ್ರದ ಮಹತ್ತ್ವದಬಗ್ಗೆ ಪಾಣಿನಿಯು ತನ್ನ ಶಿಕ್ಷಾಗ್ರಂಥದಲ್ಲಿ

ಛಂದಃ ಪಾದೌತು ವೇದಸ್ಯ ಹಸ್ತೌ ಕಲ್ಪೋಽಥ ಪಠ್ಯತೇ ।
ಜ್ಯೋತಿಷಾ ಮಯನಂ ಚಕ್ಷುಃ ನಿರುಕ್ತಂ ಶ್ರೋತ್ರಮುಚ್ಯತೇ॥
ಶಿಕ್ಷಾ ಘ್ರಾಣಂತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಂ।
ತಸ್ಮಾತ್ ಸಾಂಗಮಧೀತ್ಯೈವ ಬ್ರಹ್ಮಲೋಕೇ ಮಹೀಯತೇ॥[3]

"ವೇದಕ್ಕೆ ಛಂದಸ್ಸು ಕಾಲು, ಕಲ್ಪ ಕೈ, ಜ್ಯೋತಿಷ್ಯ ಕಣ್ಣು, ನಿರುಕ್ತ ಕಿವಿ, ಶಿಕ್ಷಾ ಮೂಗು, ವ್ಯಾಕರಣ ಮುಖ ಇದ್ದಂತೆ ಎಂದು ಅರ್ಥ. ಸಾಂಗ (ಈ ಮೇಲಿನ ಆರು ಅಂಗಗಳು ಶಿಕ್ಷಾ,ನಿರುಕ್ತ,ಕಲ್ಪ,ಜ್ಯೋತಿಷ್ಯ,ಛಂದಸ್ಸು,ವ್ಯಾಕರಣ) ವೇದಾಧ್ಯಯನಮಾಡಿ ಬ್ರಹ್ಮಲೋಕದಲ್ಲಿ ಉನ್ನತಪದವಿ ಪಡೆಯಬೇಕು" ಎಂದು ಹೇಳಿದ್ದಾನೆ. ವ್ಯಾಕರಣವನ್ನು ಮಾನವನ ಮುಖಭಾಗಕ್ಕೆ ಹೋಲಿಸಿರುವುದು ಅತ್ಯಂತ ಸೂಕ್ತವಾಗಿದೆ. ಮುಖಭಾಗವು ಮಾನವನ ಪ್ರಸನ್ನತೆಯ ಸಂಕೇತ, ವ್ಯಕ್ತಿತ್ವದ ಪ್ರತಿಬಿಂಬ, ಗುಣಸ್ವಭಾವಗಳ ಪ್ರತೀಕವಾಗಿದೆ. ಪ್ರಪಂಚದಲ್ಲಿ ಹಲವಾರು ಜ್ಞಾನರಾಶಿಗಳಿವೆ. ವ್ಯಾಕರಣವು 'ಜ್ಞಾನರಾಶಿಗಳಲ್ಲಿಯೇ ಅತ್ಯಂತ ಶ್ರೇಷ್ಠವಾದದ್ದಾಗಿದೆ' ಎಂದು ವ್ಯಾಕರಣಕ್ಕೆ ಉನ್ನತಸ್ಥಾನ ನೀಡಲಾಗಿತ್ತು. ಪಾಣಿನಿಯ ವ್ಯಾಕರಣಗ್ರಂಥ 'ಅಷ್ಟಾಧ್ಯಾಯಿ'ಗೆ ಭಾಷ್ಯಬರೆದ ಪತಂಜಲಿಮಹರ್ಷಿಗಳಪ್ರಕಾರ ವೇದದ ಷಡಂಗಗಳಲ್ಲಿ ಮುಖ್ಯವಾದ ಅಂಗ ವ್ಯಾಕರಣವಾಗಿದೆ.

ಪತಂಜಲಿ ತನ್ನ ಮಹಾಭಾಷ್ಯಗ್ರಂಥದಲ್ಲಿ

ಯಸ್ತು ಪ್ರಯುಕ್ತೇ ಕುಶಲೋ ವಿಶೇಷೇ
ಶಬ್ದಾನ್ ಯಥಾವದ್ ವ್ಯವಹಾರಕಾಲೇ
ಸೋಽನಂತಮಾಪ್ನೋತಿ ಜಯಂ ಪರತ್ರ
ವಾಗ್ಯೋಗವಿದ್ ದುಷ್ಯತಿ ಚಾಪಶಬ್ದೈಃ[4]

---

[3] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 48. ಶ್ಲೋಕ 41,42.

ಶಬ್ದಗಳ ಅರ್ಥತಿಳಿದವನು ಜೀವನದ ವ್ಯವಹಾರಗಳಲ್ಲಿ ಅವುಗಳನ್ನು ಸರಿಯಾಗಿ ಬಳಸುತ್ತಾನೆ. ಇಹ-ಪರಗಳಲ್ಲಿ ಉನ್ನತಿಸಾಧಿಸುತ್ತಾನೆ. ಇದಕ್ಕೆ ಬದಲಾಗಿ ಶಬ್ದಾರ್ಥ ಜ್ಞಾನವಿಲ್ಲದವನು ಅಪಶಬ್ದಗಳನ್ನು ಬಳಸಿ ದೋಷಿಯಾಗಿ ದುಃಖಪಡುತ್ತಿರುತ್ತಾನೆ ಎಂದುಹೇಳಿದೆ. ಅದೇರೀತಿ ಇನ್ನೊಂದು ನಂಬಿಕೆಪ್ರಕಾರ

ಏಕಃ ಶಬ್ದಃ ಸಮ್ಯಗ್ ಜ್ಞಾತಃ ಸುಷ್ಠುಪ್ರಯುಕ್ತಃ
ಸ್ವರ್ಗೇಲೋಕೇ ಕಾಮಧುಗ್ ಭವತಿ[5]

"ಒಂದೇಒಂದು ಶಬ್ದವನ್ನು ಸರಿಯಾಗಿಕಲಿತುಕೊಂಡು ಅದನ್ನು ಸರಿಯಾಗಿ ಬಳಸಿದರೆ ಸ್ವರ್ಗಲೋಕವನ್ನು ದೊರಕಿಸಿಕೊಟ್ಟ ಕಾಮಧೇನುವಿನಂತೆ ಸಕಲ ಸುಖಗಳು ಲಭಿಸುತ್ತದೆ" ಎಂದು ಪತಂಜಲಿಮಹರ್ಷಿಗಳು ಹೇಳಿದ್ದಾರೆ.

ಕನ್ನಡದ ಸುಪ್ರಸಿದ್ಧವೈಯಾಕರಣಿ ಕೇಶಿರಾಜ ತನ್ನ ಶಬ್ದಮಣಿದರ್ಪಣ ಗ್ರಂಥದಲ್ಲಿ,

ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ
ಲೋಕಂ ತತ್ತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ[6]

(ವ್ಯಾಕರಣದಿಂದ ಪದವೂ, ವ್ಯಾಕರಣದಪದದಿಂದ ಅರ್ಥವೂ, ಅರ್ಥದಿಂದ ತತ್ತ್ವಜ್ಞಾನವೂ, ತತ್ತ್ವಜ್ಞಾನದಿಂದ ಜೀವನದ ಪರಮಸುಖವಾದ ಮುಕ್ತಿಯು

---

[4] ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",(ಸಂಜ್ಞಾ ಕಾರಕ ಪ್ರಕರಣಗಳು), ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ ಪೀಠಿಕಾ ಭಾಗ ಪುಟ ಸಂಖ್ಯೆ :3 ಮೊದಲನೆಯ ಶ್ಲೋಕ.

[5] 'ಭಗವತ್ಪತಂಜಲಿ-ವಿರಚಿತ ವ್ಯಾಕರಣ ಮಹಾಭಾಷ್ಯ' ಹಿಂದಿ ಅನುವಾದ ಮತ್ತು ವಿವರಣೆ, ಪ್ರಥಮ ನವಾಹ್ನಿಕ.ಚಾರುದೇವ ಶಾಸ್ತ್ರಿ, 3/54 ರೂಪನಗರ ದೆಹಲಿ. ಶ್ರೀ ಜೈನೇಂದ್ರ ಪ್ರೆಸ್ ಏ 45 ನಾರಾಯಣಾ, ದೆಹಲಿ , ಏಳನೇ ಆವೃತ್ತಿ, 2009, ಪುಟ ಸಂಖ್ಯೆ: 36. ಕೆಳಭಾಗದಿಂದ ಏಳನೇ ಸಾಲು.

[6] 'ಕೇಶಿರಾಜದರ್ಪಣ', ವ್ಯಾಖ್ಯಾನ: ಪ್ರೊ। ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಸಂ. ಡಾ. ಪಾದೇಕಲ್ಲು ವಿಷ್ಣುಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ 1999 ಉಡುಪಿ, ಪೀಠಿಕಾ ಭಾಗ ಸೂತ್ರ 10 ಪುಟ ಸಂಖ್ಯೆ : 19.

ದೊರಕುತ್ತದೆ. ಇದುವೇ ತಿಳಿದವರಿಗೆ/ಪಂಡಿತರಿಗೆ ದೊರಕುವ ಫಲವಾಗಿದೆ/ ಪ್ರಯೋಜನವಾಗಿದೆ). ಭಾಷೆಯಬಗ್ಗೆ ಒಬ್ಬ ಸಾಮಾನ್ಯವ್ಯಕ್ತಿಯಲ್ಲಿ ಕೇಳಿದಾಗ ಆತ ಅದೇನು?, ಮಹಾ ಪ್ರಶ್ನೆಯನ್ನು ಕೇಳುತ್ತಿದ್ದೀಯಾ?, ಇದೆಲ್ಲ ಪ್ರಶ್ನೆಯಾ? ಎಂದು ಉದ್ಗರಿಸುತ್ತಾನೆ. 'ಮಾತು' ಎಂಬುದು ಆತನ ಚುಟುಕು ಉತ್ತರವಾಗಿದೆ. ಆದರೆ ಒಬ್ಬ ಭಾಷಾಸಚ್ಚಿಂತಕನುಮಾತ್ರ ತುಂಬಾ ತಲೆಕೆಡಿಸಿಕೊಳ್ಳುತ್ತಾನೆ. ಕಾರಣ ಭಾಷೆಯ ವ್ಯಾಪಕತೆ, ಒಂದುವಾಕ್ಯದಲ್ಲಿ ಹಿಡಿದಿಡಲಾರದಷ್ಟು ವೈಶಾಲ್ಯ. ಭಾಷೆಯ ಮೂಲ ಹುಡುಕಹೊರಟರೆ ಅದು ನದಿಯ ಮೂಲಹುಡುಕಿದಂತಾಗುತ್ತದೆ. ಭಾಷೆಯ ಉಗಮದ ಕುರಿತು ಸಾಕಷ್ಟು ಚರ್ಚೆಗಳು ನಡೆದಿವೆ, ನಡೆಯುತ್ತಿವೆ. ಭಾಷೆ ನಿಂತನೀರಲ್ಲ ಸದಾ ಹರಿಯುತ್ತಿರುವ ಜೀವನದಿ. ಪರಿವರ್ತನೆ ಇದರ ಸಹಜಗುಣ. ಭಾಷೆ ಮನುಷ್ಯನ ಉಸಿರು, ಜೀವ, ಸಂಗಾತಿ, ಚೇತನ, ವ್ಯವಹಾರ ಮಾಧ್ಯಮ ಇತ್ಯಾದಿ. ಯಾವುದೇ ಸಿದ್ಧಾಂತದಬಗ್ಗೆ ಮಾತನಾಡುವುದಾಗಲೀ, ಮಂಡಿಸುವುದಾಗಲೀ, ಅದನ್ನು ಪ್ರಮಾಣೀಕರಿಸುವುದಾಗಲೀ ಮತ್ತು ಅದೇಸತ್ಯಎಂಬುದನ್ನು ಸಾಧಿಸಿ ತೋರಿಸುವುದಾಗಲೀ ಸುಲಭದ ಮಾತಲ್ಲ. ಅಂತಹ ಸಿದ್ಧಾಂತಗಳಲ್ಲಿ ಭಾಷೆಯೂ ಒಂದು. ಮಾನವ ಮೂಲತ: ಒಂದುಪ್ರಾಣಿ. ಈ ಪ್ರಾಣಿಯನ್ನು ಇತರಪ್ರಾಣಿಸಂಕುಲಗಳಿಂದ ಪ್ರತ್ಯೇಕಿಸಿ ತೋರಿಸಿದುದು ಭಾಷೆ. ಆದರೆ ಇತರಪ್ರಾಣಿಗಳಲ್ಲಿ ಭಾಷೆಯಿಲ್ಲವೆಂದಲ್ಲ. ಅವುಗಳಲ್ಲಿಯೂ ಭಾಷೆಯಿದೆ, ಸಂಭಾಷಣೆ ನಡೆಯುತ್ತದೆ. ಉದಾಹರಣೆಗೆ ಒಂದುಹಸುವಿಗೆ ಒಂದುಕೋಲನ್ನು ತೋರಿಸಿದರೆ ಅದು ಓಡುತ್ತದೆ. ಅದೇ ಹಸುವಿಗೆ ಆಹಾರವನ್ನು ನೀಡಲು ಮುಂದಾದರೆ ಅದು ನಮ್ಮನ್ನು ಸಮೀಪಿಸುತ್ತದೆ. ಇಲ್ಲಿ ಪರಸ್ಪರ ಮಾನವ ಮತ್ತು ಹಸುವಿನ ನಡುವೆ ವಿಚಾರವಿನಿಮಯಕ್ರಿಯೆ ನಡೆದಿದೆ. ಅಂದರೆ ಭಾಷಾಕ್ರಿಯೆ ನಡೆದಿದೆ. ಆದರೆ ಮಾನವ ಭಾಷೆ ವಿಭಿನ್ನ, ವ್ಯವಸ್ಥಿತ, ಪರಿವರ್ತನಶೀಲಸ್ವರೂಪ ಮತ್ತು ಚೌಕಟ್ಟುಗಳನ್ನು ಒಳಗೊಂಡಿದೆ. ಆದರೆ ಪ್ರಾಣಿಗಳಭಾಷೆ ಇದಕ್ಕೆ ತದ್ವಿರುದ್ಧವಾದುದು. ಭಾಷೆ ಕೇಳಲು,ಮಾತನಾಡಲು ಬಲುಸುಲಭ. ತಾನು ಬಾಲ್ಯದಿಂದಲೂ ರೂಢಿಸಿಕೊಂಡುಬಂದ ಭಾಷೆಯನ್ನು ವ್ಯವಹರಿಸುವುದು ಕಷ್ಟವಾಗದು. ಪ್ರಾಚೀನಕಾಲದಿಂದಲೂ ಭಾಷೆಯಕುರಿತು ತುಂಬವ್ಯಾಪಕವಾಗಿ ಚರ್ಚೆ ಭಾರತೀಯ ಮತ್ತು ಪಾಶ್ಚಾತ್ಯ ಭಾಷಾಚಿಂತಕರಲ್ಲಿ ನಡೆದಿರುವುದು ಕಂಡುಬರುತ್ತದೆ. ಅವುಗಳಲ್ಲಿ ಪ್ರಮುಖವಾಗಿ ಸಂಸ್ಕೃತ, ಕನ್ನಡ

ವ್ಯಾಕರಣಪಂಡಿತರ ಹಾಗೂ ಆಧುನಿಕಭಾಷಾವಿಜ್ಞಾನಿಗಳ ಅಭಿಪ್ರಾಯಗಳನ್ನು ಈ ಕೆಳಗಿನಂತೆ ಸಂಗ್ರಹಿಸಬಹುದಾಗಿದೆ.

## 2.2 ಭಾಷೆಯ ಇತಿಹಾಸ.

### 2.2.1 ಭಾರತೀಯ ಪರಂಪರೆ / ಸಂಸ್ಕೃತ ಪರಂಪರೆ

ಭಾರತೀಯ ಭಾಷಾಪರಂಪರೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಆರ್ಯಭಾಷಾಪರಂಪರೆಯಾಗಿದೆ. ಆರ್ಯಭಾಷೆಯಲ್ಲಿ ಚಿರಸ್ಥಾಯಿಯಾಗಿ ನಿಂತಿರುವ, ಅಗಾಧ ಜ್ಞಾನರಾಶಿಯನ್ನು ಹೊಂದಿರುವ ಭಾಷೆ ಸಂಸ್ಕೃತಭಾಷೆಯಾಗಿದೆ. ಸಂಸ್ಕೃತಭಾಷೆಯ ಪರಂಪರೆಯನ್ನು ಸ್ಥೂಲವಾಗಿ ಈ ಕೆಳಗಿನ ಎರಡುಹಂತಗಳಲ್ಲಿ ವಿವರಿಸಲಾಗಿದೆ.

**ಪ್ರಾಚೀನ ಭಾರತೀಯ ಆರ್ಯಭಾಷೆಗಳು.**

**ಪ್ರಾಚೀನಭಾರತೀಯ ಆರ್ಯಭಾಷೆಗಳ** ಕಾಲವನ್ನು ಸಾಮಾನ್ಯವಾಗಿ ಕ್ರಿ.ಪೂ.1500ರಿಂದ ಕ್ರಿಸ್ತ.ಪೂ.500ರ ಆಸುಪಾಸಿನಲ್ಲಿ ಎಂದು ಅಂದಾಜಿಸಲಾಗಿದೆ. ಇದರಲ್ಲಿ ಮುಖ್ಯವಾಗಿ ಎರಡುರೂಪಗಳು. ಒಂದು ವೈದಿಕಸಂಸ್ಕೃತ ಮತ್ತು ಇನ್ನೊಂದು ಲೌಕಿಕಸಂಸ್ಕೃತ. ವೈದಿಕಸಂಸ್ಕೃತವನ್ನು ಪ್ರಾಚೀನಸಂಸ್ಕೃತವೆಂದೂ, 'ಛಂದಸ್,'[7] ಎಂದೂ ಕರೆಯುತ್ತಾರೆ. ವೈದಿಕಸಂಸ್ಕೃತದ ಪ್ರಾಚೀನರೂಪ ಋಗ್ವೇದ ಸಂಹಿತೆಯಿಂದಲೇ ದೊರೆಯುತ್ತದೆ. ನಾಲ್ಕು ವೇದಗಳು ಬ್ರಾಹ್ಮಣಗಳು, ಆರಣ್ಯಕಗಳು ಮತ್ತು ಉಪನಿಷತ್ ಗ್ರಂಥಗಳಲ್ಲಿ ವೈದಿಕಸಂಸ್ಕೃತವನ್ನು ಕಾಣಬಹುದಾಗಿದೆ. ಆದರೆ ಈ ಮೇಲಿನ ಎಲ್ಲಗ್ರಂಥಗಳಲ್ಲಿ ಭಾಷೆಯು ಏಕ ರೂಪವಾಗಿಲ್ಲದಿರುವುದು ಕಂಡುಬರುತ್ತದೆ. ಋಗ್ವೇದದ ಮೊದಲ ಅಧ್ಯಾಯದ 10ನೇ ಮಂಡಲಬಿಟ್ಟು ಉಳಿದೆಲ್ಲಮಂಡಲಗಳಲ್ಲಿ

---

[7] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಪ್ರಾಚೀನ ಸಂಸ್ಕೃತದ ಅರ್ಥವಿವರಣೆಯ ಭಾಗದಲ್ಲಿ.

ಬಳಕೆಯಾಗಿರುವ ಭಾಷೆಯನ್ನು ಪರ್ಯಾಪ್ತ ಪ್ರಾಚೀನವೆಂದೂ[8] ಅವೆಸ್ತಾಭಾಷೆಗೆ ತುಂಬಪತ್ತಿರವಾದುದೆಂದೂ ಕರೆಯಲಾಗಿದೆ. ವೈದಿಕಸಂಸ್ಕೃತದಲ್ಲಿ ಮೂರು ರೂಪಗಳಿವೆ. ಉತ್ತರೀರೂಪ, ಮಧ್ಯದೇಶೀಯರೂಪ ಮತ್ತು ಪೂರ್ವೀರುಪ[9] ಎನ್ನುವುದಾಗಿದೆ. ವೈದಿಕ ಸಂಸ್ಕೃತದಧ್ವನಿಗಳನ್ನು ಹಾಗು ಮೂಲಇಂಡೋ-ಯುರೋಪಿಯನ್ ಭಾಷೆಯ ಧ್ವನಿಗಳನ್ನು ಮೊದಮೊದಲು ಪರಸ್ಪರ ಹೋಲಿಸುವದು ಸ್ಪಷ್ಟವಾಗಿ ಗೋಚರವಾಗುತ್ತಿತ್ತು. ನಂತರದ ದಿನಗಳಲ್ಲಿ ಅನೇಕ ಪರಿವರ್ತನೆಗಳು ನಡೆದಿರುದು ಕಂಡುಬರುತ್ತದೆ. ವ್ಯಂಜನಗಳಲ್ಲಿ ಚವರ್ಗ ಮತ್ತು ಟವರ್ಗ ಎರಡು ವರ್ಗಗಳು ಮೂಲದಲ್ಲಿಲ್ಲ ಎನ್ನುವ ವಾದವಿದೆ. ಅವು ಮತ್ತೆ ಪರಸ್ಪರ ಎರಡುಭಾಷೆಗಳ ಹೋಲಿಕೆಯಿಂದ ಪ್ರಾಪ್ತವಾಗಿದೆ. ಪ್ರಾಚೀನ ಭಾರತೀಯ ಆರ್ಯಭಾಷೆಯ ಕೆಲವು ರಚನಾತ್ಮಕವಿಶೇಷತೆಗಳು ಈಕೆಳಗಿನಂತಿವೆ.

1 ಭಾಷೆಯು ಶ್ಲಿಷ್ಟ ಮತ್ತು ಯೋಗಾತ್ಮಕವಾಗಿತ್ತು. ಉದಾಹರಣೆಗೆ ವೇದಗಳನ್ನು ಉದಾಹರಿಸಬಹುದಾಗಿದೆ.

1 ಶಬ್ದಗಳಲ್ಲಿ ಧಾತುಗಳ ಅರ್ಥ ಸುಭದ್ರವಾಗಿತ್ತು. ಲೌಕಿಕಸಂಸ್ಕೃತ ಬಂದಂತೆಲ್ಲ ಭಾಷೆಯು ಅಲ್ಪಸ್ವಲ್ಪ ವ್ಯತ್ಯಾಸಗೊಳ್ಳುತ್ತಬಂದಿರಬೇಕು.

2 ವೈದಿಕಸಂಸ್ಕೃತದಲ್ಲಿ ರೂಪರಚನೆಯು ಅತ್ಯಂತ ಜಟಿಲವಾಗಿತ್ತು. ಭಾಷೆ ಲೌಕಿಕ ಸಂಸ್ಕೃತದಷ್ಟು ನಿಯಮಬದ್ಧವಾಗಿರಲಿಲ್ಲ. ನಿಯಮರೂಪಿಸಿದವರಲ್ಲಿ ಪಾಣಿನಿಯ ಕೊಡುಗೆ ಮಹತ್ತರವಾದದ್ದು. ಉದಾಹರಣೆಗೆ 'ಅಷ್ಟಾಧ್ಯಾಯಿ' ವ್ಯಾಕರಣ ಗ್ರಂಥ.

3 ವೈದಿಕಸಂಸ್ಕೃತವು ಸಂಗೀತಾತ್ಮಕ ಭಾಷೆಯನ್ನುಹೊಂದಿತ್ತು ಮತ್ತು ಸ್ವರಾಘಾತವಿತ್ತು. ಉದಾಹರಣೆ ಉದಾತ್ತ,ಅನುದಾತ್ತ,ಸ್ವರಿತಸ್ವರಗಳು ಮತ್ತು ಸಾಮವೇದದಲ್ಲಿಯ ಸಪ್ತಸ್ವರಗಳು.

---

[8]ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಭೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಪ್ರಾಚೀನ ಸಂಸ್ಕೃತದ ಅರ್ಥವಿವರಣೆಯ ಭಾಗದಲ್ಲಿ.

[9] ಅದೇ.

4 ಲೌಕಿಕಸಂಸ್ಕೃತಕ್ಕೆ ಬಂದತೆಲ್ಲ ಸಂಗೀತಾತ್ಮಕತೆ ಕಡಿಮೆಯಾಗುತ್ತಾಬಂತು. ಸ್ವರಾಘಾತದಲ್ಲಿಯೂ ಸಾಕಷ್ಟು ವ್ಯತ್ಯಾಸವಾಗಿದೆ.

5 ಮೂರುಲಿಂಗ ಮತ್ತು ಮೂರುವಚನವ್ಯವಸ್ಥೆಯನ್ನು ಕಾಣಬಹುದಾಗಿದೆ. ವಾಕ್ಯದಲ್ಲಿ ಶಬ್ದಗಳಸ್ಥಾನಗಳು ನಿಶ್ಚಿತವಾಗಿರಲಿಲ್ಲ. ಯಾವ ಸ್ಥಾನಗಳಲ್ಲಾದರೂ ಬರಬಹುದಿತ್ತು.

6 ವೈದಿಕಸಂಸ್ಕೃತದ ಶಬ್ದಭಂಡಾರ ಬಹುತೇಕವಾಗಿ ತತ್ಸಮ ಶಬ್ದಗಳನ್ನು ಹೊಂದಿತ್ತು. ಮತ್ತು ತದ್ಭವವಿದೇಶಿಶಬ್ದಗಳನ್ನು ಹೊಂದಿತ್ತು. ತತ್ಸಮ ಪದವು ಪ್ರಾಕೃತ ಮತ್ತಿತರ ದೇಶ್ಯಭಾಷೆಗಳ ಪ್ರಭಾವಕ್ಕೊಳಗಾಗಿ ಬಳಕೆಯಾಗುತ್ತಿತ್ತು. ಉದಾಃ ತೈತ್ತಿರೀಯ ಉಪನಿಷತ್ತಿನಲ್ಲಿ[10] ಸ್ವರ್ಗ ಎನ್ನುವದು ಸುವರ್ಗ ಎಂದು ಬಂದಿರುವುದು ಇದಕ್ಕೆ ಸಾಕ್ಷಿಯಾಗಿದೆ. ವಿದೇಶಿಶಬ್ದಕ್ಕೆ ಕಾಲ್ಡಿಯನ್ ಮತ್ತು ದ್ರಾವಿಡಭಾಷೆಯ ಪ್ರಭಾವಕ್ಕೊಳಗಾಗಿ ಕದಲೀ, ನಾಗ, ತಾಂಬೂಲ, ಕುಂಡ ,ತೂಲ, ನೀರ,ದಂಡ ಬಳಕೆಯಾಗಿರುವುದನ್ನು ಉದಾಹರಿಸಬಹುದಾಗಿದೆ.

ಭಾರತವು ನಿರೀಕ್ಷೆಗೂಮೀರಿದ ಅಗಾಧ ಜ್ಞಾನರಾಶಿಗಳನ್ನು ಹೊಂದಿತ್ತು ಎನ್ನಲಡ್ಡಿಯಿಲ್ಲ. ವೇದಗಳು ಭಾರತದಲ್ಲಿ ದೊರೆತ ಮೊತ್ತಮೊದಲ ಗ್ರಂಥರೂಪಿದಾಖಲೆಗಳು. 'ವೇದ' ಎಂಬ ಪದದ ಅರ್ಥ 'ಜ್ಞಾನ' ಎಂದಾಗಿದೆ. ವೇದವು ಭಾರತೀಯರು ಭಕ್ತಿಭಾವಗಳಿಂದ, ಕಟ್ಟುನಿಟ್ಟಾಗಿ ಪಾಲಿಸಲೇಬೇಕಾದ ಉಪಾಸನೆಯಾಗಿತ್ತು. ಆಗಿನ ಸಂದರ್ಭದಲ್ಲಿ ವ್ಯಕ್ತಿಯ ಉದ್ದೇಶ ತಮಸೋಮಾ ಜ್ಯೋತಿರ್ಗಮಯ (ಕತ್ತಲಿನಿಂದ ಬೆಳಕಿನೆಡೆಗೆಸಾಗಿಸು) ಎಂಬುದಾಗಿತ್ತು. ವೈದಿಕವಾಙ್ಮಯವು ವಿಶಾಲವಾದ ಜ್ಞಾನಸಾಗರವಾಗಿದೆ. ಇವು ನಾಲ್ಕು ವೇದಗಳು, ಸಂಹಿತೆಗಳು ಅವುಗಳ ಅಸಂಖ್ಯಾತ ಶಾಖೋಪಶಾಖೆಗಳುಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು, ಪುರಾಣಗಳು ಇತ್ಯಾದಿಗಳು ಸೇರಿಜ್ಞಾನವಲಯಗಳು ವಿಸ್ತರಿಸಿಕೊಂಡಿವೆ. ವೇದದಪ್ರಕಾರ 'ಬ್ರಹ್ಮಮಾತ್ರ ಸತ್ಯ ಮಿಕ್ಕವುಗಳೆಲ್ಲಾ ಮಿಥ್ಯ'[11] ಎನ್ನುವಪರಿಕಲ್ಪನೆಯಿತ್ತು. ಭಾರತವು

---

[10] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಪ್ರಾಚೀನ ಸಂಸ್ಕೃತದ ಅರ್ಥವಿವರಣೆಯ ಭಾಗದಲ್ಲಿ.

[11] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 2 ರಲ್ಲಿ ಎರಡನೇ ಪ್ಯಾರಾ.

ಜ್ಞಾನದಭಂಡಾರವೆಂದು ಕರೆಯಿಸಿಕೊಳ್ಳುವಲ್ಲಿ ಸಂಸ್ಕೃತಭಾಷೆಯ ಕೊಡುಗೆ ಅಪಾರವಾದದ್ದು. ಇಂಡೋ-ಆರ್ಯನ್ ಪರಿವಾರದ ಅತ್ಯಂತ ಪರಿಪೂರ್ಣಭಾಷೆಯೂ ಸಂಸ್ಕೃತಭಾಷೆಯೇ. ಭಾರತದಲ್ಲಿ ಒಂದೊಮ್ಮೆ ಶ್ರೀಮಂತಭಾಷೆ ಎನಿಸಿಕೊಂಡು ರಾಜಮನ್ನಣೆ ಮತ್ತು ದೇವಮನ್ನಣೆ ಪಡೆಯುತ್ತಿದ್ದುದು ಸಂಸ್ಕೃತಭಾಷೆ. ಆಳವಾಗಿ, ಅವಿರತವಾಗಿ ಸಂಸ್ಕೃತವನ್ನು ಅಧ್ಯಯನಮಾಡಿದ ಮ್ಯಾಕ್ಸಮುಲ್ಲರ್ ಮತ್ತಿತರ ಖ್ಯಾತವಿದೇಶಿವಿದ್ವಾಂಸರು ಸಂಸ್ಕೃತಭಾಷೆಯನ್ನು ಅತ್ಯಂತಸತ್ತ್ವಶಾಲಿಯಾಗಿ, ತೌಲನಿಕವಾಗಿ ಪರಿಚಯಿಸಿದ ವಿದೇಶೀಯರಾಗಿದ್ದಾರೆ. ಮಧ್ಯಕಾಲೀನ ಆರ್ಯ ಭಾಷೆಗಳಲ್ಲಿ ಮುಖ್ಯವಾಗಿ ಪ್ರಾಕೃತ, ಪಾಲಿ, ಮತ್ತು ಅಪಭ್ರಂಶ ಭಾಷೆಗಳು ಕಂಡುಬರುತ್ತವೆ. ಇದರ ಕಾಲವನ್ನು ಕ್ರಿಸ್ತಪೂರ್ವ 1000ದಿಂದ ಕ್ರಿಸ್ತ ಪೂರ್ವ 500 ಎಂದು ಅಂದಾಜಿಸಲಾಗಿದೆ. ಪ್ರಾಕೃತದ ಹೇಮಚಂದ್ರ, ಮಾರ್ಕಂಡೇಯ ಮತ್ತು ವಾಸುದೇವ ಮತ್ತಿತರ ವೈಯಾಕರಣಿಗಳು "ಪ್ರಾಕೃತವು ಸಂಸ್ಕೃತ ಭಾಷೆಯಾಗಿರದೆ ಅದರ ತಳಹದಿಯ ಮೇಲೆ ಪ್ರಾಕೃತ ಎನ್ನುವ ಇನ್ನೊಂದು ಭಾಷೆಯರಚನೆಯಾಗಿದೆ"[12] ಎಂದು ವಾದಿಸಿದ್ದಾರೆ. ಆದರೆ ಇನ್ನು ಕೆಲವು ವಿದ್ವಾಂಸರು ಪ್ರಾಕೃತ ಭಾಷೆಯ ಪದರಚನೆಯ ಆಧಾರದಮೇಲೆ ಇದರ ಅರ್ಥ ಪ್ರಾಕ್+ಕೃತ ಎಂದಾಗಿರುವುದರಿಂದ ಸಂಸ್ಕೃತ ಭಾಷೆಗಿಂತಲೂ ಪೂರ್ವದ್ದು[13] ಎಂದು ವಾದಿಸುವವರಿದ್ದಾರೆ.

### 2.2.1.1 ಭಾಷೆ ಮತ್ತು ಆತ್ಮ

ದೇಹ ಸಕ್ರಿಯವಾಗಿರುವುದೇ ಯಾವುದೋ ಒಂದು ಅಗೋಚರಶಕ್ತಿಯಿಂದ ಎನ್ನುವ ನಂಬಿಕೆಯಿದೆ. ಬಹುಶಃ ಆ ಶಕ್ತಿಯನ್ನೇ ನಾನಾಜ್ಞಾನ ಪಿಪಾಸುಗಳು ನಾನಾರೀತಿಯಿಂದ ಕಂಡುಹಿಡಿಯಲು ವಿಫಲರಾಗಿ ತಮ್ಮದೇ ಆದ ಹೇಳಿಕೆಗಳನ್ನು, ಅಭಿಪ್ರಾಯಗಳನ್ನು ನೀಡುತ್ತಿದ್ದಾರೆ. ಕೆಲವರು ದೈವಶಕ್ತಿಯೆಂತಲೂ, ಮೇಧಾಶಕ್ತಿಯೆಂತಲೂ,

---

[12 12] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಪ್ರಾಚೀನ ಸಂಸ್ಕೃತದ ಅರ್ಥವಿವರಣೆಯ ಭಾಗದಲ್ಲಿ.

[13] ಅದೇ

ಮನಶ್ಶಕ್ತಿಯೆಂತಲೂ, ಆತ್ಮಶಕ್ತಿಯೆಂತಲೂ ಹೀಗೆ ಬೇರೆಬೇರೆ ಹೆಸರುಗಳಿಂದ ಕರೆದಿದ್ದಾರೆ. ಪ್ರಾಚೀನಭಾರತೀಯರು ಒಪ್ಪಿದ್ದು ಆತ್ಮಶಕ್ತಿಯೇ ಮಾನವ ದೇಹದ ಚೈತನ್ಯಸ್ವರೂಪಿ ಎಂಬುದಾಗಿತ್ತು. ಆತ್ಮದಸ್ವರೂಪಕ್ಕೂ ಭಾಷೆಯಸ್ವರೂಪಕ್ಕೂ ಸಾದೃಶ್ಯವಿದೆ. ಭಾಷೆಯನ್ನೇ ಸೂಕ್ಷ್ಮವಾಗಿ ಗಮನಿಸಿದಾಗ ಅದುಸ್ಪಷ್ಟವಾಗುತ್ತದೆ. ಉದಾಹರಣೆಗೆ ಆತ್ಮ ರೂಪಹೀನ ಆದರೆ ಕ್ರೀಯಾಶೀಲ. ಭಾಷೆಯೂ ರೂಪಹೀನ ಆದರೆ ಕ್ರೀಯಾಶೀಲ. ಅಕ್ಷರಪದಗಳೆಲ್ಲವೂ ಭಾಷೆಯಲ್ಲ. ಅವು ಭಾಷಾಸಾಧನಗಳುಮಾತ್ರ, ಅವುಗಳಿಲ್ಲದೆಯೂ ಭಾಷೆಯಿದೆ. ಅಂದರೆ ಭಾಷೆಯೆನ್ನುವುದು ಕೇವಲ ಲಿಖಿತ ಅಥವಾ ಮೌಖಿಕರೂಪಗಳಿಗೆ ಮಾತ್ರಸೀಮಿತವಾದದ್ದಲ್ಲ. ಉದಾ: ಪ್ರಾಣಿಗಳೂ ವ್ಯವಹರಿಸುತ್ತವೆ. ಅವುಗಳಿಗೆ ಅಕ್ಷರಜ್ಞಾನವಿಲ್ಲ. ಅಂದರೆ ಭಾಷೆ ಅಕ್ಷರರೂಪಗಳನ್ನು ಮೀರಿದ್ದು. ಆತ್ಮ ಮತ್ತು ಭಾಷೆಯನಡುವಿನ ಸಂಬಂಧವನ್ನು ತುಲನಾತ್ಮಕವಾಗಿ ಹೇಳುವಲ್ಲಿ ಎರಡನೇ ಆಧಾರವೆಂದರೆ ಗೋಚರ-ಅಗೋಚರ ಕುರಿತಾದದ್ದು. ಆತ್ಮ ಹೇಗೆ ಅಗೋಚರವೋ ಹಾಗೆಯೆ ಭಾಷೆಯೂ ಅಗೋಚರ. ಅದೇರೀತಿ ಆತ್ಮ ನಮ್ಮದೇಹಕ್ಕೆ ಚೈತನ್ಯದಾಯಕ ಎಂದು ಭಾವಿಸಿರುವಂತೆ ಭಾಷೆಯೂ ಚೈತನ್ಯದಾಯಕವಾದುದಾಗಿದೆ, ಶಕ್ತಿಸಂಚಾರವಿದೆ. ಅಕ್ಷರಗಳು, ಧ್ವನಿ, ಶಬ್ದ, ವಾಕ್ಯ, ಇವುಗಳು ಭಾಷೆಯಲ್ಲಿ ಬಳಕೆಯಾಗುತ್ತವೆ. ಇವುಗಳಿಗೆ ಒಂದುರೀತಿಯ ಶಕ್ತಿಸಂಚಾರವಾದಾಗಮಾತ್ರ ಅವುಗಳಿಗೆ ಅರ್ಥ ಪ್ರಾಪ್ತವಾಗುತ್ತದೆ. ಅದಕ್ಕೆ ನಮ್ಮಪೂರ್ವಜರು ಭಾಷೆಯನ್ನು ಆತ್ಮಕ್ಕೆ ಹೋಲಿಸಿರುವುದು ಸಾರ್ಥಕವಾಗಿದೆ. ಮಾನವನ ದೇಹದಲ್ಲಿ ಚರ್ಮ, ರಕ್ತ, ನರಗಳು ಇತ್ಯಾದಿಗಳೆಲ್ಲ ಶರೀರದ ಅವಯವಗಳಷ್ಟೆ ಆದರೆ ಇವುಗಳಿಗೆ ಚೈತನ್ಯನೀಡುವ ಶಕ್ತಿಗೆ ಆತ್ಮ ಎನ್ನುವ ರೂಢಿಯಿದೆ. ಹೀಗೆ ಭಾಷೆ ಮತ್ತು ಆತ್ಮ ಪರಸ್ಪರ ಸದೃಶಲಕ್ಷಣಹೊಂದಿವೆ.

## ವೇದಗಳು ಮತ್ತು ಭಾಷೆ

ಪ್ರಾಚೀನರು ಜ್ಞಾನಕ್ಕೆ ಪೂಜ್ಯಸ್ಥಾನನೀಡಿರುವುದು ಕಂಡುಬರುತ್ತದೆ. 'ಜ್ಞಾನಾರ್ಜನೆ' ಶಿಕ್ಷಣದ ಗುರಿಯಾಗಿತ್ತು ಎನ್ನುವುದು ಐತಿಹಾಸಿಕ ಅಧ್ಯಯನದಿಂದ ಕಂಡುಕೊಂಡ

ಸತ್ಯವಾಗಿದೆ. "ನಹಿಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ"[14] ಎಂದು ಭಗವದ್ಗೀತೆಯಲ್ಲಿ ಕೃಷ್ಣನುಹೇಳಿರುವುದೇ ಇದಕ್ಕೆ ಸಾಕ್ಷಿ. ಭಾರತೀಯರು ತಮಸೋಮಾ ಜ್ಯೋತಿರ್ಗಮಯ(ಬೃಹದಾರಣ್ಯಕೋಪನಿಷತ್)[15] ಎನ್ನುವ ಭಾವನೆಯನ್ನು ಹೊಂದಿದ್ದಾರೆ. ವೈದಿಕವಾಙ್ಮಯ ಒಂದು ವಿಶಾಲವಾದ ಜ್ಞಾನದಸಾಗರವಾಗಿದೆ. ನಾಲ್ಕು ವೇದಗಳ ಸಂಹಿತೆಗಳು, ಅವುಗಳ ನಾನಾಶಾಖೆಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು, ಉಪವೇದಗಳು, ಅಂಗ, ಉಪಾಂಗಗಳು ಇತ್ಯಾದಿ ಅಸಂಖ್ಯಾತ ಗ್ರಂಥಗಳಲ್ಲಿ ಅಗಾಧವಾದ ಜ್ಞಾನಪ್ರಪಂಚವೇ ಅಡಗಿದೆ. ಆ ಗ್ರಂಥಗಳ ಅಧಿಕಾಂಶಗಳು ಲುಪ್ತವಾಗಿವೆ. ವೇದಗಳ ಭಾಷೆಯ ಪರಿಪೂರ್ಣತೆಯನ್ನು ಗಮನಿಸಿದರೆ ಯಾವುದೋ ಆಕಸ್ಮಿಕಕ್ಷಣದಲ್ಲಿ ಅವು ಹೊರಹೊಮ್ಮಿಲ್ಲ ಬದಲಾಗಿ ಗಂಭೀರ ಪ್ರಯತ್ನದ ಫಲಶ್ರುತಿ. ಸಾಗರಮಥನದಲ್ಲಿ ಉದ್ಭವವಾದ ಅಮೃತದಂತೆ. ಏಕೆಂದರೆ ಅಷ್ಟೊಂದು ಪರಿಪಕ್ವವಾದ ಭಾಷೆಯಪಾಕ ಬರಬೇಕಾದರೆ ಅಷ್ಟೇ ಸಮರ್ಪಕ ಪ್ರಮಾಣದಲ್ಲಿ ಪರಿಕರಗಳುಬೇಕಲ್ಲವೇ? ವೇದದಪ್ರಕಾರ ಬ್ರಹ್ಮವೊಂದೇ ಸತ್ಯ. 'ಏಕಂ ಸದ್ವಿಪ್ರಾಬಹುಧಾವದಂತಿ'[16] ಒಂದೇ ಬ್ರಹ್ಮನನ್ನು ಬೇರೆಬೇರೆ ಹೆಸರುಗಳಿಂದ ಕರೆಯುತ್ತಾರೆ. ಬ್ರಹ್ಮವು ಅಖಂಡ ಹಾಗೂ ವ್ಯವಹಾರಕ್ಕೋಸ್ಕರ ಅದರ ಉಪಾಧಿಗಳಾದ ಸತ್, ಚಿತ್, ಆನಂದ ಇವುಗಳ ಕಲ್ಪನೆ ಇದೆ. ಇವುಗಳಲ್ಲಿ ಸತ್ ಮತ್ತು ಚಿತ್ ಇವು ರೂಪ ಮತ್ತು ನಾಮ ಅಥವಾ ಬಿಂದು ಮತ್ತು ನಾದದ ಕುರಿತು ಹೇಳುತ್ತದೆ. ನಿಗಮದರ್ಶನಗಳಲ್ಲಿ ನಾಮ ಮತ್ತು ರೂಪ ಹಾಗೆಯೇ ಆಗಮ ದರ್ಶನದಲ್ಲಿ ನಾದ ಮತ್ತು ಬಿಂದುವಿನ ವಿವರವಾದ ಚರ್ಚೆ ನಡೆದಿದೆ. ನಾಮದ ಮಹಿಮೆಯನ್ನು ಕುರಿತು ತುಲಸೀ ಮತ್ತಿತರ ದಾಸರುಗಳು ಹಾಗೂ

---

[14] ಭಗವದ್ಗೀತೆ, ಗೀತಾ ಪ್ರೆಸ್ ಗೋರಖಪುರ, 23ನೇ ಆವೃತ್ತಿ,2009, ನಾಲ್ಕನೇ ಅಧ್ಯಾಯ ಜ್ಞಾನಯೋಗ 38ನೇ ಶ್ಲೋಕ,ಪುಟ 93.

[15] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮೀಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 2 ರಲ್ಲಿ ಒಂದನೇ ಪ್ಯಾರಾ.

[16] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮೀಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 2 ರಲ್ಲಿ ಎರಡನೇ ಪ್ಯಾರಾ.

ನಾದದಬಗ್ಗೆ ಕಬೀರ ಮುಂತಾದ ತಾಂತ್ರಿಕರು ಆಗಾಗ ಗುಣಗಾನ ಮಾಡಿಹಾಡಿದ್ದಾರೆ. ಅವರಹಾಡುಗಳಲ್ಲಿ ನಾಮ ಅಥವಾ ನಾದ ವಾಕ್‌ತತ್ತ್ವವಾಗಿದೆ ಹಾಗೂ ರೂಪ ಅಥವಾ ಬಿಂದು ಅರ್ಥತತ್ತ್ವವಾಗಿದೆ. ಅಲ್ಲಿ ವಾಣಿ/ ಭಾಷಾ ಶಾಸ್ತ್ರದಕುರಿತು ಕೆಲವು ವಿಚಾರಗಳು ಕಂಡುಬರುತ್ತವೆ. ಸಾರ್ಥಕಧ್ವನಿಯೇ ಭಾಷೆ ಎಂದುಹೇಳಿದ್ದಾರೆ. ಆಗಿನಕಾಲದಲ್ಲಿ ಭಾಷಾವಿಜ್ಞಾನವಿತ್ತು ಆದರೆ ಐತಿಹಾಸಿಕದೃಷ್ಟಿಯಿಂದ ಮತ್ತು ತೌಲನಿಕ ದೃಷ್ಟಿಯಿಂದ ಭಾಷಾವಿಶ್ಲೇಷಣಾಕಾರ್ಯನಡೆದಿಲ್ಲ. ವೇದಮತ್ತಿತರ ಶಾಸ್ತ್ರಗ್ರಂಥಗಳ ಸಂರಕ್ಷಣೆಗೋಸ್ಕರ ಶಿಕ್ಷಾ, ನಿರುಕ್ತ, ಕಲ್ಪ, ಛಂದಸ್ಸು, ಜ್ಯೋತಿಷ್ಯ, ವ್ಯಾಕರಣಗ್ರಂಥಗಳು ಬಳಕೆಯಲ್ಲಿದ್ದವು. ಆದರೆ ಈ ಎಲ್ಲಶಾಸ್ರಗಳು ವೈಜ್ಞಾನಿಕತಳಹದಿಯ ಮೇಲೆ ನಿರ್ಮಾಣ ವಾಗಬೇಕಾದರೆ ಅದೆಷ್ಟು ಅಗಾಧಪರಿಶ್ರಮದ ಫಲ ಇರಬಹುದು ಎಂಬುದನ್ನು ವಿಚಾರ ಮಾಡಿದರೆ ಆ ವಿಸ್ಮಯದ ಅರಿವಾಗದಿರದು. ಮತ್ತು ಭಾಷಾಶಾಸ್ತ್ರದ ದೃಷ್ಟಿಯಿಂದ ಸಾಕಷ್ಟು ಆಳವಾದ ಅಧ್ಯಯನ ನಡೆದಿರುವುದು ಕಂಡುಬರುತ್ತದೆ. ವೇದದ ಷಡಂಗಗಳಲ್ಲಿ ವ್ಯಾಕರಣಕ್ಕೆ ಪ್ರಧಾನಸ್ಥಾನ ನೀಡಿರುವುದನ್ನು ಕಂಡರೆ ಭಾಷಾಶಾಸ್ತ್ರದ ಬಗ್ಗೆ ಪ್ರಾಚೀನರು ಕಲ್ಪಿಸಿಕೊಂಡಭಾವನೆ ವ್ಯಕ್ತವಾಗುತ್ತದೆ. ಭಾಷಾಶುದ್ಧಿಯನ್ನು ಹೇಳುವುದೇ ಪ್ರಾಚೀನ ವೈಯಾಕರಣಿಗಳ ಮಹತ್ತರ ಉದ್ದೇಶವಾಗಿತ್ತು. ಸಂಸ್ಕೃತದ ಅಧ್ಯಯನಕ್ರಮದಲ್ಲಿ ಉಚ್ಚಾರಣೆಗೆ ಮಹತ್ವದಸ್ಥಾನವಿತ್ತು, ಈಗಲೂ ಇದೆ. ಅಧ್ಯಯನ ವಿಧಾನ ಮೌಖಿಕವಾಗಿ ಸಾಗುತ್ತಿತ್ತು ಗುರುವಿನ ಧಾಟಿಯಲ್ಲಿ ಉಚ್ಚರಿಸುವುದೇ ಶಿಷ್ಯನ ಆದ್ಯಕರ್ತವ್ಯವಾಗಿತ್ತು. ಭಾಷೆಯ ಅರ್ಥ ಗೌಣವೆಂಬಂತೆ ತೋರಿದರೂ, ಉಚ್ಚಾರಕ್ಕೆ ಮಹತ್ವಕೊಟ್ಟಿರುವುದರಿಂದ ಯಾವವ್ಯಕ್ತಿ ಉಚ್ಚಾರತಪ್ಪುತ್ತಾನೆಯೋ ಆತ ಅಧ್ಯಯನಕ್ಕೇ ಅನರ್ಹ ಎಂಬಪದ್ಧತಿ ರೂಢಿಯಲ್ಲಿತ್ತು. ಮತ್ತು ಅದನ್ನು ಮಹಾಪಾಪವೆಂದು ಭಾವಿಸಲಾಗುತ್ತಿತ್ತು. ಭಾಷೆಗೆ ತುಂಬಗೌರವಯುತವಾದ ಸ್ಥಾನವಿತ್ತು. ಹೇಗೆಬೇಕೋ ಹಾಗೆ ಬೇಕಾಬಿಟ್ಟಿಯಾಗಿ ಭಾಷೆಯನ್ನು ಬಳಸುವಂತಿರಲಿಲ್ಲ. ಅಧ್ಯಯನವಿಧಾನವು ಕಂಠಸ್ಥವಾಗಿ ಒಬ್ಬರಬಾಯಿಂದ ಇನ್ನೊಬ್ಬರಬಾಯಿಗೆ ಸಾಗುತ್ತಿತ್ತು. ಪ್ರಾದೇಶಿಕವಾಗಿ ಅನೇಕ ಭಾಷೆಗಳು ರೂಢಿಯಲ್ಲಿದ್ದವು ಪಾಣಿನಿಯ ಕಾಲದಲ್ಲಯೂ ಅನೇಕ ಗ್ರಾಮ್ಯ ಭಾಷೆಗಳಿರುವುದನ್ನು ಅರಿಯಲಾಗಿದೆ. ಕಾಲಾಂತರದಲ್ಲಿ ಗ್ರಾಮ್ಯಭಾಷೆಗಳೆಲ್ಲ ಸಂಸ್ಕೃತದ ಪ್ರಭಾವದಿಂದ ಶಾಸ್ತ್ರೀಯಚೌಕಟ್ಟನ್ನು ರೂಪಿಸಿಕೊಂಡಿವೆ.

**2.2.1.2. 'ಓಂ' ಕಾರ ಮತ್ತು ಅಥ ಶಬ್ದ**

ಭಾಷೆ ಆರಂಭವಾಗಿರುವುದೇ 'ಓಂ' ಕಾರದ ಮೂಲಕ ಎಂದು ಪ್ರಾಚೀನರು ನಂಬಿದ್ದರು. ಆದ್ದರಿಂದಲೇ ಪ್ರತಿಯೊಂದು ವೇದಮಂತ್ರದ ಆರಂಭದಲ್ಲಿಯೂ ಓಂಕಾರ ಹೇಳುವ ಪದ್ಧತಿ ಇಂದಿಗೂ ವೈದಿಕವಾಙ್ಮಯದಲ್ಲಿ ಚಾಲ್ತಿಯಲ್ಲಿದೆ. 'ಅಥ' ಶಬ್ದ ಮಂಗಳ ಕರವಾಗಿ ಗ್ರಂಥದ ಆರಂಭದಲ್ಲಿ ಬಳಸುವುದನ್ನು ಕಾಣುತ್ತೇವೆ.

ಓಂಕಾರಶ್ಚ ಅಥ ಶಬ್ದಶ್ಚ ದ್ವಾವೇತೌ ಬ್ರಹ್ಮಣಾಪುರಾ
ಕಂಠಂ ಭಿತ್ವಾವಿನಿರ್ಯಾತೌ ತಸ್ಮಾನ್ಮಾಂಗಲಿಕಾ ವುಭೌ[17]

('ಓಂಕಾರ' ಮತ್ತು 'ಅಥ' ಶಬ್ದಗಳೆರಡೂ ಪುಣ್ಯಕರವಾದವು. ಇವೆರಡು ಶಬ್ದಗಳು ಓಂದೆ ಬ್ರಹ್ಮನ ಕಂಠದಿಂದ ಹೊಮ್ಮಿದವುಗಳಾದುದರಿಂದ ಮಾಂಗಲಿಕಗಳು)

ಎಂದು ಉಲ್ಲೇಖವಾದ ವಾಕ್ಯ ಸ್ಪಷ್ಟಗೊಳಿಸುತ್ತದೆ. ಇನ್ನೊಂದು ಮುಖ್ಯ ವಿಚಾರವನ್ನು ಗಮನಿಸಬೇಕು ಅದೆಂದರೆ ಓಂ ಕಾರಕ್ಕಿರುವ ವೈಶಿಷ್ಟ್ಯ ಓಂಕಾರದಲ್ಲಿ ಮೂರು ವರ್ಣಗಳ ಸಂಯೋಗವಿದೆ. ಅ,ಉ,ಮ್ ಇವುಗಳ ಸಂಯುಕ್ತದಿಂದಾಗಿ 'ಓಂ' ರಚಿಸಲ್ಪಟ್ಟಿದೆ. 'ಅ' ವರ್ಣವು ವರ್ಣಮಾಲೆಯ  ಮೊದಲ ಸ್ವರ ಮತ್ತು ಸರ್ವಸ್ವತಂತ್ರಸ್ವರವಾಗಿದೆ. ಸರ್ವ ಸ್ವತಂತ್ರವೆಂದರೆ 'ಅ' ವರ್ಣವನ್ನು ಬಿಟ್ಟು ಉಳಿದೆಲ್ಲ ವರ್ಣಗಳೂ ಕೂಡ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ 'ಅ' ವರ್ಣವನ್ನು ಧರಿಸಿಕೊಂಡೇ ಭಾಷೆಯಲ್ಲಿ ಬಳಕೆಯಾಗುತ್ತವೆ. ಅವುಗಳ ವಿವರವಾದ ವಿಶ್ಲೇಷಣೆ "ಅ ವರ್ಣದವಿಕಾಸ" ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ.

**ಷಡಂಗಗಳು:**

ವೇದಗಳನ್ನು ಹೇಗೆ ಸುರಕ್ಷಿತವಾಗಿಡಬೇಕೆಂಬ ಆಲೋಚನೆಗನುಸಾರ ಸೃಷ್ಟಿಸಿಕೊಂಡ ಆರು ಅಂಗಗಳೇ ಷಡಂಗಗಳು ಎಂದು ಪ್ರಖ್ಯಾತವಾಗಿವೆ.  ಷಟ್+ಅಂಗಗಳು( ಆರು+

---

[17] 'ಭಗವತ್ಪತಂಜಲಿ–ವಿರಚಿತ ವ್ಯಾಕರಣ ಮಹಾಭಾಷ್ಯ' ಹಿಂದಿ ಅನುವಾದ ಮತ್ತು ವಿವರಣೆ, ಪ್ರಥಮ ನವಾಹ್ನಿಕ.ಚಾರುದೇವ ಶಾಸ್ತ್ರಿ, 3/54 ರೂಪನಗರ ದೆಹಲಿ. ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಏಳನೇ ಆವೃತ್ತಿ, 2009, ಪುಟ ಸಂಖ್ಯೆ: 2. ಮೂರನೆಯ ಪ್ಯಾರಾ.

ಅಂಗಗಳು) ಎಂದು ಶಾಬ್ದಿಕವಾಗಿಜಿಡಿಸಬಹುದು. ಈ ಮೇಲೆ ಹೇಳಿದಂತೆ ಶಿಕ್ಷಾ, ವ್ಯಾಕರಣ, ಕಲ್ಪ, ಛಂದಸ್ಸು, ನಿರುಕ್ತ ಹಾಗೂ ಜ್ಯೋತಿಷ್ಯ ಇವೇ ಷಡಂಗಗಳು. ಮರದ ಬೇರಿನಿಂದ ಹಿಡಿದು ಕೊನೆಕೊಂಬೆಯವರೆಗೆ ಹೇಗೆ ಒಂದುಮರ ಪರಸ್ಪರ ಸಂಬಂಧವನ್ನು ಹೊಂದಿರುತ್ತದೋ ಹಾಗೆ ಭಾಷೆಯೆಂಬಮರವು 'ಶಿಕ್ಷಾ'ದಿಂದ ಹಿಡಿದು 'ಜ್ಯೋತಿಷ್ಯ'ದ ವರೆಗೂ ಪರಸ್ಪರ ಅಂತರ್‌ಸಂಬಂಧ ಹೊಂದಿದೆ. ಅವು ವಿದ್ಯಾರ್ಥಿಯ ಅಧ್ಯಯನದ ಮಾನದಂಡವಾಗಿದ್ದುವು. ಷಡಂಗಗಳಲ್ಲಿ ನೇರವಾಗಿ ಭಾಷಾಶಾಸ್ತ್ರಕ್ಕೆ ಸಂಬಂಧಪಟ್ಟ ಶಿಕ್ಷಾ ಮತ್ತು ವ್ಯಾಕರಣ ಗ್ರಂಥಗಳಬಗ್ಗೆ ಈ ಕೆಳಗಿನಂತೆ ಸ್ಥೂಲವಾಗಿ ವಿವರಿಸಲಾಗಿದೆ.

### 2.2.1.3. ಶಿಕ್ಷಾಗ್ರಂಥಗಳು ಮತ್ತು ವ್ಯಾಕರಣಗಳು.

ಶಬ್ದೋಚ್ಚಾರಣೆಯ ಸ್ವರೂಪವನ್ನು ತಿಳಿಸಿಕೊಡುವಶಾಸ್ತ್ರ. "ವರ್ಣಸ್ವರಾದ್ಯುಚ್ಚಾರಣಪ್ರ-ಕಾರೋ ಯತ್ರೋಪದಿಶ್ಯತೇ ಸಾಶಿಕ್ಷಾ"[18] ಅಂದರೆ ವರ್ಣ ಹಾಗು ಸ್ವರಗಳ ಉಚ್ಚಾರಣೆ ಕುರಿತು ಯಾವುದು ಉಪದೇಶಿಸುತ್ತದೋ ಅದು ಶಿಕ್ಷಾ ಗ್ರಂಥವೆಂದು ಕರೆಯಿಸಿ-ಕೊಳ್ಳುತ್ತದೆ. ಪ್ರಾಚೀನವೈಯಾಕರಣಿಗಳು ಭಾಷಾ ಉಚ್ಚಾರಸ್ಪಷ್ಟತೆಗೆ ಮಹತ್ವ ಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಅಲ್ಲದೇ ಪ್ರಾಚೀನ ವಿದ್ಯಾಭ್ಯಾಸಕ್ರಮದಲ್ಲಿ ಅಧ್ಯಯನಕ್ರಮಗಳು ಮೌಖಿಕವಾಗಿ ಒಬ್ಬರಬಾಯಿಂದ ಇನ್ನೊಬ್ಬರಿಗೆ ಸಾಗುತ್ತಿತ್ತು, ಯಾವ ವರ್ಣವನ್ನು ಹೇಗೆ ಉಚ್ಚರಿಸಬೇಕೆಂದು ಶಾಸ್ತ್ರೀಯವಾಗಿ, ಪ್ರಾಯೋಗಿಕವಾಗಿ ಕಲಿಸಲಾಗುತ್ತಿತ್ತು. ಸಾಮವೇದದಲ್ಲಿ ಈ ಕ್ರಮಕ್ಕೆ 'ವರ್ಗ' ಹೇಳಿಕೊಡುವುದು ಎಂದು ಕರೆಯುತ್ತಾರೆ. ಅಂದರೆ ಪ್ರತಿಯೊಂದು ವರ್ಣವನ್ನು ಮೊದಲು ಹೇಳಿದನಂತರ ಅದಕ್ಕೊಂದು ಉದಾಹರಣೆನೀಡಿ ಸಮರ್ಥಿಸುವುದು ಇತ್ಯಾದಿ. ಆಧುನಿಕ ಪರಿಭಾಷೆಯಲ್ಲಿ ಮಗುವು ಕಲಿಯುವಾಗ 'ಅ' ಅಗಸ, 'ಆ' ಆನೆ ಇತ್ಯಾದಿಯಾಗಿ ಕಲಿಯುವುದಿಲ್ಲವೇ?

---

[18] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 1 ಕೆಳಗಡೆಯಿಂದ ಮೂರನೇ ಸಾಲ

ಹಾಗೆ ಪ್ರತಿಯೊಂದು ವರ್ಣವನ್ನು ಉಚ್ಚರಿಸುವುದು ಹೇಗೆ ಎನ್ನುವುದನ್ನು ತಿಳಿಸುವ ಕ್ರಮವನ್ನು 'ವರ್ಗಪಾಠ' ಎಂದು ಕರೆಯಲಾಗುತ್ತಿತ್ತು. ಈ ರೀತಿಯ ಕ್ರಮದಲ್ಲಿ ಅಕ್ಷರಗಳ ಉಚ್ಚಾರಣೆಯ ಬಗ್ಗೆ ಹೇಳಿಕೊಡಲಾಗುತ್ತಿತ್ತು. ವರ್ಣೋಚ್ಚಾರಣೆಯನ್ನು ಸರಿಯಾಗಿ ಕಲಿತುಕೊಂಡಮೇಲೆಯೇ ವೇದಾಧ್ಯಯನವನ್ನು ಆರಂಭಿಸಲಾಗುತ್ತಿತ್ತು. ಶಿಕ್ಷಾ ಎನ್ನುವುದನ್ನು ಸ್ವಾಮಿ ದಯಾನಂದ ಸರಸ್ವತಿಯವರು "ವರ್ಣೋಚ್ಚಾರಣಶಿಕ್ಷಾ"[19] ಎಂದು ಕರೆದಿರುವುದು ಸಾರ್ಥಕವಾಗಿದೆ. ಭಾಷೆಯಬಗ್ಗೆ ಅಷ್ಟೊಂದು ಪ್ರಾಮುಖ್ಯ ಯಾಕೆಂದರೆ 'ಭಾಷೆಯು ಬ್ರಹ್ಮಸೃಷ್ಟಿ' ಎಂಬಭಾವನೆಯಿಂದ. ಭಾಷಾಕಲಿಕೆಯನ್ನು ಪ್ರತ್ಯೇಕವಾಗಿ ಮಾಡಿಸುವುದರ ಉದ್ದೇಶ ಉಚ್ಚಾರ ಸ್ಪಷ್ಟತೆಗಾಗಿಯೇ ಆಗಿದ್ದಿತು. ವೈದಿಕಸಾಹಿತ್ಯದಲ್ಲಿ ಇದಕ್ಕೆ ವಿಶೇಷವಾದ ಸ್ಥಾನವಿದೆ. ಸಂಹಿತಾಕಾಲದತನಕ ಭಾಷಾ ಅಧ್ಯಯನ 'ಕೃಷಿಮಾಡಲು ಭೂಮಿಯನ್ನು ಹದಗೊಳಿಸಿದರೀತಿ'ಯಲ್ಲಿತ್ತು. ಶಿಕ್ಷಾ ಗ್ರಂಥಗಳಲ್ಲಿ ಪಾಣಿನಿಯ ಶಿಕ್ಷಾಗ್ರಂಥಕ್ಕೆ ಮಾತೃಸ್ಥಾನವಿದೆ. ಉಳಿದೆಲ್ಲ ಶಿಕ್ಷಾಗ್ರಂಥಗಳಿಗಿಂತಲೂ ಇದು ಉತ್ಕೃಷ್ಟವಾದ ಶಿಕ್ಷಾಗ್ರಂಥವಾಗಿದೆಯೆನ್ನುವುದನ್ನು ಭಾಷಾವಿದ್ವಾಂಸರು ಸರ್ವಸಮ್ಮತವಾಗಿ ಒಪ್ಪಿಕೊಂಡ ವಿಷಯವಾಗಿದೆ. ಪ್ರತಿಯೊಂದುವರ್ಣದ ಸಶಾಸ್ತ್ರೀಯವಾದ ವಿವರಣೆ ಪಾಣಿನಿಯ ಶಿಕ್ಷಾಗ್ರಂಥದಲ್ಲಿ ಕಂಡುಬರುತ್ತದೆ.

### 2.2.1.4. ಪ್ರಾತಿಶಾಖ್ಯಗಳು.

ಪ್ರಾತಿಶಾಖ್ಯಗಳನ್ನು ಮನಮೋಹನಘೋಷ್ ಎಂಬ ಸಂಸ್ಕೃತವಿದ್ವಾಂಸನು ಸೆಕೆಂಡರಿ ಶಿಕ್ಷಾ[20] ಎಂದು ಕರೆದಿದ್ದಾನೆ. ಭಾಷಾವಿಜ್ಞಾನಿಗಳು ಶಿಕ್ಷಾ ಗ್ರಂಥಗಳನ್ನು ಸಾಮಾನ್ಯಧ್ವನಿ

---

[19] ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ , ಉಪೋದ್ಘಾತ ಭಾಗ ಪುಟ ಸಂಖ್ಯೆ :3, ಕೊನೆಯ ಸಾಲು.

[20] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 61 ರಲ್ಲಿ ಎರಡನೇ ಪ್ಯಾರಾ. ಆರನೆ ಸಾಲು

ವಿಜ್ಞಾನವೆಂದು ಕರೆದಿದ್ದಾರೆ. ಪ್ರಾತಿಶಾಖ್ಯಗಳನ್ನು ಅನ್ವಯಿಕ-ಧ್ವನಿವಿಜ್ಞಾನವೆಂದು[21] ಕರೆದಿದ್ದಾರೆ. ಶಿಕ್ಷಾಗ್ರಂಥಗಳಲ್ಲಿ ಬೇರೆಬೇರೆಶಾಖೆಯ ಧ್ವನಿಗಳ ಅಧ್ಯಯನನಡೆದರೆ ಪ್ರಾತಿಶಾಖ್ಯಗ್ರಂಥಗಳಲ್ಲಿ ಒಂದು ನಿರ್ದಿಷ್ಟಶಾಖೆಯ ಧ್ವನಿಗಳ ವಿಶ್ಲೇಷಣಾಕಾರ್ಯ ನಡೆದಿರುವುದು ಕಂಡುಬರುತ್ತದೆ. ಶಿಕ್ಷಾಗ್ರಂಥಗಳಂತೆ ಅನೇಕ ಪ್ರಾತಿಶಾಖ್ಯ ಗ್ರಂಥಗಳು ಹುಟ್ಟಿಕೊಂಡಿರುವುದು ಕಂಡುಬರುತ್ತದೆ. ಶಿಕ್ಷಾ ಗ್ರಂಥಗಳು ಮೊದಲೋ ಅಥವಾ ಪ್ರಾತಿಶಾಖ್ಯಗ್ರಂಥಗಳು ಮೊದಲು ರಚಿತವಾದವೋ ಎನ್ನುವ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಆದರೆ ಪಾಣಿನಿಯ ಶಿಕ್ಷಾ ಗ್ರಂಥವನ್ನು ಗಮನಿಸಿದರೆ ಪ್ರಾತಿಶಾಖ್ಯ ಗ್ರಂಥಗಳನ್ನು ಶಿಕ್ಷಾಶಾಸ್ತ್ರದ ಮುಂದುವರಿದ ಭಾಗವಾಗಿ ಅರ್ಥೈಸಿಕೊಳ್ಳುವುದೇ ಒಳಿತಾಗಿದೆ. ಶಿಕ್ಷಾಗ್ರಂಥಗಳು ಪ್ರಾತಿಶಾಖ್ಯಗಳಿಗಿಂತ ಮೊದಲೇ ಹುಟ್ಟಿಕೊಂಡವು ಎಂಬುದನ್ನು ಸಮರ್ಥಿಸಬಹುದಾಗಿದೆ. ಯಾವುದೇ ಒಂದು ಶಾಸ್ತ್ರದ ಚೌಕಟ್ಟು ಮೊದಲು ಸಾಮಾನ್ಯತೆಯ ತಳಹದಿಯಮೇಲೆ ರಚನೆಯಾಗುತ್ತದೆ ಅನಂತರ ಅದನ್ನು ಒಂದು ವಿಶಿಷ್ಟವರ್ಗಕ್ಕೆ ಅನ್ವಯಿಸಿಕೊಳ್ಳುತ್ತೇವೆ. ಅದೇರೀತಿ ಶಿಕ್ಷಾಗ್ರಂಥದಲ್ಲಿ ನಿರ್ದಿಷ್ಟವಾಗಿ ಒಂದು ಭಾಷೆಯ ಕಾಲಘಟ್ಟಕುರಿತಾಗಲೀ, ಭಾಷೆಯಕುರಿತಾಗಲೀ ಧ್ವನಿಗಳವಿಶ್ಲೇಷಣಾ ಕಾರ್ಯ ಕಂಡುಬರುವುದಿಲ್ಲ. ಬೇರೆಬೇರೆ ಭಾಷೆಗಳಿಗೆ ಸಾಮಾನ್ಯವಾಗಿ ಅನ್ವಯವಾಗತಕ್ಕ ಧ್ವನಿಗಳವಿಶ್ಲೇಷಣೆ ಕಂಡುಬರುತ್ತದೆ. ಆದರೆ ಪ್ರಾತಿಶಾಖ್ಯಗ್ರಂಥಗಳಲ್ಲಿ ಒಂದು ನಿರ್ದಿಷ್ಟಶಾಖೆ ಅಥವಾ ಕಾಲಘಟ್ಟಕ್ಕೆ ಸೀಮಿತವಾದವಿಶ್ಲೇಷಣೆಯನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಶಿಕ್ಷಾ ಗ್ರಂಥಗಳು ಪ್ರಾತಿಶಾಖ್ಯಗ್ರಂಥಗಳಿಗಿಂತಲೂ ಪೂರ್ವದವಾಗಿವೆ.

### 2.2.2. ಆಧುನಿಕ ಭಾರತೀಯ/ಸಂಸ್ಕೃತ ಭಾಷೆಯ ಪರಂಪರೆ.

ಸಂಸ್ಕೃತವು ಭಾರತೀಯ ಆರ್ಯಭಾಷೆಯ ನವೀನತಮ ರೂಪವಾಗಿದೆ, ಇದು ಕ್ರಿಸ್ತಪೂರ್ವ 1000 ದಿಂದ ಆರಂಭವಾಗಿ ಇಂದಿನ ತನಕ ಬಳಕೆಯಾಗುತ್ತಿರುವ ಭಾಷೆಯಾಗಿದೆ. ಈ ಅವಧಿಯ ಭಾಷೆಗಳಲ್ಲಿ ಅಪಭ್ರಂಶದ ವಿವಿಧರೂಪಗಳು ಬಳಕೆಯಾಗಿವೆ. ಆಧುನಿಕ ಭಾರತೀಯ ಭಾಷೆಗಳಲ್ಲಿ ಪಂಜಾಬಿ, ಸಿಂಧಿ, ಗುಜರಾತಿ, ಹಿಂದಿ, ಮರಾಠಿ,ಉಡಿಯಾ,

---

[21] ಅದೇ, ಏಳನೇ ಸಾಲು.

ಅಸಾಮಿ, ಬಂಗಾಲಿ, ಸಿಂಹಳಿ, ನೇಪಾಲಿ ಇತ್ಯಾದಿ. ಪ್ರಾಂತೀಯವಾಗಿ ಹುಟ್ಟಿಕೊಂಡ ಆಧುನಿಕ ಆರ್ಯಭಾಷೆಗಳು ಆಧುನಿಕ ಭಾರತದಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಪ್ರಮುಖಭಾಷೆಗಳಾಗಿ ರೂಪಿತವಾಗಿದೆ. ಉದಾಹರಣೆಗೆ ಮಹಾರಾಷ್ಟ್ರದಲ್ಲಿ ಮರಾಠಿ, ಗುಜರಾತದಲ್ಲಿ ಗುಜರಾತಿ,ಪಂಜಾಬಿನಲ್ಲಿ ಪಂಜಾಬಿ ಭಾಷೆಗಳು ಬಳಕೆಯಲ್ಲಿವೆ.

**2.2.3. ಪ್ರಾಚೀನ/ಹಳಗನ್ನಡ ಭಾಷೆಯ ಪರಂಪರೆ.**

ಕನ್ನಡದಲ್ಲಿ ಈ ವರೆಗಿನ ಸಂಶೋಧನೆಗಳ ಪ್ರಕಾರ ದೊರೆತ ಮೊದಲ ಲಿಖಿತದಾಖಲೆ ಹಲ್ಮಿಡಿಶಾಸನ. ಕ್ರಿ.ಶ.ಸುಮಾರು 450ನೇ ಇಸ್ವಿಯಲ್ಲಿ ದೊರೆತಿದೆ. ಈ ಶಾಸನದಲ್ಲಿ ಸಂಸ್ಕೃತ ಭೂಯಿಷ್ಠವಾದ ಕನ್ನಡಲಿಪಿಯಿದೆ. ಆದರೆ ಈ ಶಾಸನದಲ್ಲಿ ವ್ಯಾಕರಣವಿಷಯ ಕುರಿತಾದ ಶಾಸನವಿಲ್ಲ. ಆನಂತರ ಸುಮಾರು 400 ವರ್ಷಗಳ ಅವಧಿಯಲ್ಲಿ ಕನ್ನಡಗ್ರಂಥ ರಚನೆಯಾಗಿದ್ದರೂ ಯಾವ ಗ್ರಂಥವೂ ದೊರಕದೆ ಇರುವುದು ನಮ್ಮದೌರ್ಭಾಗ್ಯವೇ ಸರಿ. 9ನೇ ಶತಮಾನದ ಕವಿರಾಜಮಾರ್ಗ ಕನ್ನಡದಲ್ಲಿ ದೊರೆತ ಮೊದಲಗ್ರಂಥವಾಗಿದೆ. ಅದು ಅಲಂಕಾರಗ್ರಂಥವಾದರೂ ಆರಂಭದಭಾಗದಲ್ಲಿ 'ದೋಷಾನುವರ್ಣನನಿರ್ಣಯ' ಎಂಬ ಭಾಗದಲ್ಲಿ ಭಾಷೆಯಕುರಿತಾದ ಹೇಳಿಕೆಗಳನ್ನು ಕಾಣುತ್ತೇವೆ ಕನ್ನಡಸಾಮ್ರಾಜ್ಯದ ವಿಸ್ತಾರ ಅದರಸ್ಥಾನಮಾನದ ಪರಿಚಯ ನಮಗಾಗುತ್ತದೆ. ಆದಾಗ್ಯೂ ವರ್ಣಮಾಲೆ, ಧ್ವನಿ ಮತ್ತಿತರ ಭಾಷಾಘಟಕಗಳ ವಿವರವಾದ ಅಧ್ಯಯನ ಕವಿರಾಜಮಾರ್ಗದಲ್ಲಿಲ್ಲ. ನಮಗೆ ದೊರೆತ ಮೊದಲವ್ಯಾಕರಣಗ್ರಂಥ ನಾಗವರ್ಮನ 'ಕರ್ನಾಟಕಭಾಷಾಭೂಷಣ' ಈತನದೇ ಆದ 'ಶಬ್ದಸ್ಮೃತಿ'ಯ ಪ್ರಸ್ತಾವನಾ ಭಾಗದಲ್ಲಿ ವ್ಯಾಕರಣಾಂಶಗಳನ್ನು ಪ್ರಸ್ತಾಪಿಸಿದ್ದಾನೆ. ಈತ ಕನ್ನಡವ್ಯಾಕರಣ 'ಕರ್ನಾಟಕಭಾಷಾಭೂಷಣ'ವನ್ನು ಸಂಸ್ಕೃತ ಲಿಪಿಯಲ್ಲಿ ಬರೆದನು. ಕನ್ನಡವ್ಯಾಕರಣವನ್ನು ಕನ್ನಡದಲ್ಲೇ ಮೊತ್ತಮೊದಲಬಾರಿಗೆ ಬರೆದ ಕೀರ್ತಿ ಕೇಶಿರಾಜನಿಗೆ ಸಲ್ಲುತ್ತದೆ. ಈತ ತನ್ನ 'ಶಬ್ದಮಣಿದರ್ಪಣ' ಎನ್ನುವ ಗ್ರಂಥದಲ್ಲಿ ಕನ್ನಡ ಭಾಷೆಯ ವ್ಯಾಕರಣವನ್ನು ಸಂಸ್ಕೃತದ ಮಾದರಿಯಲ್ಲಿ ಬರೆದು ಕನ್ನಡದ ವೈಶಿಷ್ಟ್ಯವನ್ನು ಕುರಿತು ಹೇಳಿರುವುದನ್ನು ಗಮನಿಸಬಹುದಾಗಿದೆ. ಕನ್ನಡ ಭಾಷೆಯ ವ್ಯಾಕರಣ, ಇತಿಹಾಸ ಗಮನಿಸಿದರೆ ಸಂಸ್ಕೃತಕ್ಕಿಂತ ತುಸುಭಿನ್ನವಾಗಿದೆ. ವೇದಗಳು ಮೊದಲುಹುಟ್ಟಿ ಆನಂತರ ಅದರ ಆರು ಅಂಗಗಳಾದ ಶಿಕ್ಷಾ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ, ಹಾಗು ಕಲ್ಪ ಗಳು ಹುಟ್ಟಿಕೊಂಡವು. ಅಂದರೆ

ಸಾಹಿತ್ಯಸೃಷ್ಟಿಯಾದಮೇಲೆ ಅದಕ್ಕೆಸಂಬಂಧಪಟ್ಟ ಶಾಸ್ತ್ರಗ್ರಂಥಗಳು ಹುಟ್ಟಿಕೊಂಡವು. ಸಂಸ್ಕೃತದಲ್ಲಿ ವ್ಯಾಕರಣನಿರ್ಮಾಣಕ್ಕೆ ಪೂರ್ವಭಾವಿಯಾಗಿ ಶಿಕ್ಷಾ ಮತ್ತು ಶಬ್ದ ನಿರ್ವಚನಾಶಾಸ್ತ್ರವಾದ ನಿರುಕ್ತ ಹುಟ್ಟಿಕೊಂಡವು. ಪಾಣಿನಿಗಿಂತ ಪೂರ್ವದಲ್ಲಿಯೇ ವೈಯಾಕರಣಿಗಳಿದ್ದರು ಎಂಬುದಕ್ಕೆ ಪಾಣಿನಿಯಲ್ಲಿಯೇ ಸಾಕಷ್ಟು ಆಧಾರಗಳಿವೆ. ವ್ಯಾಕರಣಕ್ಕೆಸಂಬಂಧಪಟ್ಟ ಪರಿಭಾಷೆಯ ಒಂದುಭಾಗ ಪಾಣಿನಿಗಿಂತ ಪೂರ್ವದಲ್ಲಿಯೇ ರೂಪಗೊಂಡಿತ್ತು ಹಾಗೆಯೇ ಕನ್ನಡದಲ್ಲಿ ಇಂತಹ(ಶಿಕ್ಷಾ,ನಿರುಕ್ತ,ವ್ಯಾಕರಣ,ಛಂದಸ್ಸು, ಜ್ಯೋತಿಷ್ಯ ಹಾಗು ಕಲ್ಪಗಳು) ಒಂದು ವಿಕಾಸಕ್ರಮ ರೂಪುಗೊಂಡಿಲ್ಲದಿರುವುದು ಕಂಡುಬರುತ್ತದೆ.

### 2.2.4. ಆಧುನಿಕ ಕನ್ನಡ ಭಾಷೆಯ ಪರಂಪರೆ.

ಪ್ರಾಚೀನಕಾಲದ ಕನ್ನಡಭಾಷೆಯು ಸಂಸ್ಕೃತಭಾಷೆಯ ಪ್ರಭಾವಕ್ಕೆ ಒಳಗಾದರೆ ಆಧುನಿಕ ಕನ್ನಡ ಭಾಷೆಯು ಇಂಗ್ಲೀಷ್ ಮತ್ತಿತರ ವಿದೇಶಿ ಭಾಷೆಗಳ ಪ್ರಭಾವಕ್ಕೊಳಗಾಗಿದೆ. ಅನ್ಯಭಾಷಾ ಪದಗಳೂ ಸ್ವಂತ ಕನ್ನಡಭಾಷಾ ಪದಗಳೆಂಬಂತೆ ಇಂದು ಬಳಕೆಯಾಗುತ್ತಿವೆ. ಕನ್ನಡಭಾಷೆಯು ಪಾಚೀನ ಕಾಲದಲ್ಲಿ ಸಂಸ್ಕೃತಭಾಷೆಯ ಪ್ರಭಾವಕ್ಕೆ ಒಳಗಾಗುವುದಕ್ಕೂ ಆಧುನಿಕಕಾಲದಲ್ಲಿ ಇಂಗ್ಲೀಷಿನ ಪ್ರಭಾವಕ್ಕೆ ಒಳಗಾಗುವುದಕ್ಕೂ ಬಹಳವ್ಯತ್ಯಾಸವಿದೆ. ಪ್ರಾಚೀನಕಾಲದಲ್ಲಿ ಸಂಸ್ಕೃತ ಭಾಷೆಯ ಪ್ರಭಾವಕ್ಕೆ ಒಳಗಾದಾಗ ಅಲ್ಲಿಯ ವ್ಯಾಕರಣ ಮತ್ತು ಶಬ್ದಭಂಡಾರವನ್ನು ಅನುಸರಿಸಿದರೆ ಇಂದುನಾವು ಇಂಗ್ಲೀಷ್ ಭಾಷೆಯ ಶಬ್ದಭಂಡಾರವನ್ನು ಕನ್ನಡವ್ಯಾಕರಣ ಚೌಕಟ್ಟಿನೊಳಗೆ ಬಳಸುತ್ತಿದ್ದೇವೆ. ಉದಾಹರಣೆಗೆ 'ಓಫೀಸ್' ಎಂಬ ಇಂಗ್ಲೀಷ್‌ಪದವನ್ನು 'ಆಫೀಸ್' ಎಂದು ಉಚ್ಚರಿಸುತ್ತೇವೆ. ಅದೇರೀತಿ 'ಪೋಸ್ಟ್' ಎನ್ನುವುದನ್ನು 'ಪೋಸ್ಟು' ಎಂದು ಕನ್ನಡ ವಿಭಕ್ತಿ ಸಹಿತವಾಗಿ ಬಳಸುತ್ತೇವೆ. ಪ್ರಾಚೀನಕಾಲದಲ್ಲಿ ಸಂಸ್ಕೃತಭಾಷೆಯ ಪ್ರಭಾವಕ್ಕೆ ಒಳಗಾದಾಗ ಕನ್ನಡಭಾಷೆಯು ಶ್ರೀಮಂತಗೊಂಡರೆ ಇಂದು ಇಂಗ್ಲೀಷಿನ ಪ್ರಭಾವ ಕ್ಕೊಳಗಾಗಿ ಕನ್ನಡಭಾಷೆಯು ತನ್ನ ಶ್ರೀಮಂತಿಕೆಯನ್ನು ಕಳೆದುಕೊಳ್ಳುತ್ತಿರುವುದು ಕಂಡುಬರುತ್ತದೆ.

### 2.3 ಭಾಷೆಯ ಉದ್ಗಮ/ಉತ್ಪತ್ತಿ ಸಿದ್ಧಾಂತಗಳು.

'ಭಾಷೆ'ಯ ಉಗಮದ ಕುರಿತು ಒಂದುವಾಕ್ಯದಲ್ಲಿ ಗರ್ಭೀಕರಿಸುವುದು ಕಷ್ಟಸಾಧ್ಯವಾದ ಮಾತು ಅದಕ್ಕಾಗಿಯೇ ಅನೇಕ ಭಾಷಾವಿಜ್ಞಾನಿಗಳು ವೈಯಾಕರಣಿಗಳು ತಮ್ಮದೇ ಆದ ರೀತಿಯಲ್ಲಿ ಹೇಳಿಕೆಗಳನ್ನು ನೀಡಿದ್ದಾರೆ. ಪ್ರಾಚೀನಕಾಲದಲ್ಲಿ ಶಬ್ದಬ್ರಹ್ಮದ ಪರಿಕಲ್ಪನೆ-ಯಲ್ಲಿ ಭಾಷೆದೇವನಿರ್ಮಿತವೆಂದು ಭಾವಿಸಿದ್ದರು. ಅದು ಮಾನವನರೂಢಿಯಿಂದ ಪ್ರಾಪ್ತವಾದದ್ದು ಎನ್ನುವುದು ಪರಿಚಿತವಾದದ್ದು ಇತ್ತೀಚಿನ ಬೆಳವಣಿಗೆಯಾಗಿದೆ. ಭಾಷೆ ಮಾನವನಿಗೆ ಉಸಿರಿನಷ್ಟೇ ಮುಖ್ಯವಾದುದಾಗಿದೆ. ಹುಟ್ಟಿನಿಂದಲೇ ರೂಢಿಸಿಕೊಂಡ ಮಾನವ ಬರುಬರುತ್ತ ಲೀಲಾಜಾಲವಾಗಿ ಭಾಷೆಯನ್ನು ತನ್ನ ಅಗತ್ಯತೆಗೆ ತಕ್ಕಂತೆ ಬಳಸುತ್ತಾನೆ. ಮಗು ಉಸಿರಾಟವನ್ನು ತಾಯಿಯ ಗರ್ಭಾವಸ್ಥೆಯಲ್ಲಿರುವಾಗಲೇ ಹೇಗೆ ಕಲಿಯುತ್ತಬಂದಿರುತ್ತದೋ ಹಾಗೆ ಭಾಷೆಯನ್ನು ಬಳಸಲು ಬೇಕಾದ ಎಲ್ಲ ಅಂಗಾಂಗಗಳನ್ನು ಸ್ಥಾನಕರಣಗಳನ್ನು ಮಗು ಶೈಶವಾವಸ್ಥೆಯಲ್ಲಿ ಪಡೆದುಕೊಂಡುಬಂದಿರುತ್ತದೆ. ಈ ಹಂತದಲ್ಲಿ ಎರಡು ವಿಚಾರಗಳನ್ನು ಸ್ಪಷ್ಟಪಡಿಸುವುದು ಸೂಕ್ತವಾದದ್ದು. ಅವುಗಳೆಂದರೆ ಭಾಷೆಯ ಆಂತರಂಗಿಕ ಹಾಗು ಬಾಹ್ಯರಚನೆಗಳು. ಅಂದರೆ ಭಾಷೆಯನ್ನು ಸುಲಲಿತವಾಗಿ ಬಳಸಲು ನೆರವಾಗುವ ದೇಹದ ಆಂತರಂಗಿಕಪರಿಸರ ಒಂದುಕಡೆಯಾದರೆ ಅದನ್ನು ಬಾಹ್ಯಜಗತ್ತಿನ ಇತರ ಪ್ರಕೃತಿಗಳೊಂದಿಗೆ ಸರಿಯಾಗಿಬಳಸಿ ಉತ್ತಮವಾಗಿ ರೂಢಿಸಿಕೊಳ್ಳುವುದು ಇನ್ನೊಂದುಬಗೆಯಾಗಿದೆ. ಪ್ರಾಚೀನರು ಈ ಆಂತರಂಗಿಕ ರಚನೆಯನ್ನು ಗಮನಿಸಿಕೊಂಡು ಭಾಷೆ ದೇವನಿರ್ಮಿತ ಎಂದು ವಾದಿಸಿದ್ದಾರೆ. ಭಾಷೆ ಮಾನವೇತರ ಪ್ರಾಣಿಗಳಲ್ಲಿಯೂ ಕಂಡುಬರುತ್ತದೆ. ಮಾನವೇತರ ಮತ್ತು ಮಾನವ ಭಾಷೆಗಳ ನಡುವಿನ ಭಾಷೆಗಳ ವ್ಯತ್ಯಾಸಗಳನ್ನು ಈಗಾಗಲೇ ಮೇಲಿನ ಪ್ಯಾರಾಗಳಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಒಂದು ಅಂಶ ಗಮನಿಸಬೇಕಾಗಿದೆ. ಮಾನವ ಭಾಷೆ ನಿರಂತರ ಬದಲಾವಣೆಯಾಗುತ್ತಿದ್ದರೆ ಮಾನವೇತರ ಭಾಷೆ ಸ್ಥಿರವಾದುದು ಬದಲಾಗದೆ ಹಾಗೆ ಉಳಿಯುವಂತದ್ದು. ಉದಾಹರಣೆಗೆ ಸಾವಿರಾರುವರ್ಷಗಳ ಹಿಂದೆ ನಾಯಿ ಯಾವರೀತಿ ಕೂಗುತ್ತಿತ್ತೋ ಹಾಗೆಯೇ ಇಂದೂ ಕೂಗುತ್ತದೆ. ತನ್ನ ದೈನಂದಿನ ವ್ಯವಹಾರ ಮಾಡುತ್ತಿರುತ್ತದೆ. ಆದರೆ ಮಾನವ ಭಾಷೆ ನಿರಂತರ ಪರಿವರ್ತನಶೀಲವಾಗಿದೆ. ಭಾಷೆಯ ಉಗಮದ ಕುರಿತು ಅನೇಕ ವಾದಗಳು ಪ್ರಾಚೀನ ವೈಯಾಕರಣಿಗಳಲ್ಲಿ ಮತ್ತು ಆಧುನಿಕ ಭಾಷಾವಿಜ್ಞಾನಿಗಳಲ್ಲಿ ನಡೆಯುತ್ತ ಬಂದಿರುವುದು ಕಂಡುಬರುತ್ತದೆ. 'ಇದಂಮಿತ್ಥಂ'

ಎಂದು ಯಾರೂ ಈ ತನಕ ಅಂತಿಮ ಗೊಳಿಸಲು ಸಾಧ್ಯವಾಗಿಲ್ಲ. ಭಾಷೆಯ ಉತ್ಪತ್ತಿಯಕುರಿತು ಎರಡುರೀತಿಯ ಮಾರ್ಗಗಳಲ್ಲಿ ವಿವೇಚನೆ ನಡೆದಿದೆ ಎನ್ನ ಬಹುದು. ಆದಾಗ್ಯೂ ಈ ಪ್ರಶ್ನೆಗೆ ಉತ್ತರಿಸುವುದು ತುಂಬ ಕಷ್ಟದಾಯಕವೇ ಸರಿ. ಏಕೆಂದರೆ ಸಾವಿರಾರು ವರ್ಷಗಳ ಹಿಂದೆಯೇ ಭಾಷೆ ಹುಟ್ಟಿಕೊಂಡಿರುವುದರಿಂದ ಖಚಿತವಾದ ಆಧಾರಗಳ ಸಮೇತವಾಗಿ ಹೇಳುವುದು ಇಂದು ಸಾಧ್ಯವಾಗುತ್ತಿಲ್ಲ. ಕೇವಲ ಅನುಮಾನ ಪ್ರಮಾಣದಿಂದ ಮಾತ್ರ ಇದನ್ನು ಹೇಳಬಹುದು. ಕ್ರಿ.ಶ. 1866ರಲ್ಲಿ ಪ್ಯಾರೀಸ್‌ನಲ್ಲಿ ಭಾಷಾವಿದ್ವಾಂಸರು ಈ ಮೇಲಿನ ಪ್ರಶ್ನೆಯಬಗ್ಗೆ ಅನವಶ್ಯಕವಾದ ವಾದಗಳನ್ನು ಪ್ರತಿಬಂಧಿಸಿದರು. ತದನಂತರ ಅನೇಕ ಭಾಷಾವಿಜ್ಞಾನಿಗಳು ಏಕಾಭಿಪ್ರಾಯವನ್ನು ಹೊಂದಿದ್ದರು. ನೂರೈವತ್ತು ವರ್ಷಗಳಲ್ಲಿ ಸಾಕಷ್ಟು ವಿಭಿನ್ನತರದ ಚಿಂತನೆಗಳು ನಡೆದಿವೆ. ನವೀನ ವ್ಯಾಖ್ಯೆಗಳನ್ನು ನೀಡಿದ್ದಾರೆ. ಹಲವು ಹೊಸಸಿದ್ಧಾಂತಗಳು ಮತ್ತು ಹಳೆಯ ಸಿದ್ಧಾಂತಗಳು ಹೊಸವ್ಯಾಖ್ಯಾನಗಳು ಬಂದಿವೆ. ಇವುಗಳನ್ನು ಎರಡು ಮಾರ್ಗಗಳಲ್ಲಿ ವಿವರಿಸ ಬಹುದಾಗಿದೆ ಒಂದು ಪ್ರತ್ಯಕ್ಷಮಾರ್ಗ ಮತ್ತೊಂದು ಪರೋಕ್ಷಮಾರ್ಗವಾಗಿದೆ[22]. ಪ್ರತ್ಯಕ್ಷಮಾರ್ಗ ವೆಂದರೆ ಪ್ರಾಚೀನ ಕಾಲದಲ್ಲಿ ಭಾಷೆಯು ಮಾನವ ನಿರ್ಮಿತವಲ್ಲ ಅದುದೇವರ ಕೊಡುಗೆ ಎಂಬ ವಾದವಿತ್ತು. ಪ್ರತ್ಯಕ್ಷವಾಗಿ ದೇವರು ಕೊಟ್ಟ ವರ ಎಂಬ ವಾದವಾಗಿದೆ ಆದರೆ ಆಧುನಿಕ ಭಾಷಾ ವಿಜ್ಞಾನಿಗಳು ಈ ವಾದವನ್ನು ತಳ್ಳಿಹಾಕುತ್ತಾರೆ ಭಾಷೆದೇವನಿರ್ಮಿತವಲ್ಲ. ನೇರವಾಗಿ ಮನುಷ್ಯ ನಿರ್ಮಿತವಾಗಿದೆ, ಪರೋಕ್ಷವಾಗಿ ಅಲ್ಲ. ದೇಹ ರಚನೆಯಾಗುವಾಗ ಭಾಷೆಯನ್ನು ಬಳಸಲು ಬೇಕಾದ ಅವಯವಗಳನ್ನು ಅಗೋಚರ ಶಕ್ತಿಯು ನೀಡಿದೆಯಾದರೂ ಅದರ ಹುಟ್ಟುವಿಕೆಯಲ್ಲಿ ಮನುಷ್ಯ ಪ್ರಯತ್ನವೇ ಪ್ರಮುಖ ಪಾತ್ರವಹಿಸುತ್ತದೆ. ಮುಖ್ಯವಾಗಿ ಕೆಲವುವಾದಗಳನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

**ಅನುಕರಣವಾದ**

---

[22] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಭಾಷಾ ಉತ್ಪತ್ತಿ, ಅರ್ಥವಿವರಣೆಯ ಭಾಗದಲ್ಲಿ.

ಈ ವಾದವನ್ನು ಲೀಬ್ನಿಜ್[23] ಎಂಬವನು ಮಂಡಿಸಿದ್ದಾನೆ. ಈತನ ಪ್ರಕಾರ ಪ್ರಕೃತಿಯಲ್ಲಿ ಅಸಂಖ್ಯಾತ ಧ್ವನಿಗಳಿವೆ. ಅನೇಕಪ್ರಾಣಿಗಳು, ಪಕ್ಷಿಗಳು, ತಮ್ಮದೇ ಆದ ರೀತಿಯಲ್ಲಿ ವ್ಯವಹರಿಸುತ್ತಿರುತ್ತವೆ. ಇಂತಹ ಪ್ರಾಣಿಗಳ ಹೊರಡಿಸುವ ವಿವಿಧ ಬಗೆಯ ಧ್ವನಿಗಳನ್ನು ತಾನು ಹೊರಡಿಸಲು ಮಾನವ ಪ್ರಯತ್ನಮಾಡುತ್ತಾನೆ. ಇದರ ಪ್ರತಿಫಲವಾಗಿಯೇ ಭಾಷೆ ಹುಟ್ಟಿಕೊಂಡಿದೆ ಎನ್ನುತ್ತಾನೆ. ಈ ವಾದವನ್ನು ಆಂಗ್ಲಭಾಷೆಯಲ್ಲಿ 'ಬೌ ಬೌ' ವಾದ ಎಂದೂ ಕರೆಯಲಾಗಿದೆ. ಆದರೆ ಅನುಕರಣವಾದವನ್ನು ರೆನಸ್ ಎಂಬ ವಿದ್ವಾಂಸನು ಪ್ರಬಲವಾಗಿ ವಿರೋಧಿಸುತ್ತಾನೆ. ಏಕೆಂದರೆ ಪ್ರಾಣಿಗಳಕೂಗು ಮನುಷ್ಯನ ಪ್ರಯತ್ನದಿಂದ ಭಾಷಾವ್ಯವಸ್ಥೆಗೆ ಹೇಗೆ ಕಾರಣವಾಗುತ್ತದೆ? ಹಾಗೆ ನೋಡಿದರೆ ತಲತಲಾಂತರ ವರ್ಷಗಳಿಂದ ಪ್ರಾಣಿಗಳು ಹೇಗೆ ವ್ಯವಹರಿಸುತ್ತಿವೆಯೋ ಇಂದಿಗೂ ಹಾಗೆಯೆ ವ್ಯವಹರಿಸುತ್ತಿವೆ . ಒಂದು ವೇಳೆ ಪ್ರಾಣಿಗಳ ಕೂಗಿನಿಂದಲೇ ಅಥವಾ ಅದರ ಅನುಕರಣದಿಂದಲೇ ಭಾಷೆ ಹುಟ್ಟುಕೊಂಡಿದೆ ಎಂದರೆ ಇಂದು ಕೂಡ ಪ್ರಾಣಿಗಳು ತಮ್ಮ ದೈನಂದಿನ ಕ್ರಿಯೆಗಳಲ್ಲಿ ಅಂತಹ ಕೂಗುಗಳನ್ನು ಮಾಡುತ್ತಿವೆ. ಅವು ಜಗತ್ತಿನಲ್ಲಿ ಇನ್ನಿತರ ಅನೇಕಭಾಷೆಗಳ ಹುಟ್ಟಿಗೆ ಕಾರಣವಾಗುತ್ತದೆಯೇ ಎಂಬುದು ಮುಖ್ಯವಾದ ಪ್ರಶ್ನೆ. ಈ ಹಿನ್ನಲೆಯ;ಲ್ಲಿ ನಾವು ಅನುಕರಣವಾದವು ಭಾಷಾ ಉಗಮಕ್ಕೆ ಕಾರಣ ಎಂಬವಾದವನ್ನು ಒಪ್ಪಲು ಸಾಧ್ಯವಿಲ್ಲ. ಪ್ರಪಂಚದ ಪ್ರತಿಯೊಂದು ಜೀವಂತ ವಸ್ತುವೂ ಅನುಕರಣಶೀಲವಾದದ್ದು. ಯಾವುದೇ ಒಂದು ಮಾದರಿಯಿಲ್ಲದೇ ಹೊಸದು ಹುಟ್ಟಲಾರದು. ಒಂದು ವೇಳೆ ಹುಟ್ಟಿದಂತೆ ಕಂಡರೂಕೂಡ ಅದು ಯಾವುದೋ ಒಂದರ ಪ್ರತ್ಯಕ್ಷ ಅಥವಾ ಪರೋಕ್ಷ ಅನುಕರಣವಾಗಿರುತ್ತದೆ. ವಿದ್ಯಾರ್ಥಿಗಳಿಗೆ ಶಿಕ್ಷಕರು ಮಾದರಿ, ಭಕ್ತರಿಗೆ ದೇವರುಮಾದರಿ, ತರಬೇತುದಾರರಿಗೆ ತರಬೇತಿಕೊಡುವವರು ಮಾದರಿ, ಕೆಲಸ ಮಾಡುವವರಿಗೆ ಹಿರಿಯಕೆಸಲಸಗಾರರು ಮಾದರಿಯಾಗಿದ್ದಾರೆ, ಮಗುವಿಗೆ ತಾಯಿ ಮಾದರಿಯಾಗಿದ್ದಾಳೆ ಅಂದರೆ ಯಾವುದೇ ವ್ಯಕ್ತಿ ಬಾಲ್ಯದಿಂದ ಹಿಡಿದು ತಾನು ಅನುಭವವವನ್ನು ಸೃಷ್ಟಿಸುವುದಿಲ್ಲ. ಅನುಭವವನ್ನು ಪಡೆಯುತ್ತಾನೆ. ಅದು ಪುಸ್ತಕದಿಂದಲೋ, ಮಸ್ತಕದಿಂದಲೋ,

---

[23] ಭಾಷಾ ವಿಜ್ಞಾನದ ಮೂಲತತ್ತ್ವಗಳು , ಡಾ. ಎಂ ಚಿದಾನಂದ ಮೂರ್ತಿ, ಮೈಸೂರು ಪ್ರಿಂಟಿಂಗ್ ಎಂಡ್ ಪಬ್ಲಿಕೇಶನ್ಸ್ ಮೈಸೂರು, ನಾಲ್ಕನೇ ಆವೃತ್ತಿ,1993, ಪುಟ ಸಂಖ್ಯೆ 28, ಎರಡನೇ ಪ್ಯಾರಾ, ನಾಲ್ಕನೇ ಸಾಲು.

ಬೇರೆಯೊಬ್ಬರಿಂದಲೋ,ಸಹವಾಸದಿಂದಲೋ, ಸ್ವಂತ ಓದಿನಿಂದಲೋ ಹೀಗೆ ವಿಭಿನ್ನತೆರನಾಗಿ ಅನುಭವವನ್ನು ಪಡೆಯುತ್ತಾ ತನ್ನ ಜೀವನವನ್ನು ಸಾಗಿಸುತ್ತಿರುತ್ತಾನೆ. ಅನುಭವಕ್ಕೆ ಅನುಕರಣವೇ ಮೂಲ ಆಧಾರವಾದುದಾಗಿದೆ. ಹಾಗೆಯೇ ಮಗುವೂ ಕೂಡ ತನ್ನ ತಾಯಿಯನ್ನು ಅನುಕರಿಸುತ್ತಿದೆ. ಹೀಗೆ ಬಾಲ್ಯದಿಂದ ತಾಯಿ, ನಂತರ ತನ್ನ ಪರಿಸರದ ಪ್ರಭಾವಕ್ಕೆ ಒಳಗಾಗಿ ಅದನ್ನು ಅನುಕರಿಸುತ್ತಾ ಭಾಷೆಯನ್ನು ಮಾನವ ರೂಢಿಸಿಕೊಳ್ಳುತ್ತಾನೆ ಎನ್ನುವುದು ಈ ವಾದದತಿರುಳಾಗಿದೆ. ಈ ಸಿದ್ಧಾಂತದಲ್ಲಿ ಈ ಕೆಳಗಿನ ಮೂರು ಉಪ ಸಿದ್ಧಾಂತಗಳಿವೆ.

1 ಧ್ವನ್ಯಾತ್ಮಕ ಅನುಕರಣ.

ಮನುಷ್ಯನು ತನ್ನ ಸುತ್ತಮುತ್ತಲಿನ ಪರಿಸರದಲ್ಲಿಯ ವಿಭಿನ್ನತೆರನಾದ ಧ್ವನಿಗಳನ್ನು ಬಳಸಿ ಅದನ್ನು ಅನುರಿಸುತ್ತಾನೆ ಇದುವೇ ಭಾಷೆಗೆಮೂಲ ಎನ್ನುವುದು ಈ ವಾದದ ಸಾರಾಂಶವಾಗಿದೆ.

2. ಅನುರಣನಾತ್ಮಕ ಅನುಕರಣ.

ಈ ವಾದದ ಪ್ರಕಾರ ಧ್ವನ್ಯಾತ್ಮಕ ಅನುಕರಣದಲ್ಲಿ ಪಶು, ಪಕ್ಷಿ, ಮತ್ತಿತರ ಪ್ರಾಣಿಪಕ್ಷಿಗಳ ಅನುಕರಣವನ್ನು ಅನುಸರಿಸಿ ಅದು ಹೊಂದಿರುವ ಸ್ವಾಭಾವಿಕ ಧ್ವನಿಗಳನ್ನು ಅನುಸರಿಸಿರುವ ಧ್ವನ್ಯಾತ್ಮಕ ಅನುಕರಣವೆಂದು ಕರೆದರೆ ಅನುರಣನಾತ್ಮಕ ಅನುಕರಣದಲ್ಲಿ ಪ್ರಾಣಿಪಕ್ಷಿಗಳಿಂದ ಭಿನ್ನವಾಗಿ ಪ್ರಕೃತಿಯಲ್ಲಿ ಸಹಜವಾಗಿರುವ ಇತರವಸ್ತುಗಳು ವಿಭಿನ್ನತೆರನಾದ ಸಪ್ಪಳವನ್ನು ಮಾಡುತ್ತಿರುತ್ತವೆ, ಅಂತಹ ಸಪ್ಪಳಗಳೇ ಭಾಷೆಗೆ ಮೂಲ ಎಂಬವಾದ ಇದಾಗಿದೆ. ಉದಾ: ನೀರುಹರಿಯುವಾಗ ಜುಳು ಜುಳು, ಹಣ ಅಥವಾ ಲೋಹಗಳು ಕಣ ಕಣ, ಗಾಳಿ ಬೀಸುವಾಗ ಜೊಂಯ್ ಜೊಂಯ್ ಇತ್ಯಾದಿಯನ್ನು ಉದಾಹರಿಸಬಹುದು.

**3 ದೃಶ್ಯಾತ್ಮಕ ಅನುಕರಣ**

ಪ್ರಕೃತಿಯಲ್ಲಿ ಸ್ವಾಭಾವಿಕವಾಗಿರುವ ವಿವಿಧ ತೆರನಾದ ದೃಶ್ಯಗಳನ್ನು ಅನುಸರಿಸಿ ಭಾಷೆ ಹುಟ್ಟಿಕೊಂಡಿದೆ. ಅದುವೇ ಭಾಷೆಗೆ ಆಧಾರ ಎಂಬದು ಈವಾದದ ತಿರುಳಾಗಿದೆ. ಉದಾ ನದಿ ಹರಿಯುವುದು , ಮರಗಳು ಅಲುಗಾಡುವುದು ಇತ್ಯಾದಿ ಆದರೆ ಈ ವಾದವನ್ನು ನೇರವಾಗಿತಳ್ಳಿಹಾಕಬಹುದಾಗಿದೆ.

## ಉದ್ಗಾರವಾದ

ಈ ವಾದವನ್ನು 'ಪೂಹ್ ಪೂಹ್'[24] ವಾದವೆಂದೂ ಕರೆಯುತ್ತಾರೆ. ಮಾನವ ತನ್ನ ದೈಹಿಕಶ್ರಮ ಅಥವಾ ಕಾರ್ಯಚಟುವಟಿಕೆಗಳಲ್ಲಿ ನಾನಾರೀತಿಯ ಹಾವ ಭಾವಗಳನ್ನು ಮಾಡುತ್ತಿರುತ್ತಾನೆ. ಆ ಸಂದರ್ಭದಲ್ಲಿ ಭಾಷೆ ಉದ್ಗಮಿಸಿರಬೇಕು ಎನ್ನುವುದು ಈ ವಾದದ ಸಾರಾಂಶವಾಗಿದೆ. ವಿಭಿನ್ನತೆರನಾಗಿ ಉಸಿರಾಡುತ್ತಾ ಆಕಳಿಕೆ ತೆಗೆಯುತ್ತ, ಕೆಮ್ಮುತ್ತಾ ಅನಾರೋಗ್ಯ ಸಂಭವಿಸಿದಾಗ ನಾನಾರೀತಿಯ ಧ್ವನಿಗಳನ್ನು ತನಗೆ ಗೊತ್ತಿದ್ದೋ ಗೊತ್ತಿಲ್ಲದೆಯೋ ಹೊರಡಿಸುತ್ತಿರುತ್ತಾನೆ. ಇಂತಹ ಶಬ್ದಗಳು ಮುಂದೆ ಭಾಷೆಯ ಹುಟ್ಟಿಗೆ ಕಾರಣವಾಗಿವೆ ಎಂದು ಅರ್ಥ. ಆದರೆ ಈ ವಾದವನ್ನು ನೇರವಾಗಿ ತಳ್ಳಿಹಾಕಬಹುದು. ಒಂದು ವೇಳೆ ಇಂತಹ ಉದ್ವೇಗಗಳೇ ಭಾಷೆಯ ಹುಟ್ಟಿಗೆ ಕಾರಣ ಎನ್ನಬಹುದಾದರೆ ಇಂದೂ ಕೂಡ ಅವು ಅನೇಕ ಭಾಷೆಗಳ ಹುಟ್ಟಿಗೆ ಕಾರಣ ವಾಗಬಹುದಾಗಿದೆ. ಆದರೆ ಇದು ಸಾಧ್ಯವೇ? ಖಂಡಿತವಾಗಿಯೂ ಇದು ಅಸಾಧ್ಯವಾದುದಾಗಿದೆ.

## ದೈವೀ ಉತ್ಪತ್ತಿ ಸಿದ್ಧಾಂತ

ಭಾಷೆಯ ಉತ್ಪತ್ತಿ ಕುರಿತಂತೆ ಅತ್ಯಂತ ಪ್ರಾಚೀನಮತವಾಗಿದೆ. ಪ್ರಾಚೀನರು ಇದನ್ನೇ ಸತ್ಯ ಎಂದು ನಂಬಿದ್ದರು. ಕೆಲವು ವಿಚಾರಗಳನ್ನು ಗಮನಿಸಿದರೆ ಇಂದು ಕೂಡ ಉತ್ತರಕಂಡುಕೊಳ್ಳಲಾರದ ಅನೇಕಪ್ರಶ್ನೆಗಳು ನಮಗೆ ಭಾಷೆಗಳ ಬಗ್ಗೆ ಕಂಡು ಬರುತ್ತದೆ. ಭಾರತೀಯ ಪಂಡಿತರು ವೇದಗಳನ್ನು 'ಅಪೌರುಷೇಯ' ಎಂದು ಕರೆದಿದ್ದರು. ಅಂದರೆ ವೇದಗಳು ಮಾನವನಿರ್ಮಿತವಲ್ಲ ಅದು ದೇವನಿರ್ಮಿತ ಎಂದು ಭಾವಿಸಿದ್ದರು. ಸಂಸ್ಕೃತ ಭಾಷೆಯನ್ನು ಈಶ್ವರನೇ ನಿರ್ಮಿಸಿದ್ದಾನೆ ಎಂಬ ಕಲ್ಪನೆಯೂ ಇತ್ತು. ಜೊತೆಗೆ ಇತರ ಪ್ರಾಂತೀಯ ಭಾಷೆಗಳನ್ನು ನಿರ್ಮಿಸಿದವನೂ ಕೂಡ ಈಶ್ವರನೇ ಎಂಬ ಕಲ್ಪನೆಯಿತ್ತು. ಸಂಸ್ಕೃತವನ್ನು ದೇವಭಾಷೆಯೆಂದು ಕರೆಯುತ್ತಿದ್ದರು. ಅದನ್ನು ಪುಷ್ಟೀಕರಿಸುವಂತೆ ಪ್ರಸಿದ್ಧ ವ್ಯಾಕರಣಕಾರನಾದ ಪಾಣಿನಿಯು ತನ್ನ ಅಷ್ಟಾಧ್ಯಾಯಿಯಲ್ಲಿ ವರ್ಣಸಮಾಮ್ನಾಯಕ್ಕೆ

---

[24] ಕನ್ನಡ ಭಾಷಾ ಶಾಸ್ತ್ರ, ರಾ.ಯ.ಧಾರವಾಡಕರ, ಆರನೇ ಆವೃತ್ತಿ, ಗೀತಾಬುಕ್ ಹೌಸ್ ಮೈಸೂರು. 1987, ಪುಟ ಸಂಖ್ಯೆ 22, ಎರಡನೇ ಪ್ಯಾರಾ ಮೊದಲ ಸಾಲು.

ಸಂಬಂಧಪಟ್ಟಂತೆ 14 ಸೂತ್ರಗಳನ್ನು ಹೇಳಿದ್ದು ಈ ಸೂತ್ರಗಳೆಲ್ಲ ಮಾಹೇಶ್ವರ ಸೂತ್ರಗಳೆಂದುಕರೆದು ಅವು ಮಾಹೇಶ್ವರನ ಕೊಡುಗೆ ಎಂದು ಸ್ಪಷ್ಟಪಡಿಸಿದ್ದಾನೆ. ಪ್ರಾಚೀನರು ತಮ್ಮ ಸಕಲವ್ಯವಹಾರಗಳನ್ನು ದೇವರ ಅಧೀನದಲ್ಲಿಯೇ ನಡೆಸುತ್ತೇವೆಂಬ ಭಾವನೆಯಿಂದ ಬದುಕುತ್ತಿದ್ದರು. ಎಲ್ಲ ಭಾಷೆಗಳಿಗೂಮೂಲ 'ದೇವರು' ಎಂದು ನಂಬಿದ್ದರು. ಬೌದ್ಧರೂ 'ಪಾಲಿ'ಭಾಷೆಯು ಇತರ ಎಲ್ಲ ಭಾಷೆಗಳಿಗೂ ಮೂಲವೆಂದು ಭಾವಿಸಿದ್ದರು. ಇನ್ನು ಜೈನ ಪಂಡಿತರು 'ಸಂಸ್ಕೃತ' ಮತ್ತು ಬೌದ್ಧರಿಗಿಂತಲೂ ಮುಂದೆ ಹೋಗಿ ಅರ್ಧಮಾಗಧಿ ಭಾಷೆಯನ್ನು ಬಳಸಿದರು ಅದರ ಶ್ರೇಷ್ಠತೆಯನ್ನು ಕುರಿತು ಮಾತನಾಡಿದರು. ಅದು ಕೇವಲ ಮನುಷ್ಯಭಾಷೆ ಮಾತ್ರವಲ್ಲ ಎಲ್ಲ ಜೀವಿಗಳ ಮೂಲಭಾಷೆ ಎಂಬುದಾಗಿ ಭಾವಿಸಿದ್ದರು. ಮಹಾವೀರಸ್ವಾಮಿ ಈ ಭಾಷೆಗಳನ್ನು ಉಪದೇಶಿಸಿದ್ದಾನೆ ಎಂದು ಭಾವಿಸಿದ್ದರು. ಕ್ಯಾಥೋಲಿಕ್ ಜನರು ಕೂಡ 'ಹಿಬ್ರೂ ಭಾಷೆಯನ್ನು ಸಕಲಭಾಷೆಗಳ ಜನನಿ' ಎಂದು ಭಾವಿಸಿದ್ದರು. ಮುಸಲ್ಮಾನರೂ ಕೂಡಾ ತಮ್ಮ ಧರ್ಮದ ಪವಿತ್ರಗ್ರಂಥ ಕುರಾನ್‌ನನ್ನೆ ಪವಿತ್ರವಾದದ್ದು ಎಂದು ಭಾವಿಸಿದ್ದರು. ಹೀಗೆ ಪ್ರತಿಯೊಮದು ಧರ್ಮದವರು ಭಾಷೆಯನ್ನು ದೇವನಿರ್ಮಿತ ಎಂಬ ಭಾವನೆ ಹೊಂದಿದ್ದರು.

### ಧಾತು ಸಿದ್ಧಾಂತ

ಧಾತುಸಿದ್ಧಾಂತದ ಹರಿಕಾರ ಜರ್ಮನ್ ದೇಶದ ಪ್ರೋಫೆಸರ್ ಹೇಸ್[25] ಈತನ ಹೇಳಿಕೆಗಳನ್ನು ಈತನ ಶಿಷ್ಯನಾದ ಸ್ಟಾಯಿಂಥಾಲ್ನನು ಮುದ್ರಿತ ರೂಪದಲ್ಲಿ ಇದನ್ನು ಪ್ರಕಟಪಡಿಸಿದನು. ಮ್ಯಾಕ್ಸಮುಲ್ಲರ್ ಕೂಡ ಈ ಸಿದ್ಧಾಂತವನ್ನು ಈ ವಾದವನ್ನು 'ಡಿಂಗ್ ಡಾಂಗ್' ವಾದ ವೆಂತಲೂ ಕರೆಯುತ್ತಿದ್ದಾರೆ. ಈ ಸಿದ್ಧಾಂತದ ಪ್ರಕಾರ ಜೀವನದ ಪ್ರತಿಯೊಂದು ಚಟುವಟಿಕೆಯೂ ಕೂಡ ಧ್ವನಿಯುಕ್ತವಾದದ್ದಾಗಿದೆ. ಲೋಹ, ಕೋಲು, ವಸ್ತ್ರ, ಕಾಗದ ಇನ್ನಾವುದೇ ವಸ್ತುವನ್ನು ತೆಗೆದುಕೊಂಡರೂ ಅದು ಪ್ರತಿಯೊಂದು

---

[25] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಭಾಷಾ ಉತ್ಪತ್ತಿ ಅರ್ಥವಿವರಣೆಯ ಭಾಗದಲ್ಲಿ.

ಧ್ವನಿಯನ್ನು ಉತ್ಪತ್ತಿಮಾಡಬಲ್ಲದುದಾಗಿದೆ, ಮೂಲತಃ ಇರುವ ಇಂತಹ ಧ್ವನಿಗಳೇ ಮಾನವ ಭಾಷೆಗೆ ಪ್ರೇರಣೆಯಾಗಿವೆ ಎನ್ನುವುದು ಡಿಂಗ್‌ಡಾಂಗ್ ವಾದದ ಸಾರಾಂಶವಾಗಿದೆ. ಪ್ರತಿಯೊಂದು ವಸ್ತುವಿನಲ್ಲಿಯೂ ವಿಭಿನ್ನತೆರನಾದ ಧ್ವನಿಯನ್ನು ಉತ್ಪಾದನೆ ಮಾಡಬಲ್ಲ ಧಾತು ಅಭಿವ್ಯಕ್ತಿ ಶಕ್ತಿಯಿರುತ್ತದೆ. (ಅದು ಇರುವುದರಿಂದಲೇ ಧ್ವನಿಯುತ್ಪಾದನೆ ಮಾಡಲು ಸಾಧ್ಯವೆನ್ನುವುದು ಡಿಂಗ್‌ಡಾಂಗ್ ವಾದದ ತಿರುಳಾಗಿದೆ). ಆರಂಭದಲ್ಲಿ ಇಂತಹ ಧಾತುಗಳ ಸಂಖ್ಯೆ ತುಂಬ ಅಗಾಧವಾಗಿತ್ತು. ಅಂತಹ ಧ್ವನಿಗಳು ಕಾಲಾಂತರದಲ್ಲಿ ಲುಪ್ತವಾಗಿ ಕೇವಲ ನಾನೂರು ಐನೂರು ಧಾತುಗಳು ಮಾತ್ರ ಉಳಿದುಕೊಂಡವು. ಇವುಗಳಿಂದ ಭಾಷೆ ಹುಟ್ಟಿಕೊಂಡಿತು. ಈ ಹಿನ್ನೆಲೆಯಲ್ಲಿ ಧಾತುಗಳ ಧ್ವನಿ ಮತ್ತು ಅದರ ಅರ್ಥಕ್ಕೆ ಪರಸ್ಪರ ರಚನಾತ್ಮಕ ಸಂಬಂಧ ಇತ್ತೆಂಬುದು ಗೊತ್ತಾಗುತ್ತದೆ.

**ನಿರ್ಣಯ ಸಿದ್ಧಾಂತ**

ಈ ಸಿದ್ಧಾಂತವನ್ನು ಪ್ರತೀಕವಾದ, ಸ್ವೀಕಾರವಾದ, ಸಾಂಕೇತಿಕ ಉತ್ಪತ್ತಿ ಸಿದ್ಧಾಂತ ಇತ್ಯಾದಿ ಹೆಸರುಗಳಿಂದ[26] ಕರೆಯುತ್ತಾರೆ. ಈ ಸಿದ್ಧಾಂತದ ಪ್ರಕಾರ ಮನುಷ್ಯನು ಆರಂಭದಲ್ಲಿ ದೇಹದ ಅಂಗಾಂಗಳಿಂದ ಯಾವುದೇ ಸಂಕೇತಗಳನ್ನು ಬಳಸಿ ಕೆಲಸ ಅಥವಾ ವ್ಯವಹಾರಗಳನ್ನು ನಡೆಸುತ್ತಿರಲಿಲ್ಲ. ಆದರೆ ಆತನು ಆವಶ್ಯಕವಸ್ತು ಹಾಗು ಕ್ರಿಯೆಗಳಿಂದ ಪ್ರತೀಕ ಧ್ವನಿಸಂಕೇತ ಮತ್ತು ಸಾಂಸ್ಕೃತಿಕ ಹೆಸರುಗಳನ್ನು ಸ್ವೀಕಾರ ಮಾಡುತ್ತ ಬಂದ. ಇದುವೇ ಭಾಷಾ ಉತ್ಪತ್ತಿಗೆ ಕಾರಣ ಎನ್ನುವುದು ಈ ಮತದ ವಾದವಾಗಿದೆ. ಇದೊಂದು ನಿರರ್ಥಕ ಸಿದ್ಧಾಂತವಾಗಿದೆ. ಯಾವುದೇ ಭಾಷೆಗಳೇ ಇರಲಿಲ್ಲವೆಂದ ಮೇಲೆ ಅದು ಹೇಗೆ ತಾನೆ ಕ,ನಾ,ಮ ಇತ್ಯಾದಿ ವರ್ಣಗಳನ್ನು ಸ್ವೀಕರಿಸಲು ಅಥವಾ ಅವುಗಳಿಗೆ ಸಾಂಕೇತಿಕ ಚಿಹ್ನೆಗಳನ್ನು ನೀಡಲು ಸಾಧ್ಯವಾಗಿದೆ?

[26] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಭಾಷಾ ಉತ್ಪತ್ತಿ ಅರ್ಥವಿವರಣೆಯ ಭಾಗದಲ್ಲಿ.

**ಮನೋಭಿವ್ಯಕ್ತಿ ಸಿದ್ಧಾಂತ.**

ಈ ವಾದವನ್ನು 'ಪೂಹುಪೂಹ್'ವಾದ[27] ವೆಂತಲೂ ಕರೆಯುತ್ತರೆ, ಈ ಸಿದ್ಧಾಂತದ ಪ್ರಕಾರ ಆರಂಭದಲ್ಲಿ ಮನುಷ್ಯ ವಿಚಾರಪ್ರಧಾನ ಪ್ರಾಣಿಯಾಗಿರದೇ ಇತರ ಪಶುಗಳಿಗೆ ಸಮನಾಗಿ ವ್ಯವಹರಿಸುತ್ತಿದ್ದ. ಕೇವಲ ಭಾವಪ್ರಧಾನ ಪ್ರಾಣಿಯಾಗಿದ್ದನು. ದುಃಖ, ವಿಸ್ಮಯಗಳು, ನಗು ಇತ್ಯಾದಿ ಭಾವನೆಗಳನ್ನು ಮಾತ್ರ ಹೊರಡಿಸಬಲ್ಲವನಾಗಿದ್ದ ಅಷ್ಟೆ ಅಲ್ಲ ಅವನಿಗೆ 'ಭಾವ' ಎನ್ನುವ ಕಲ್ಪನೆಯೂ ಇರಲಿಲ್ಲ, ಭಾವಾವೇಶದ ಸಂದರ್ಭದಲ್ಲಿ ಮನಸ್ಸಿನಲ್ಲಿ ವಿಭಿನ್ನತೆರನಾದ ಆಲೋಚನೆಗಳನ್ನು ಹೊರಹಾಕಲು ಇನ್ನು ಕೆಲವು ಉದ್ವೇಗಭರಿತವಾದ ಧ್ವನಿಗಳನ್ನು ಹೊರಡಿಸುತ್ತಿದ್ದ ಚಿ, ತುತ್, ಆಹ, ಓಹೋ, ಃಆಯ್ ಹೀಗೆ ಮತ್ತಿತರ ಧ್ವನಿಗಳನ್ನು ಹೊರಡಿಸುತ್ತಿದ್ದ, ಇದುವೇ ಭಾಷೆಗೆ ಮೂಲ ಎಂಬುದು ಈ ವಾದದ ಸಾರಾಂಶವಾಗಿದೆ.

**ಯೋ–ಹೆ–ಹೋ ವಾದ**

ಇದನ್ನು 'ಶ್ರಮಪರಿಹಾರವಾದ' ಎಂದೂ ಕರೆಯುತ್ತಾರೆ. ಇದರ ಜನ್ಮದಾತ 'ನೋರಿ'[28] ಎನ್ನುವ ವಿದ್ವಾಂಸ ನಾಗಿದ್ದಾನೆ. ಕೆಲಸ ಮಾಡುವ ಸಂದರ್ಭದಲ್ಲಿ ಮಾನವನು ತನ್ನ ಶ್ರಮಪರಿಹಾರವಾಗಲೆಂದು ಅಥವಾ ಶ್ರಮದ ಗಮನ ತನಗಾಗದಿರಲೆಂದು ವಿಭಿನ್ನ ತೆರನಾದ ಧ್ವನಿಗಳನ್ನು ಹೊರಡಿಸುತ್ತಿದ್ದ. ಉದಾಹರಣೆಗೆ ಕಟ್ಟಿಗೆ ಒಡೆಯುವಾಗ ಕೆಲವರು ಹೋ ಹೋ ಎಂತಲೂ , ಬೀಸುವಾಗ ಹೆ ಹೋ ಎಂತಲೂ ಹೀಗೆ ವಿಭಿನ್ನತೆರನಾಶದ ಕೆಲಸಗಳಲ್ಲಿ ನಾನಾ ತೆರನಾದ ಧ್ವನಿಗಳನ್ನು ಹೊರಡಿಸುತ್ತಾರೆ ಇಂತಹ ಧ್ವನಿಗಳಿಂದಲೇ ಭಾಷೆ ಹುಟ್ಟಿಕೊಂಡಿದೆ ಎನ್ನುವುದು ನೋರಿಯ ವಾದವಾಗಿದೆ.

---

[27] ಅದೇ.

[28] ಭಾಷಾ ವಿಜ್ಞಾನದ ಮೂಲತತ್ತ್ವಗಳು , ಡಾ. ಎಂ ಚಿದಾನಂದ ಮೂರ್ತಿ, ಮೈಸೂರು ಪ್ರಿಂಟಿಂಗ್ ಎಂಡ್ ಪಬ್ಲಿಕೇಶನ್ಸ್ ಮೈಸೂರು, ನಾಲ್ಕನೇ ಆವೃತ್ತಿ,1993, ಪುಟ ಸಂಖ್ಯೆ 28, ಎರಡನೇ ಪ್ಯಾರಾ, ಮೊದಲ ಸಾಲು.

## ಇಂಗಿತ ಸಿದ್ಧಾಂತ

ಈ ಸಿದ್ಧಾಂತದ ಪ್ರಪ್ರಥಮ ಸಂಕೇತ ಪಾಲಿನೇಶಿಯನ್ ಭಾಷಾ ವಿದ್ವಾಂಸನಾದ ಡಾ ರಾಯ್[29] ಎನ್ನುವವನು. ಡಾರ್ವಿನ್ ಎನ್ನುವ ವಿದ್ವಾಂಸನು ಆರು ಅಸಂಬದ್ಧ ಭಾಷೆಗಳನ್ನು ತುನಲಾತ್ಮಕವಾಗಿ ಅಧ್ಯಯನ ಮಾಡುತ್ತಿರುವ ಸಂದರ್ಭದಲ್ಲಿ ಈ ವಾದವನ್ನು ಪುಷ್ಟೀಕರಿಸಿದ್ದಾನೆ. ಐಲೆಂಡ್ ವಿದ್ವಾಂಸ ಜಾನ್ಸನ್ನನು ವಿಶದೀಕರಿಸಿದ್ದಾನೆ. ಈತ ಭಾಷೆಯ ವಿಕಾಸಕ್ಕೆ ಸಂಬಂಧ ಪಟ್ಟಂತೆ ನಾಲ್ಕು ಹಂತಗಳನ್ನು ಹೇಳಿದ್ದಾನೆ. ಮೊದಲ ಹಂತದಲ್ಲಿ ಭಾವ ವ್ಯಂಜಕ ಧ್ವನಿಗಳನ್ನು ಕುರಿತು ಹೇಳಿದ್ದಾನೆ , ಭಯ, ಕ್ರೋಧ, ದುಃಖ, ಸುಖ, ಇತ್ಯಾದಿ ಕಾರಣಗಳಿಂದ ಮಂಗಮನುಷ್ಯ ಮತ್ತಿತರ ಪ್ರಾಣಿಗಳಿಂದ ಇಂತಹ ಭಾವಗಳು ವ್ಯಕ್ತವಾಗುತ್ತಿದ್ದವು. ಎರಡನೇ ಹಂತ ಅನುಕರಣಾತ್ಮಕ ಶಬ್ದಗಳು. ಈ ಹಂತದಲ್ಲಿ ಅನೇಕ ಬಗೆಯ ಜೀವಿಗಳು ಹಾಗೆಯೇ ನಿರ್ಜೀವ ವಸ್ತುಗಳಿಂದುಂಟಾಗುವ ನಾನಾತೆರನಾದ ಧ್ವನಿಗಳಿಂದ ಅನುಕರಣ ಶಬ್ದಗಳು ರಚಿತವಾಗಿವೆ ಎನ್ನುವುದಾಗಿದೆ. ಮೂರನೆಯ ಹಂತ ಭಾವಸಂಕೇತ ಅಥವಾ ಇಂಗಿತದ ಹಂತವಾಗಿದೆ. ಇದರ ಆಧಾರವೂ ಅನುಕರಣವಾಗಿದೆ. ಅನುಕರಣ ಶಬ್ದಗಳ ಮೂಲಕ ಆತ ತನ್ನ ಅಂಗಾಗಗಳ ಮೂಲಕ ಕೆಲವು ವಿಷಯಗಳನ್ನು ಹೊರ ಹೊಮ್ಮಿಸಲು ಪ್ರಯತ್ನ ಮಾಡಿದನು. ಭಾಷೆಯ ವಿಕಾಸದಲ್ಲಿ ಈ ಹಂತವು ಅತ್ಯಂತ ಮಹತ್ತ್ವ ಪೂರ್ಣವಾದವು ಎನ್ನುತ್ತಾನೆ. ಈ ಮೂರನೇ ಹಂತದಲ್ಲಿ ಭಾಷೆಯು ಸ್ಥೂಲವಾಗಿ ವಿಕಾಸವಾದದ್ದು ಈ ಹಂತದಲ್ಲೆ ಆಗಿದೆ. ಮಾನವನ ಮಾನಸಿಕ ವಿಕಾಸಚಕ್ರವು ಮುಂದೆ ಅಭಿವೃದ್ಧಿಪಥದಲ್ಲಿ ಸಾಗುತ್ತಾಸೂಕ್ಷ್ಮ ಭಾವನೆಗಳುವ್ಯಕ್ತಗೊಂಡು ಶಬ್ದರಚನೆಯಾಯಿ-ತೆನ್ನುತ್ತಾನೆ, ಇದನ್ನೇ ನಾಲ್ಕನೇ ಹಂತವೆನ್ನುತ್ತಾರೆ. ಈ ಹಂತದಲ್ಲಿ ಸ್ವರ, ವ್ಯಂಜನ ಇತ್ಯಾದಿ ವ್ಯವಸ್ಥೆಗಳು ಸುವ್ಯವಸ್ಥಿತವಾಗಿ ರೂಪುಗೊಂಡುವು. ಧ್ವನಿಗಳು ಪರಸ್ಪರ ಅರ್ಥ ಸಂಬಂಧ ಕಲ್ಪಿಸಿಕೊಂಡವು ಎನ್ನುತ್ತಾನೆ.

---

[29] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಭಾಷಾ ಉತ್ಪತ್ತಿ ಅರ್ಥವಿವರಣೆಯ ಭಾಗದಲ್ಲಿ.

**ಟಾ ಟಾ ಸಿದ್ಧಾಂತ**

ಈ ಸಿದ್ಧಾಂತದ ಪ್ರಕಾರ ಆದಿಮಾನವನು ಆರಂಭದಲ್ಲಿ ಕೆಲಸಮಾಡುವ ಸಂದರ್ಭದಲ್ಲಿ ಗೊತ್ತಿದ್ದೋ, ಗೊತ್ತಿಲ್ಲದೆಯೋ ಉಚ್ಚಾರಣೆಯನ್ನು ಮಾಡುವ ಅವಯವಗಳು ಕೆಲಸಮಾಡುವ ಅವಯವಗಳ ಗತಿಯ ಅನುಕರಣ ಮಾಡುತ್ತಾ ಆ ಸಂದರ್ಭದಲ್ಲಿ ಬರುವ ಕೆಲವು ಧ್ವನಿಗಳಿಂದ ಕೆಲವು ಶಬ್ದಗಳಿಗೆ ಪರಸ್ಪರ ಸಂಬಂಧವುಂಟಾಯಿತು. ಅದುವೆ ಮುಂದೆ ಭಾಷೆಯ ಉದ್ಗಮಕ್ಕೆ ಕಾರಣವಾಯಿತು. ಆದರೆ ಈ ವಾದವನ್ನು ನೇರವಾಗಿ ತಳ್ಳಿಹಾಕಬಹುದಾಗಿದೆ. ನಿರರ್ಥಕವಾದ ಧ್ವನಿಗಳು ಭಾಷೆಯ ಉದ್ಗಮಕ್ಕೆ ಹೇಗೆ ಕಾರಣವಾಗಲು ಸಾಧ್ಯ ಎನ್ನುವಪ್ರಶ್ನೆ ಇಟ್ಟಾಗ ಈ ವಾದವು ಅಸಿಂಧುವಾಗುತ್ತದೆ.

**ಸಂಗೀತ ಸಿದ್ಧಾಂತ**

ಡಾರ್ವಿನ್ ಹಾಗೂ ಯೆಸ್ಪರ್ಸನ್[30] ಈ ವಾದವನ್ನು ಮಂಡಿಸಿದ್ದಾರೆ. ಆದಿ ಮಾನವನು ಆಟದ ರೂಪದಲ್ಲಿ ಮತ್ತು ಹಾಡುತ್ತ ಕುಣಿಯುತ್ತ ತನ್ನ ಸಂತೋಷದಕ್ಷಣಗಳನ್ನು, ವಿರಾಮದ ಸಮಯವನ್ನು ಕಳೆಯುವ ಸಂದರ್ಭದಲ್ಲಿ ವಿಭಿನ್ನ ತೆರನಾದ ಹಾವಭಾವಗಳನ್ನು ವ್ಯಕ್ತಪಡಿಸಲು ಸಂಗೀತದ ಧ್ವನಿಗಳನ್ನು ಬಳಸಿಕೊಂಡ ಇದುವೇ ಮುಂದೇ ಭಾಷೆಯ ಉದ್ಗಮಕ್ಕೆ ಕಾರಣವಾಯಿತು ಎನ್ನುದು ಅವರ ವಾದವಾಗಿದೆ. ಅರ್ಥರಹಿತವಾದ ಧ್ವನಿಗಳನ್ನು ಆತ ಹೊರಡಿಸುತ್ತಿದ್ದ. ಹೀಗೆ ಭಾಷೆಯ ಉದ್ಗಮದ ಕುರಿತು ನಾನಾ ರೀತಿಯ ಅಭಿಪ್ರಾಯಗಳು ವ್ಯಕ್ತವಾಗಿವೆ. ಯಾವುದೇ ಸಿದ್ಧಾಂತಗಳಿಂದಲೂ ಪರಿಪೂರ್ಣವಾಗಿ ಭಾಷೆ ಹೀಗೆಯೇ ಜನಿಸುತ್ತದೆಯೆಂದು ಅಥವಾ ಉದ್ಗಮವಾಗುತ್ತದೆಯೆಂದು ಹೇಳಲು ಸಾಧ್ಯವಾಗಲಿಲ್ಲ. ಸಾಧ್ಯವಾಗುವುದೂ ಇಲ್ಲ. ಮೇಲಿನ ಎಲ್ಲಸಿದ್ಧಾಂತಗಳಲ್ಲಿ ಭಾಷೆಯನ್ನು ರೂಢಿಗತವಾಗಿ ಹೇಗೆ ಮಾನವ

---

[30] ಕನ್ನಡ ಭಾಷಾ ಶಾಸ್ತ್ರ, ರಾ.ಯ.ಧಾರವಾಡಕರ, ಆರನೇ ಅವೃತ್ತಿ, ಗೀತಾಬುಕ್ ಹೌಸ್ ಮೈಸೂರು. 1987, ಪುಟ ಸಂಖ್ಯೆ 27, ಒಂದನೇ ಪ್ಯಾರಾ ಮೊದಲ ಸಾಲು.

ಬಳಸುತ್ತಾನೆ ಎಂಬುದಾಗಿ ಚರ್ಚಿಸಿದ್ದಾರೆಯೇ ಹೊರತು ಮೂಲವಾಗಿ ಭಾಷೆಯು ಹೇಗೆ ಉದ್ಗಮವಾಗುತ್ತದೆ ಎಂಬುದನ್ನು ಚರ್ಚಿಸಿದಂತಿಲ್ಲ.ಒಟ್ಟಾರೆಯಾಗಿ ಈ ಮೇಲಿನ ಎಲ್ಲ ಸಿದ್ಧಾಂತಗಳಿಂದ ಸ್ಪಷ್ಟವಾಗುವುದೇನೆಂದರೆ ಭಾಷೆಯನ್ನು ಬಳಸುವ ಯಂತ್ರ ಅಥವಾ ಶಕ್ತಿಯನ್ನು ಮಾನವ ಜನ್ಮದಿಂದಲೇ ಪಡೆಯುತ್ತಾನೆ. ಆ ಯಂತ್ರವು ಯಾವ ಭಾಷೆಯನ್ನಾದರೂ ಕಲಿಯುವ ಸಾಮರ್ಥ್ಯವಿರುತ್ತದೆ. ಆದರೆ ನಾವುಮೊದಲಿಗೆ ಅಂದರೆ ಬಾಲ್ಯಾವಸ್ಥೆಯಲ್ಲಿ ಯಾವುದನ್ನು ರೂಢಿಸುತ್ತೇವೆಯೋ ಅದನ್ನು ಬಹುಬೇಗ ಕಲಿಯುವ ಸಾಮರ್ಥ್ಯ ಮಗುವಿಗೆ ಇರುತ್ತದೆ. ನಾವು ಬಾಲ್ಯಾವಸ್ಥೆಯನ್ನು ಕಳೆದು ದೊಡ್ಡವರಾಗುತ್ತಬಂದಂತೆಲ್ಲ ಸಾಂದರ್ಭಿಕವಾಗಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುತ್ತೇವೆ. ಇವುಗಳನ್ನೆಲ್ಲ ಗಮನಿಸಿದಾಗ ಭಾಷೆಉಗಮವಾಗುವುದು ಆಂತರಂಗಿಕಶಕ್ತಿ ಮತ್ತು ಬಾಹ್ಯ ಇಚ್ಛೆ, ಪ್ರಯತ್ನ ಗಳ ಸಮ್ಮಿಶ್ರಣದಿಂದ ಎಂಬುದುಸ್ಪಷ್ಟ.

## 2.4 ಭಾಷೆಯಕುರಿತಾದ ಹೇಳಿಕೆಗಳು

ಭಾಷೆಯ ಕುರಿತು ಅನೇಕ ಭಾಷಾವಿಜ್ಞಾನಿಗಳು ತಮ್ಮದೇ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳನ್ನು ಈಕೆಳಗಿನಂತೆ ಕ್ರೋಢೀಕರಿಸಿದ್ದೇನೆ.

1.ಎಫ್.ಡಿ.ಸಸೂರ್ ಎಂಬ ಭಾಷಾವಿಜ್ಞಾನಿಯು **"ಮಾನವನು ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಪಡಿಸುವುದಕ್ಕಾಗಿ ರೂಢಿಸಿಕೊಂಡ ಸಂಕೇತಗಳ ವ್ಯವಸ್ಥೆಯೆ ಭಾಷೆ"**[31] ಎಂದಿದ್ದಾನೆ. ಆದರೆ ಈ ಹೇಳಿಕೆಯು ಕೇವಲ ಅಭಿವ್ಯಕ್ತಿಗೆ ಮಾತ್ರ ಸೀಮಿತವಾಗಿದೆ. ಭಾಷೆಗೆ ಒಂದು ಉದ್ದೇಶವಿದೆ. ಪ್ರತಿಯೊಂದು ಧ್ವನಿಯನ್ನು ಉಚ್ಚರಿಸುವ ಮುನ್ನ ಮಾನವನು ನಿರ್ದಿಷ್ಟ ಉದ್ದೇಶ ಹೊಂದಿರುತ್ತಾನೆ. ಸಂಕೇತಗಳ ಅಭಿವ್ಯಕ್ತಿ ಮಾತ್ರವಲ್ಲ ಅವುಗಳನ್ನು ಸಾಂದರ್ಭಿಕವಾಗಿ ಹೇಗೆ ಬಳಸಬೇಕು ಹಾಗೂ ಭಾಷೆಯನ್ನು ಆಲಿಸುವ ಮಾತನಾಡುವ ಎರಡು ಚಿತ್ತಸ್ಥಿತಿಗಳು ಪರಸ್ಪರ ಅರ್ಥೈಸುವಂತಿರಬೇಕು. ಆದ್ದರಿಂದ ಈ ಹೇಳಿಕೆಯು ಭಾಷೆಯಕುರಿತಾದ ಪರಿಪೂರ್ಣ ಹೇಳಿಕೆಯಾಗಲಾರದು.

---

[31] ಕನ್ನಡಭಾಷಾವ್ಯಾಸಂಗ 6ನೇ ಆವೃತ್ತಿ ,ಡಾಸಂಗಮೇಶ ಸವದತ್ತಿಮಠ ಪುಟ: 16.ರೂಪರಶ್ಮಿ ಪ್ರಕಾಶನ ಕಲಬುರ್ಗಿ 1998.

2. ಎಡ್ವರ್ಡ್ ಸಫೀರ ಎಂಬ ಭಾಷಾವಿಜ್ಞಾನಿಯು **"ತಮ್ಮ ಭಾವನೆಗಳನ್ನು, ಭಾವಾವೇಶಗಳನ್ನು, ಬಯಕೆಗಳನ್ನು ಸ್ವಪ್ರೇರಿತ ಧ್ವನಿ ಸಂಕೇತಗಳಿಂದ ಮನುಷ್ಯ ಇನ್ನೊಬ್ಬರಿಗೆ ತಿಳಿಸುವ ಮಹತ್‌ಸಾಧನವೇ ಭಾಷೆ."**[32]. ಎಂದಿದ್ದಾನೆ.

3.ಜಾಕೋಬ್‌ಕೊರ್ಗ ಎಂಬ ಭಾಷಾವಿಜ್ಞಾನಿಯು **"ಹೇಗೆ ಬೇಕೋಹಾಗೆ ಹಿಗ್ಗಿಸಿ ಕುಗ್ಗಿಸಿ ಹೇಳಬಹುದಾದದ್ದು, ಕೃತಕವಾದದ್ದು ಆಗಿ ನಮ್ಮ ಅನಿಸಿಕೆಗಳನ್ನು ಹೊರಗೆಡಹುದಕ್ಕಾಗಿರುವ ಮಾಧ್ಯಮವೇ ಭಾಷೆ."**[33] ಎಂದಿದ್ದಾನೆ. ಈ ವ್ಯಾಖ್ಯೆಯಪ್ರಕಾರ ಭಾಷೆಯೆನ್ನುವುದು ಸಾಂದರ್ಭಿಕವಾಗಿ ಹೇಳಿದಷ್ಟು ಸುಲಭದಲ್ಲಿ ಹಿಗ್ಗಿಸಿಯೋ ಕುಗ್ಗಿಸಿಯೋ ಬಳಕೆಯಾಗುವಂತದಲ್ಲ. ಅದು ಅನೇಕವರ್ಷಗಳ ಮಾನವಪ್ರಯತ್ನದ ಫಲವಾಗಿದೆ.

4.ಐಸ್ಲರ್ ಎಂಬ ಭಾಷಾವಿಜ್ಞಾನಿಯು " **ಮನಸ್ಸಿರುವ ಯಾವುದೇ ಪ್ರಾಣಿಗಳ ಅನುಭವಗಳ ಅಭಿವ್ಯಕ್ತಿಯೇ ಭಾಷೆ, ಮಾನವನ ಅನುಭವದ ಅಭಿವ್ಯಕ್ತಿ ಭಾಷೆ"**[34] ಎಂದಿದ್ದಾನೆ. ಆದರೂ ಅದನ್ನು ಅನಂತರದ, ಭವಿಷ್ಯದಪೀಳಿಗೆ ನಿರಂತರವಾಗಿ ಅನುಕರಿಸುತ್ತಾ ಹೋಗುತ್ತದೆ. ಆದ್ದರಿಂದ ಅನುಭವಜನ್ಯವಾದರೂ ಅದು ಅನುಕರಣೆಯಿಂದ ಮುಂದಿನಪೀಳಿಗೆಗೆ ಸಾಗುತ್ತಾ ಹೋಗುತ್ತದೆ.

5.ಭಟ್ಟಾಕಳಂಕನು " **ವ್ಯವಹಾರಕ್ಕಾಗಿ ಸಂಕೇತಗಳಿಂದ ಒಳಗೂಡಿದ ಶಬ್ದ ಸಮುದಾಯ ಭಾಷೆ**[35] ಭಾಷೆಯಲ್ಲಿ ಕೇವಲ ಶಬ್ದಸಮುದಾಯ ಮಾತ್ರವಲ್ಲದೆಯೂ ಅಶಾಬ್ದಿಕ ಧ್ವನಿಸಂಕೇತಗಳು ಬಳಕೆಯಾಗುತ್ತವೆ.

6. ಬ್ಲಾಕ ಮತ್ತು ಟ್ರೇಗರ್ ಎಂಬ ಭಾಷಾವಿಜ್ಞಾನಿಯು " **the language is a system of orbitrary vocal symbols by means of which a social group co-operates."**[36] (ಸಮಾಜಸಂಪರ್ಕಕ್ಕಾಗಿರುವ ಯಾದೃಚ್ಛಿಕ

---

[32] ಕನ್ನಡ ಭಾಷಾ ಚರಿತ್ರೆ, ಡಾ.ಕೆ. ಕೆಂಪೇಗೌಡ, ಮೈಸೂರು. ಪ್ರಕಾಶನ ಭಾಷಾ ಭಾರತಿ ಮೈಸೂರು9, ಪುಟ ಸಂಖ್ಯೆ 2 , ಎರಡನೇ ಪ್ಯಾರಾ, ಏಳನೇ ಸಾಲು.

[33] ಕನ್ನಡಭಾಷಾವ್ಯಾಸಂಗ 6ನೇ ಆವೃತ್ತಿ ,ಡಾಸಂಗಮೇಶ ಸವದತ್ತಿಮಠ ಪುಟ: 16

[34] ಕನ್ನಡಭಾಷಾವ್ಯಾಸಂಗ 6ನೇ ಆವೃತ್ತಿ ,ಡಾಸಂಗಮೇಶ ಸವದತ್ತಿಮಠ ಪುಟ: 16

[35] ಕನ್ನಡಭಾಷಾವ್ಯಾಸಂಗ 6ನೇ ಆವೃತ್ತಿ ,ಡಾಸಂಗಮೇಶ ಸವದತ್ತಿಮಠ ಪುಟ: 16

[36] ಕನ್ನಡಭಾಷಾವ್ಯಾಸಂಗ 6ನೇ ಆವೃತ್ತಿ ,ಡಾಸಂಗಮೇಶ ಸವದತ್ತಿಮಠ ಪುಟ: 16

ಮೌಖಿಕ ಧ್ವನಿಸಂಕೇತಗಳ ವ್ಯವಸ್ಥೆ.) ಈತನ ವ್ಯಾಖ್ಯೆಯನ್ನು ಅನೇಕ ಭಾಷಾವಿಜ್ಞಾನಿಗಳು ಭಾಷೆಯಕುರಿತು ಪರಿಪೂರ್ಣಹೇಳಿಕೆ ಎಂದು ಒಪ್ಪದಿದ್ದರೂ ಅತ್ಯಂತ ಅರ್ಥಪೂರ್ಣವಾದ ಹೇಳಿಕೆಯಾಗಿ ಪರಿಗಣಿಸಿದ್ದಾರೆ. ಈತನ ಹೇಳಿಕೆಯಲ್ಲಿ ಇರುವ ಮುಖ್ಯವಿಚಾರಗಳು 'ಭಾಷೆಒಂದುವ್ಯವಸ್ಥೆ' 'ಭಾಷೆಯಲ್ಲಿ ಧ್ವನಿಸಂಕೇತ ಗಳಿವೆ' 'ಭಾಷೆ ಯಾದೃಚ್ಛಿಕವಾದದ್ದು' 'ಭಾಷೆಯ ಉದ್ದೇಶ ಸಮಾಜಸಂಪರ್ಕ' 'ಭಾಷೆ ಮೌಖಿಕವಾದದ್ದು' ಒಟ್ಟಾರೆಯಾಗಿ ಸಮಾಜಸಂಪರ್ಕಕ್ಕಾಗಿರುವ ಯಾದೃಚ್ಛಿಕ, ಮೌಖಿಕ, ಧ್ವನಿಸಂಕೇತಗಳ ವ್ಯವಸ್ಥೆಯೇ ಭಾಷೆ ಎಂದು ಹಲವುವಿಚಾರಗಳನ್ನು ಭಾಷೆಯ ಕುರಿತು ಹೇಳಿದ್ದಾನೆ.

7. ಮಾರ್ಟಿ ಎಂಬ ಭಾಷಾವಿಜ್ಞಾನಿಯು **"ಒಂದು ಚಿತ್ತಸ್ಥಿತಿಯನ್ನು ವ್ಯಕ್ತಪಡಿಸಲು ಮಾಡುವ ಉದ್ದೇಶ ಪೂರ್ವಕ ಧ್ವನಿಗಳ ಉಚ್ಚಾರಣೆಯೇ ಭಾಷೆ"**[37] ಎಂದಿದ್ದಾನೆ. ಈತನ ವ್ಯಾಖ್ಯೆಯಲ್ಲಿ ಭಾಷೆಯು ಏಕಮುಖ ಎನ್ನುವಭಾವ ಬಿಂಬಿತವಾಗುತ್ತದೆ. ಏಕೆಂದರೆ ಭಾಷೆಯನ್ನು ಅಭಿವ್ಯಕ್ತ ಮಾಡಿದರೆಸಾಲದು ಅದು ಇನ್ನೊಂದು ಚಿತ್ತಸ್ಥಿತಿಯನ್ನು ತಲುಪಿ ಅಲ್ಲಿ ಪ್ರತಿಕ್ರಿಯೆ ಉಂಟಾಗುವಿಕೆಗೆ ಕಾರಣವಾಗಬೇಕು.

8. ಎರ್ಡ್‌ಮೆನ್ ಎಂಬ ಭಾಷಾವಿಜ್ಞಾನಿಯು **"ಭಾಷೆಯನ್ನುವುದು ಅಭಿಪ್ರಾಯಗಳ ಅಭಿವ್ಯಕ್ತಿಯ ಒಂದು ವಿಧಾನವಲ್ಲ ಅದೊಂದು ರೀತಿಯ ಆಲೋಚನೆ,ಭಾಷೆಯೆನ್ನುವುದು ಒಂದುಸಾಧನ ಮನುಷ್ಯರಿಗೆ ವಿಶಿಷ್ಟವಾಗಿರುವ ಆಲೋಚನೆಯಸಾಧನ ಅಥವಾ ಅಂಗ**[38].ಈತ ಭಾಷೆಯ ಮುಖ್ಯಲಕ್ಷಣವನ್ನೇ ಅಲಕ್ಷಿಸಿಹೇಳಿದ್ದಾನೆ. ಅಭಿವ್ಯಕ್ತಿಯಿಲ್ಲದೇ ಭಾಷೆಯಾಗಲು ಹೇಗತಾನೆ ಸಾಧ್ಯ?

9.ಎಬ್ಬಿಂಗಹಾಸ್ ಎಂಬ ಭಾಷಾವಿಜ್ಞಾನಿಯು **" ಯಾವಾಗ ಬೇಕಾದರೂ ಸ್ವಪ್ರೇರಿತವಾಗಿ ಉಚ್ಚರಿಸಲಾಗುವ ಸಾಂಪ್ರದಾಯಿಕ ಸಂಕೇತಗಳೇ ಭಾಷೆ"**[39] ಎಂದಿದ್ದಾನೆ. ಸಾಂಪ್ರದಾಯಿಕ ಸಂಕೇತಗಳ ವ್ಯವಸ್ಥೆ ಎನ್ನುವ ಈತನವಿಚಾರ ಉಲ್ಲೇಖನೀಯವಾದದ್ದು. ಇಂತಹ ಸಂಕೇತಗಳು ಯಾದೃಚ್ಛಿಕವಾದವುಗಳು ಎನ್ನುವುದು ಈ ಹೇಳಿಕೆಯಲ್ಲಿ ವ್ಯಕ್ತವಾಗಿಲ್ಲ.

---

[37] ಐಚ್ಛಿಕ ಕನ್ನಡ ಭಾಗ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[38] ಐಚ್ಛಿಕ ಕನ್ನಡ ಭಾಗ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[39] ಐಚ್ಛಿಕ ಕನ್ನಡ ಭಾಗ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

10. ಸಾಪಿಯರ್ ಎಂಬ ಭಾಷಾವಿಜ್ಞಾನಿಯು **"ಸ್ವಪ್ರೇರಿತವಾಗಿ ಉಚ್ಚರಿಸಿದ ಸಂಕೇತಗಳ ಒಂದು ವ್ಯವಸ್ಥೆಯ ಮೂಲಕ ಅಭಿಪ್ರಾಯಗಳನ್ನು, ಭಾವಗಳನ್ನು, ಇಷ್ಟಗಳನ್ನು, ಪ್ರದಾನ ಮಾಡಲು ಇರುವ ಮನುಷ್ಯನಿಗೆ ವಿಶಿಷ್ಟವಾದ ಅವನ ಸ್ವಭಾವ ಸಿದ್ಧವಲ್ಲದ ರೀತಿಯೇ ಭಾಷೆ**[40] ಎಂದು ಭಾಷೆಯಕುರಿತು ತನ್ನ ವ್ಯಾಖ್ಯಾನಗಳನ್ನು ನೀಡಿದ್ದಾನೆ.

11. ಪ್ಲೆಟೋ **"ಧ್ವನಿ ಸಂಕೇತಗಳಿಂದ ಮನುಷ್ಯನು ವಿಚಾರಗಳನ್ನು ಅಭಿವ್ಯಕ್ತಿ ಮಾಡುವ ಸಾಧನ ಭಾಷೆ"** [41] **ಎಂದು ಹೇಳಿದ್ದಾನೆ.**

12. ಹೆನ್ರಿಸ್ವೀಟ್ ಎಂಬ ಭಾಷಾವಿಜ್ಞಾನಿಯು **"ಪದಗಳ ಮೂಲಕ ವಿಚಾರಗಳನ್ನು ಅಭಿವ್ಯಕ್ತಗೊಳಿಸುವುದು ಭಾಷೆ"**[42] **ಎಂದು ಹೇಳಿದ್ದಾನೆ.**

13. **ಕ್ರೋಚೆ** ಎಂಬ ಭಾಷಾವಿಜ್ಞಾನಿಯು **" ಸೀಮಿತವಾದ ವ್ಯವಸ್ಥಿತ ಶಬ್ದ ಸಮುದಾಯಗಳನ್ನೊಳಗೊಂಡ ಅಭಿವ್ಯಕ್ತಿಗೆ ಕಾರಣವಾಗುವ ಮಾಧ್ಯಮವೇ ಭಾಷೆ.**[43] **ಎಂದು ಹೇಳಿದ್ದಾನೆ.**

14. **ಕ್ವಿಲ್ಲರ್ ಕಾಚ್** ಎಂಬ ಭಾಷಾವಿಜ್ಞಾನಿಯು **" ಪದಗಳೆಂಬ ನಾಣ್ಯಗಳ ಮೂಲಕ ನಮ್ಮೊಳಗಿನ ಆಲೋಚನೆಗಳನ್ನು ವಿನಿಮಯ ಮಾಡಿಕೊಳ್ಳಲು ಸಾಧ್ಯವಾಗುವ ಸಾಧನವೇ ಭಾಷೆ.**[44] **ಎಂದು ಹೇಳಿದ್ದಾನೆ.**

15. ಸ್ಟುರ್ಟವಾಂಟ್ ಎಂಬ ಭಾಷಾವಿಜ್ಞಾನಿಯು **" ಒಂದು ಸಮಾಜದ ಸದಸ್ಯರು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಒಂದು ಧ್ವನಿಸಂಕೇತಗಳ ವ್ಯವಸ್ಥೆ ಭಾಷೆ"**[45] **ಎಂದು ಹೇಳಿದ್ದಾನೆ.**

16. Random House Dictionary "language is a body of words and systems for their use common to a people of the same

---

[40] ಐಚ್ಛಿಕ ಕನ್ನಡ ಭಾ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[41] ಐಚ್ಛಿಕ ಕನ್ನಡ ಭಾ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[42] ಐಚ್ಛಿಕ ಕನ್ನಡ ಭಾ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[43] ಐಚ್ಛಿಕ ಕನ್ನಡ ಭಾ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[44] ಐಚ್ಛಿಕ ಕನ್ನಡ ಭಾ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

[45] ಐಚ್ಛಿಕ ಕನ್ನಡ ಭಾ2 ಪ್ರೊ. ಬಿ.ಆರ್.ರಾಮಚಂದ್ರ ಗೌಡ. ಪುಟ: 169

community or nation , the same geographical or the same cultural tradition"[46]

( ಭಾಷೆಯು ಒಂದು ಸಮಾಜ ಅಥವಾ ರಾಷ್ಟ್ರಕ್ಕೆ ಸೇರಿದ ಅಥವಾ ಒಂದು ಭೌಗೋಳಿಕ ಪ್ರದೇಶಕ್ಕೆ ಸೇರಿದ ಅಥವಾ ಒಂದು ಸಾಂಸ್ಕೃತಿಕ ನೆಲೆಗಟ್ಟಿಗೆಸೇರಿದ ಜನರು ತಮ್ಮ ಅನುಕೂಲ ಮತ್ತು ವ್ಯವಹಾರಗಳಿಗಾಗಿ ಬಳಸುವ ಧ್ವನಿಸಂಕೇತಗಳ ಒಂದು ಸಾಮಾನ್ಯ ವ್ಯವಸ್ಥೆಯಾಗಿದೆ.)

17.Oxford English dictionary "language are words and methods of combining them for the expression of thought"[47]

(ಮನುಷ್ಯನ ಆಲೋಚನೆಗಳನ್ನು ಅಭಿವ್ಯಕ್ತಗೊಳಿಸುವಸಲುವಾಗಿ ಇರುವ ಒಂದು ಶಬ್ದ ಸಂಯೋಜನಾ ಮಾಧ್ಯಮವೇ ಭಾಷೆ.)

ಹೀಗೆ ಭಾಷೆಯಕುರಿತು ಅನೇಕ ಭಾಷಾವಿಜ್ಞಾನಿಗಳು ಹೇಳಿಕೆಯನ್ನು ನೀಡಿದ್ದರೂ ಅದು ಭಾಷೆಯ ಹೊರಚೌಕಟ್ಟನ್ನು ಲಕ್ಷಿಸಿಕೊಂಡು ನೀಡಿದ ಹೇಳಿಕೆಯಾಗಿದೆ. ವೈಚಾರಿಕವಾಗಿ ಚಿಂತಿಸಿದಾಗ ಭಾಷೆಯು 'ರೂಪರಹಿತ ಕ್ರಿಯಾಶೀಲ'ವಾಗಿರುವಕಾರಣ ಒಂದು ವಾಕ್ಯದಲ್ಲಿ ಅದನ್ನು ಸ್ಪಷ್ಟೀಕರಿಸುವುದು ಅಸಾಧ್ಯ. ಭಾಷೆಯ ಕುರಿತು ಧ್ವನಿಸಂಕೇತಗಳು, ವ್ಯವಸ್ಥೆ, ಮೌಖಿಕ ವ್ಯವಸ್ಥೆ ಇತ್ಯಾದಿ ಯಾವುದೇ ವ್ಯಾಖ್ಯೆಗಳಿದ್ದರೂ ಇವು ಭಾಷೆಯಲ್ಲಿ ಬಳಕೆಯಾಗುವ ಸಾಧನಗಳನ್ನು ಗಮನಿಸಿಹೇಳಿದ ವ್ಯಾಖ್ಯೆಗಳಾಗಿವೆ. ಜೀವಿಯ ಶರೀರಕ್ಕೆ ಚೈತನ್ಯನೀಡುವ  ಶಕ್ತಿಯನ್ನು ನಾವುಕಾಣಲು ಅಸಾಧ್ಯವಾಗಿರುವಂತೆ ಭಾಷೆಯನ್ನು ಚಾಕ್ಷುಷರೂಪದಲ್ಲಿ ಕಾಣುವುದು ಅಸಾಧ್ಯವಾಗಿದೆ. ಆದ್ದರಿಂದ ಭಾಷೆ 'ರೂಪರಹಿತ ಕ್ರಿಯಾಶೀಲ' ವಾಗಿರುವ ಕಾರಣ ಅನುಭವಗಮ್ಯವೇ ಹೊರತು ದೃಷ್ಟಿಗೋಚರವಲ್ಲ. ಭಾಷಾ ಸಾಧನಗಳು ಮಾತ್ರ ದೃಷ್ಟಿಗೋಚರವಾಗಿವೆ.

---

[46] Random House Dictionary ಇಂದ ಅಂತರ್ಜಾಲ ಗೂಗಲ್ ಸರ್ಚ, ಡೆಫಿನೇಶನ್ಸ ಆಫ್ ಲಾಂಗ್ವೇಜ್.

[47] Oxford English dictionary ಇಂದ ಅದೇ ಅಂತರ್ಜಾಲ ಗೂಗಲ್ ಸರ್ಚ, ಡೆಫಿನೇಶನ್ಸ ಆಫ್ ಲಾಂಗ್ವೇಜ್.

# ಅಧ್ಯಾಯ 3 ಭಾಷೆ_ ವಿಜ್ಞಾನ_ ಭಾಷಾವಿಜ್ಞಾನ.

## 3.1 ಭಾಷೆ ಮತ್ತು ವಿಜ್ಞಾನ

'ವಿಜ್ಞಾನ' ಎನ್ನುವ ಪದವನ್ನು ಸಾಮಾನ್ಯವಾಗಿ ರಸಾಯನ, ಭೌತ ಹಾಗು ಜೀವ ವಿಜ್ಞಾನ ಕ್ಷೇತ್ರದಲ್ಲಿ ಸಾಮಾನ್ಯವಾಗಿ ಬಳಸುತ್ತಿರುವುದು ಕಂಡುಬರುತ್ತದೆ. ಇದು ವಿಜ್ಞಾನ ಪದದ ಸಂಕುಚಿತ ಅರ್ಥವಾಗುತ್ತದೆ. ವಿಜ್ಞಾನವೆಂದರೆ ವ್ಯವಸ್ಥಿತ ಅಧ್ಯಯನ ಎಂದರ್ಥ. ಯಾವುದೇ ವಿಷಯದ ವ್ಯವಸ್ಥಿತವಾದ ಅಧ್ಯಯನಕ್ರಮವನ್ನು ವಿಜ್ಞಾನವೆಂದು ಕರೆಯುತ್ತಾರೆ. ಜೊತೆಗೆ 'ವಿಶಿಷ್ಟತೆ' ಇದರಮತ್ತೊಂದು ಗುಣವಾಗಿದೆ. ಭಾಷೆಯ ಕುರಿತಾದ ವಿಶಿಷ್ಟವಾದ ಜ್ಞಾನವನ್ನೆ ಭಾಷಾವಿಜ್ಞಾನ ಎನ್ನಬಹುದು. ಭಾರತದಲ್ಲಿ ಬಹಳಷ್ಟು ಪ್ರಾಚೀನಕಾಲದಲ್ಲಿಯೇ 'ವಿಜ್ಞಾನ' ಎಂಬ ಶಬ್ದದಪ್ರಯೋಗವಾಗಿರುವುದು ಕಂಡುಬರುತ್ತದೆ. ವೇದಾಂತದ 12 ಮಹಾವಾಕ್ಯಗಳಲ್ಲೊಂದಾದ ಬೃಹದಾರಣ್ಯಕೋಪನಿಷತ್ತಿನಲ್ಲಿರುವ ವಿಜ್ಞಾನಂ ಆನಂದಂಬ್ರಹ್ಮ[48] (ವಿಜ್ಞಾನವು ಬ್ರಹ್ಮಾನಂದವನ್ನು ಕೊಡುತ್ತದೆ) ಎಂದು ಉಲ್ಲೇಖವಾಗಿರುವುದು ಕಂಡುಬರುತ್ತದೆ. ಅದೇ ಉಪನಿಷತ್ತಿನಲ್ಲಿ ಬ್ರಹ್ಮಸ್ವರೂಪವೆಂದು ಕರೆಯಲಾಗಿದೆ. ತೈತ್ತಿರೀಯ ಉಪನಿಷತ್ತಿನಲ್ಲಿ ವಿಜ್ಞಾನಂದೇವಾಃ ಸರ್ವೇಬ್ರಹ್ಮ ಜ್ಯೇಷ್ಠಮುಪಾಸತೇ[49] ಎಂದು ವಿಜ್ಞಾನವನ್ನು ಜ್ಞಾನರಾಶಿಗಳಲ್ಲಿಯೇ ಶ್ರೇಷ್ಠ ಎಂದು ಗುರುತಿಸಿದ್ದಾರೆ.

ಛಾಂದೋಗ್ಯೋಪನಿಷತ್ತಿನಲ್ಲಿ

ವಿಜ್ಞಾನೇನವಾ ಋಗ್ವೇದಂ ವಿಜಾನಾತಿ ಯಜುರ್ವೇದಂ,
ಸಾಮವೇದಮಾಥರ್ವಣಂ ವಿಜ್ಞಾನಮುಪಾಸ್ಸ್ವ[50]

---

[48] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 3 ರಲ್ಲಿ ಮೂರನೇ ಪ್ಯಾರಾ.

[49] ಅದೇ.

[50] ಅದೇ.

ಅಂದರೆ ವಿಜ್ಞಾನ ವಿಲ್ಲದೆ ಋಗ್ವೇದ,ಯಜುರ್ವೇದ,ಸಾಮವೇದ ಹಾಗು ಅಥರ್ವಣ ವೇದಗಳ ಜ್ಞಾನವುಂಟಾಗುವುದಿಲ್ಲ. ವಿಜ್ಞಾನದ ಅರಿವಿನಿಂದಮಾತ್ರ ಇವುಗಳ ತಿಳುವಳಿಕೆ ಸಾಧ್ಯವಾಗುತ್ತದೆ. ಭಗವದ್ಗೀತೆಯಲ್ಲಿಯೂ "ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ".[51](ಜ್ಞಾನವು ವಿಜ್ಞಾನದಬಲದಿಂದ ಸಿದ್ಧಿಸಿದರೆ ಬ್ರಹ್ಮಕರ್ಮವು ಸಹಜವಾಗಿಯೇ ಪ್ರಾಪ್ತವಾಗುತ್ತದೆ). ಸ್ಥೂಲವಸ್ತುಗಳ ಬಗ್ಗೆ ಸ್ಥೂಲರೂಪದಲ್ಲಿ ನಮಗೆ ಗೋಚರವಾಗುವಿಕೆ ಜ್ಞಾನ. ಸೂಕ್ಷ್ಮವಸ್ತುಗಳಬಗ್ಗೆ ಸೂಕ್ಷ್ಮರೂಪದಲ್ಲಿ ನಮಗೆ ಗೋಚರವಾಗುವಿಕೆ ವಿಜ್ಞಾನ. ತಿಲಕರ ಪ್ರಕಾರ "ಜ್ಞಾನವು ಆಧ್ಯಾತ್ಮಿಕವಲಯಕ್ಕೆ ಸಂಬಂಧಿಸಿದ್ದು ಹಾಗು ವಿಜ್ಞಾನವು ಭೌತಿಕ ಜ್ಞಾನ ಕುರಿತಾದದ್ದುಎಂದಿದ್ದಾರೆ". ಭಾಷೆ ಮತ್ತು ವಿಜ್ಞಾನ ಪರಸ್ಪರ ಸಂಬಂಧಹೊಂದಿವೆ. ವಿಜ್ಞಾನದಲ್ಲಿ ವ್ಯವಸ್ಥೆ ಇರುವಂತೆ ಭಾಷೆಯಲ್ಲಿಯೂ ವ್ಯವಸ್ಥೆಯಿದೆ. ವಿಜ್ಞಾನವು ಗುಣಲಕ್ಷಣಗಳನ್ನು ಹೊಂದಿರುವಂತೆಯೇ ಭಾಷೆಯು ಗುಣ ಲಕ್ಷಣಗಳನ್ನು ಹೊಂದಿದೆ. ವಿಜ್ಞಾನದ ಇನ್ನೊಂದು ಪ್ರಮುಖ ಲಕ್ಷಣ ಪ್ರಯೋಗಶೀಲತೆ. ಭಾಷೆಯೂ ಪ್ರಯೋಗಶೀಲ ಗುಣವನ್ನು ಹೊಂದಿದೆ. ಕರಾರುವಾಕ್ಕಾದ ಜ್ಞಾನವನ್ನು ವಿಜ್ಞಾನಕೊಡುತ್ತದೆ ಅದೇರೀತಿ ಭಾಷೆಯೂ ಕೂಡ ಕರಾರು ವಾಕ್ಕಾದ ಜ್ಞಾನವನ್ನು ಕೊಡುತ್ತದೆ. ಇತ್ಯಾದಿ ಹಿನ್ನೆಲೆಯಲ್ಲಿ ಭಾಷೆ ಮತ್ತು ವಿಜ್ಞಾನ ಪರಸ್ಪರ ಸಂಬಂಧಹೊಂದಿವೆ ಎನ್ನುವುದು ಸ್ಪಷ್ಟವಾಗುತ್ತವೆ.

## 3.2 ಭಾಷೆ ಮತ್ತು ಭಾಷಾವಿಜ್ಞಾನ.

ಭಾಷೆಯ ಕುರಿತು ಮೇಲಿನ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಭಾಷಾ ವಿಜ್ಞಾನ ವೆಂದರೆ ಭಾಷೆಯನ್ನು ಕುರಿತು ವ್ಯವಸ್ಥಿತವಾಗಿ ಅಧ್ಯಯನಮಾಡುವ ವಿಜ್ಞಾನದ ಒಂದು ಶಾಖೆಯಾಗಿದೆ. ಇತರವಿಜ್ಞಾನಗಳಿಗಿಂತ (ರಸಾಯನ, ಭೌತ ಮತ್ತು ಜೀವವಿಜ್ಞಾನಗಳಿಗಿಂತ) ಭಿನ್ನವಾದ ವಿಜ್ಞಾನವಾಗಿದೆ ಹಾಗು ಅವುಗಳಷ್ಟು ಕರಾರುವಾಕ್ಕಾದ ಜ್ಞಾನವನ್ನು ಮತ್ತು ಪ್ರಯೋಗಶೀಲ ಗುಣವನ್ನು ಭಾಷಾ ವಿಜ್ಞಾನಹೊಂದಿಲ್ಲ. ಆರೀತಿಯ ಪ್ರಯೋಗ ಶೀಲ ಗುಣವೂ ಭಾಷಾ ವಿಜ್ಞಾನಕ್ಕಿಲ್ಲ. ಭಾಷಾವಿಜ್ಞಾನದಲ್ಲಿ

---

[51] ಭಗವದ್ಗೀತೆ, ಗೀತಾ ಪ್ರೆಸ್ ಗೋರಖಪುರ, 23ನೇ ಆವೃತ್ತಿ,2009, 18ನೇ ಅಧ್ಯಾಯ ಜ್ಞಾನಯೋಗ 42ನೇ ಶ್ಲೋಕ,ಪುಟ 272.

ಭಾಷೆಯಸಾಧನಗಳಾದ ಧ್ವನಿ, ಧ್ವನಿಮಾ, ಆಕೃತಿಮಾ, ಪದ, ವಾಕ್ಯ, ಅರ್ಥ ಇತ್ಯಾದಿಕುರಿತಾದ ವ್ಯವಸ್ಥಿತ ಅಧ್ಯಯನ ನಡೆಯುತ್ತದೆ. ಭಾಷೆಯು ಜೀವಂತವಾಗಿರಲು ಭಾಷಾವಿಜ್ಞಾನ ಸಹಕಾರಿಯಾಗಿದೆ. ಭಾಷಾವಿಜ್ಞಾನದಿಂದ ಭಾಷೆ ಇನ್ನಷ್ಟು ಸತ್ತ್ವಯುತವಾಗುತ್ತದೆ, ಪರಿಣಾಮಕಾರಿಯಾಗಿ ಬಳಕೆಯಾಗುತ್ತದೆ. ಉದಾಹರಣೆಗೆ ಕನ್ನಡ ಭಾಷೆಗೆ ಒಂದು ವ್ಯಾಕರಣ ಸಂಪ್ರದಾಯವಿದೆ. ಸಂಸ್ಕೃತಭಾಷೆಗೆ ಒಂದು ವ್ಯಾಕರಣ ಸಂಪ್ರದಾಯವಿದೆ. ಅದೇರೀತಿ ಭಾಷಾವಿಜ್ಞಾನದ ಸಂಪ್ರದಾಯವೂ ರೂಢಿಯಲ್ಲಿದೆ. ಇವುಗಳಿಂದ ಕನ್ನಡ–ಸಂಸ್ಕೃತ ಭಾಷೆಗಳು ಸಾವಿರಾರು ವರ್ಷಗತಿಸಿದರೂ ಇಂದು ಜೀವಂತವಾಗಿವೆ. ಒಂದುವೇಳೆ ವ್ಯಾಕರಣ ಮತ್ತು ಭಾಷಾವೈಜ್ಞಾನಿಕ ಚಿಂತನೆಗಳು ಭಾಷೆಯಲ್ಲಿ ನಡೆಯದಿದ್ದರೆ ಅದು ಒಂದು ಸಾಮಾನ್ಯಭಾಷೆಯಾಗಿ ಕಾಲಾಂತರದಲ್ಲಿ ನಶಿಸಿಯೋ, ಪರಿವರ್ತನೆಯಾಗಿಯೋ ಮಾರ್ಪಡುತ್ತದೆ ಅಥವಾ ಮರೆಯಾಗುತ್ತದೆ. ಕನ್ನಡ–ಸಂಸ್ಕೃತ ಭಾಷೆಗಳು ಇಂದು ಪುರಸ್ಕೃತಗೊಳ್ಳುತ್ತಿರುವುದಕ್ಕೆ ಕಾರಣಗಳಲ್ಲಿ ವ್ಯಾಕರಣ/ಭಾಷಾವಿಜ್ಞಾನದ ಕೊಡುಗೆಯೂ ಅಪಾರವಾದುದು. ಆದ್ದರಿಂದ ಒಂದು ಭಾಷೆಯನ್ನು ಅರಿಯುವಾಗ ಅದರ ಭಾಷಾವಿಜ್ಞಾನವನ್ನು ಅರಿಯುವುದು ಯುಕ್ತ, ಸೂಕ್ತವಾಗಿದೆ.

### 3.3 ವ್ಯಾಕರಣ ಮತ್ತು ಭಾಷಾವಿಜ್ಞಾನ.

ಪ್ರಾಚೀನರದ್ದು ವ್ಯಾಕರಣಪರಂಪರೆಯಾದರೆ ಆಧುನಿಕರದ್ದು ಭಾಷಾವಿಜ್ಞಾನ ಸಂಪ್ರದಾಯವಾಗಿದೆ. ಪ್ರಾಚೀನರು ಭಾಷೆಯ ವೈಜ್ಞಾನಿಕವಿಶ್ಲೇಷಣೆಗೆ ಒತ್ತುಕೊಡದೆ, ಭಾಷೆಯ ಹಿನ್ನೆಲೆ, ಉಗಮ ಇತ್ಯಾದಿಗಳನ್ನು ವಿಮರ್ಶಿಸದೆ ಕೇವಲ ಉಚ್ಚಾರಣೆ ಹೇಗೆ, ಬಳಸುವುದು ಹೇಗೆ? ಹಾಗೂ ಗ್ರಂಥಸ್ಥಭಾಷೆಗೆ ಮಾತ್ರ ಸೀಮಿತವಾಗಿ ಅಧ್ಯಯನ ನಡೆಸುತ್ತಿದ್ದರು. ವ್ಯಾಕರಣವು ಆಜ್ಞಾಧಾರಕವಾಗಿತ್ತು. ಒಂದು ಭಾಷೆಯ ವ್ಯಾಕರಣ ಸಂಪ್ರದಾಯವನ್ನು ಇನ್ನೊಂದು ಭಾಷೆಯ ವ್ಯಾಕರಣಸಂಪ್ರದಾಯದೊಂದಿಗೆ ಹೋಲಿಸುವ ಕಾರ್ಯ ನಡೆಯುತ್ತಿರಲಿಲ್ಲ. ಆದರೆ ಇಂದು ಭಾಷಾ ವಿಜ್ಞಾನಿಗಳು ಧ್ವನಿ ಅದರ ಉದ್ಗಮವನ್ನು ವೈಜ್ಞಾನಿಕವಾಗಿ, ಪ್ರಾಯೋಗಿಕವಾಗಿ ವಿಶ್ಲೇಷಿಸಬಲ್ಲವರಾಗಿದ್ದಾರೆ. ಗ್ರಂಥಸ್ಥ ಭಾಷೆಗೆ ಮಾತ್ರ ಸೀಮಿತವಾದ ಭಾಷೆಯನ್ನುಕುರಿತ ಚರ್ಚೆಯನ್ನು

ಆಡುಭಾಷೆಗೂ ವಿಸ್ತರಿಸಿಕೊಂಡಿದ್ದಾರೆ. ಒಂದು ಕಾಲಘಟ್ಟದ ಭಾಷೆಯಕುರಿತಾದ ಚರ್ಚೆ ಭಾಷಾವಿಜ್ಞಾನದಲ್ಲಿ ನಡೆದರೆ ಪ್ರಾಚೀನರಲ್ಲಿ ಕೇವಲ ಪಾರಂಪರಿಕವಾಗಿ ಸಮಗ್ರ ಭಾಷೆಯ ಇತಿಹಾಸದ ಮೇಲೆ ನಡೆಯುತ್ತದೆ. ಪಾರಂಪರಿಕ ವ್ಯಾಕರಣವನ್ನೇ ಆಧುನಿಕರು ಭಾಷಾವಿಜ್ಞಾನ ಎಂದು ಕರೆದಿದ್ದಾರೆ. ಶಾಸ್ತ್ರೀಯವಾಗಿ ಅಧ್ಯಯನಮಾಡಿದಾಗ ಭಾಷಾವಿಜ್ಞಾನದ ಪರಿಕಲ್ಪನೆಯು ಪಾಣಿನಿಯ ಕಾಲಕ್ಕಾಗಲೇ ಸಿಗುತ್ತಾದರೂ ಆಗಿನ ಕಲ್ಪನೆ ಮತ್ತು ಈಗಿನ ವಿಚಾರಧಾರೆ ವಿಭಿನ್ನತೆರನಾದದ್ದು. ವ್ಯಾಕರಣದ ಉದ್ದೇಶ ಬೇರೆ ಹಾಗೂ ಭಾಷಾವಿಜ್ಞಾನದ ಉದ್ದೇಶ ಬೇರೆ. ವ್ಯಾಕರಣವು ಇವತ್ತಿನಷ್ಟು ಪ್ರಾಯೋಗಿಕತೆಯನ್ನು ಹೊಂದಿರಲಿಲ್ಲ. ವ್ಯಾಕರಣದಲ್ಲಿ ಒಂದು ಭಾಷೆಗೆ ಮಾತ್ರ ಸೀಮಿತವಾದ ಭಾಷಾವಿಶ್ಲೇಷಣಾ ಕಾರ್ಯ ನಡೆದರೆ, ಭಾಷಾ ವಿಜ್ಞಾನದಲ್ಲಿ ತುಲನಾತ್ಮಕವಾಗಿ ಮತ್ತು ಐತಿಹಾಸಿಕವಾಗಿ ಒಂದು ಭಾಷೆಯ ವಿಶ್ಲೇಷಣಾಕಾರ್ಯ ನಡೆಯುತ್ತದೆ. ವ್ಯಾಕರಣಸಂಪ್ರದಾಯವೂ ಒಂದು ನಿರ್ದಿಷ್ಟ ಕಾಲಘಟ್ಟಕ್ಕೆ ಮಾತ್ರ ಅನ್ವಯವಾಗುವಂತಿದ್ದರೆ ಭಾಷಾವಿಜ್ಞಾನ ಸಾರ್ವಕಾಲಿಕ ಸತ್ಯವಾದ ಮಾಹಿತಿಯನ್ನು ನೀಡುತ್ತದೆ. ಪ್ರಾಯೋಗಿಕತೆ, ವಸ್ತುನಿಷ್ಠವಾದ ದೃಷ್ಟಿಕೋನ, ಸಮಸ್ಯಾಪರಿಹಾರ, ಕರಾರುವಾಕ್ಕಾದ ನಿರ್ಣಯಗಳು ಭಾಷಾ ವಿಜ್ಞಾನದ ಲಕ್ಷಣಗಳಾದರೆ ವ್ಯಾಕರಣವು ಇವುಗಳಿಗೆ ತದ್ವಿರುದ್ಧವಾಗಿ ರಾಜಾಜ್ಞೆಯರೀತಿಯಲ್ಲಿ ವ್ಯವಹರಿಸಲ್ಪಡುತ್ತಿತ್ತು. ಹೀಗೆ ಭಾಷಾವಿಜ್ಞಾನ ಮತ್ತು ವ್ಯಾಕರಣ ಸಂವಾದಿಪದಗಳಂತೆ ಕಂಡರೂ ಪರಸ್ಪರ ವ್ಯತ್ಯಾಸಹೊಂದಿವೆ.

### 3.4 ಭಾಷಾವಿಜ್ಞಾನ ಮತ್ತು ಧ್ವನಿವಿಜ್ಞಾನ.

ಭಾಷಾವಿಜ್ಞಾನದವ್ಯಾಪ್ತಿ ವಿಶಾಲವಾಗಿದ್ದರೆ ಧ್ವನಿವಿಜ್ಞಾನದವ್ಯಾಪ್ತಿ ಕಿರಿದಾಗಿದೆ. ಭಾಷಾವಿಜ್ಞಾನದ ಒಂದುಶಾಖೆ ಧ್ವನಿವಿಜ್ಞಾನವಾಗಿದೆ. ಭಾಷಾವಿಜ್ಞಾನದಲ್ಲಿ ಧ್ವನಿವಿಜ್ಞಾನದ ವಿಶ್ಲೇಷಣೆಯಜೊತೆಗೆ ಧ್ವನಿಮಾವಿಜ್ಞಾನ (ಅಂದರೆ ಒಂದು ಭಾಷೆಯಲ್ಲಿಯ ಪ್ರಮುಖ ಧ್ವನಿಗಳುಯಾವವು ಅವುಗಳನ್ನು ನಿರ್ಧರಿಸುವ ಬಗೆಹೇಗೆ ಎಂಬುದನ್ನು ವಿವರಿಸುವ ಭಾಷಾವಿಜ್ಞಾನದ ಒಂದುಶಾಖೆ), ಆಕೃತಿಮಾವಿಜ್ಞಾನ(ಒಂದು ಭಾಷೆಯಲ್ಲಿ ಪ್ರಮುಖ ಧ್ವನಿಗಳು/ಧ್ವನಿಮಾಗಳು ಸೇರಿ ಹೇಗೆ ಅರ್ಥಪೂರ್ಣ ಶಬ್ದಘಟಕಗಳಾಗುತ್ತವೆ. ಅವುಗಳ ಮಾನದಂಡಗಳೇನು ಇತ್ಯಾದಿ ಕುರಿತು ವಿಶ್ಲೇಷಿಸುವ ಭಾಷಾವಿಜ್ಞಾನದ ಶಾಖೆ) ಅರ್ಥ ವಿಜ್ಞಾನ (ಭಾಷೆಯಲ್ಲಿ ಅರ್ಥಪೂರ್ಣ ಶಬ್ದರಚನೆಯನ್ನು ತಿಳಿಹೇಳುವ ಶಾಸ್ತ್ರವಾಗಿದೆ),

ವಾಕ್ಯವಿಜ್ಞಾನ (ಶಬ್ದಶಬ್ದಗಳುಸೇರಿ ಹೇಗೆ ವಾಕ್ಯವಾಗುತ್ತವೆ ಎಂಬುದನ್ನು ವಿಶದೀಕರಿಸುವ ಶಾಸ್ತ್ರವೇ ವಾಕ್ಯವಿಜ್ಞಾನವಾಗಿದೆ). ಹೀಗೆ ಭಾಷಾವಿಜ್ಞಾನ ಈ ಮೇಲಿನ ಐದು ಘಟಕಗಳನ್ನು ಹೊಂದಿ ವಿಶಾಲವ್ಯಾಪ್ತಿಯನ್ನು ಹೊಂದಿದೆ. ಧ್ವನಿವಿಜ್ಞಾನವು ಭಾಷಾವಿಜ್ಞಾನದ ಒಂದು ಶಾಖೆಯಾದರೂ ಅದರ ಕ್ಷೇತ್ರವ್ಯಾಪ್ತಿಯು ತುಂಬ ಮಹತ್ವವಾದುದು ಮತ್ತು ಕ್ಲಿಷ್ಟಕರವಾದುದಾಗಿದೆ. ಧ್ವನಿಮಾವಿಜ್ಞಾನ, ಆಕೃತಿಮಾವಿಜ್ಞಾನ, ವಾಕ್ಯವಿಜ್ಞಾನಗಳಲ್ಲಿ ಬರುವ ಭಾಷಾವಿಶ್ಲೇಷಣೆಗೂ ಧ್ವನಿವಿಜ್ಞಾನದ ಭಾಷಾವಿಶ್ಲೇಷಣೆಗೂ ವ್ಯತ್ಯಾಸವಿದೆ. ಧ್ವನಿವಿಜ್ಞಾನದ ಭಾಷಾವಿಶ್ಲೇಷಣೆಗಿಂತ ಈ ಮೇಲಿನ ಭಾಷಾವಿಜ್ಞಾನದಶಾಖೆಗಳಲ್ಲಿ ಹೆಚ್ಚು ಸ್ಪಷ್ಟ ಮತ್ತು ಕರಾರುವಾಕ್ಕಾದ ನಿರ್ಣಯಗಳು ಸಾಧ್ಯವಾಗಿದೆ. ಧ್ವನಿವಿಜ್ಞಾನವನ್ನು ಧ್ವನ್ಯುತ್ಪಾದನಾಶಾಸ್ತ್ರವೆಂತಲೂ ಕರೆಯುತ್ತಾರೆ. ಮಾನವ ಹೊರಡಿಸುವ ಅಸಂಖ್ಯಾತ ಧ್ವನಿಗಳು, ಅವುಗಳನ್ನು ಹೊರಡಿಸುವವಿಧಾನ, ಅವುಗಾಳಿಯಲ್ಲಿ ಪ್ರಸಾರವಾಗುವಬಗೆ ಕೇಳುಗನುಅವುಗಳನ್ನು ಗ್ರಹಿಸುವ ರೀತಿ, ಧ್ವನಿಗಳು ಹೇಗೆಹುಟ್ಟುತ್ತವೆ, ಧ್ವನ್ಯಂಗಗಳು, ಇತ್ಯಾದಿ ವಿಷಯಗಳಕುರಿತಾಗಿ ಅಧ್ಯಯನಮಾಡುತ್ತದೆ. ಹೀಗೆ ಧ್ವನಿವಿಜ್ಞಾನವು ಭಾಷಾವಿಜ್ಞಾನದ ಒಂದು ಶಾಖೆಯಾಗಿದೆ.

### 3.5 ಭಾಷಾ ವಿಜ್ಞಾನದ ಪ್ರಾಚೀನತೆ.

ಭಾಷೆಯಕುರಿತಾದ ವೈಜ್ಞಾನಿಕವಿಶ್ಲೇಷಣೆಗಳು ನಮಗೆ ವೇದಗಳಕಾಲಧಲ್ಲಿಯೇ ಸಿಗುತ್ತವಾದರೂ ಅವುಗಳು ಕೇವಲ ಒಂದುಭಾಷೆಗೆ ಮಾತ್ರಸೀಮಿತವಾಗಿದ್ದವು. ಸಂಸ್ಕೃತಭಾಷೆಗೆ ಮಾತ್ರ ಸೀಮಿತವಾಗದ್ದವು. ಭಾಷಾಶುದ್ಧಿಯ ದೃಷ್ಟಿಯಿಂದಮಾತ್ರ ಅವುಗಳ ಅಧ್ಯಯನ ಸೀಮಿತವಾಗಿತ್ತೇ ಹೊರತು ಇನ್ನಿತರ ಉದ್ದೇಶಗಳನ್ನು ಹೊಂದಿರಲಿಲ್ಲ. ಐತಿಹಾಸಿಕ ದೃಷ್ಟಿಕೋನದಿಂದ ಭಾಷೆಯನ್ನು ಅಧ್ಯಯನ ಮಾಡುವ ಕ್ರಮವಿದ್ದಿರಲಿಲ್ಲ. ಭಾಷೆಯ ಬದಲಾವಣೆಗೆ ಅಲ್ಲಿ ಅವಕಾಶವಿರಲಿಲ್ಲ. ಉದಾಹರಣೆಗೆ ವೇದದ ಷಡಂಗಗಳು ಮುಖ್ಯವಾಗಿ ಭಾಷಾ ಸುರಕ್ಷತೆಗೆಂದು ಇದ್ದವುಗಳೇ ಹೊರತು ಅದನ್ನು ಕಾಲಕ್ಕೆತಕ್ಕ ಹಾಗೆ ಪರಿವರ್ತನೆ ಮಾಡುವದಕ್ಕೆ ಅವಕಾಶವಿರಲಿಲ್ಲ. ನಿರಂತರವಾಗಿ ಪರಿವರ್ತನೆಯಾಗುವುದು ಅದರ ಲಕ್ಷಣವಾಗಿರಲಿಲ್ಲ. ಏಕತೆ ಮತ್ತು ಒಂದೇರೀತಿಯ ಸ್ವರೂಪವನ್ನು ನಿರಂತರವಾಗಿ ಕಾಯ್ದುಕೊಂಡುಬರುವಿಕೆಯೇ ಅದರ

ಪ್ರಧಾನಉದ್ದೇಶವಾಗಿತ್ತು. ಭಾಷೆಯನ್ನು ಐತಿಹಾಸಿಕವಾಗಿ ಅಧ್ಯಯನ ಮಾಡುವ ಕ್ರಮ ಇತ್ತೀಚಿನ ಬೆಳವಣಿಗೆಯಾಗಿದೆ.

Encyclopaedia Britanica

"It is not till the beginning of the 19th century that we see the rise of philology as it is now understood with the chief stress laid on comparison of related languages and the historical development of their structure". [52]

(ಅಂದರೆ 19 ನೇ ಶತಮಾನಕ್ಕಿಂತ ಮುಂಚೆ ಭಾಷೆಯಕುರಿತಾದ ಐತಿಹಾಸಿಕ ಅಧ್ಯಯನ ಆರಂಭವಾಗಿರಲಿಲ್ಲ. ಹೆಚ್ಚುಹೋಲಿಕೆ ಕಂಡುಬರುತ್ತಿರುವ ಭಾಷೆಗಳಲ್ಲಿ ಪರಸ್ಪರ ತುಲನಾತ್ಮಕವಾಗಿ ಅಧ್ಯಯನ ಮಾಡುವ ಐತಿಹಾಸಿಕ ದೃಷ್ಟಿಕೋನ ಆರಂಭವಾಯಿತು ಈ ಹಿಂದೆ ಕೇವಲ ಒಂದು ಭಾಷೆಯನ್ನು ಕುರಿತಾದ ಮತ್ತು ಒಂದು ಕಾಲಕ್ಕೆ ಮಾತ್ರ ಸೀಮಿತವಾದ ಅಧ್ಯಯನ ಕಂಡುಬಂದಿದ್ದರೆ 19 ನೇ ಶತಮಾನದಲ್ಲಿ ಭಾಷೆಗಳ ವಿವಿಧ ಕಾಲಘಟ್ಟಗಳ ಅಧ್ಯಯನ ಕಾಣಬಹುದು).

---

[52] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ, ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 4 ರಲ್ಲಿ ಅಡಿ ಟಿಪ್ಪಣಿ 7.

# ಅಧ್ಯಾಯ 4 : ಧ್ವನಿ

ಯಾವುದೇ ಭಾಷೆಯ ವಿಕಾಸವನ್ನು ಅಧ್ಯಯನವನ್ನು ಗಮನಿಸಿದಾಗ ಧ್ವನಿಗಳು ನಿರಂತರವಾಗಿ ಪರಿವರ್ತನಶೀಲ ಗುಣವನ್ನು ಹೊಂದಿರುವುದು ತಿಳಿದುಬರುತ್ತದೆ. ಭಾಷೆಯು ವಿಕಾಸವಾದಂತೆಲ್ಲ ಧ್ವನಿಗಳು ಸರಳಗೊಂಡಿರುವುದು ಕಂಡುಬರುತ್ತದೆ. ಪ್ರಾರಂಭದಲ್ಲಿ ಅರ್ಥರಹಿತವಾಗಿ ಉದ್ದೇಶರಹಿತವಾಗಿ ಮಾನವ ಸ್ವಾಭಾವಿಕವಾದ ಕೆಲವು ಧ್ವನಿಗಳನ್ನು ಬಳಸುತ್ತಿದ್ದ. ಅನಂತರ ಅದು ವ್ಯವಸ್ಥೆಗೆ ಕಾರಣವಾಯಿತು. ಮೂಲತಃ ಇವು ಭಾಷೆಯು ಉದ್ಗಮವಾಗಲೇಬೇಕೆಂಬ ಉದ್ದೇಶವಿಟ್ಟುಕೊಂಡು ರಚನೆಯಾಗಿರಲಿಲ್ಲ. ಆದ್ದರಿಂದ ಧ್ವನಿಗಳು ಉದ್ದೇಶರಹಿತವಾಗಿ ಹುಟ್ಟಿಕೊಂಡಿವೆ. ಪ್ರಕೃತಿಯಲ್ಲಿನ ಯಾವುದೇ ವಸ್ತುವಿನಿಂದ ಯಾವುದೇ ತರಹದ ಸಪ್ಪಳ ಉಂಟಾದರೂ ಅವುಗಳನ್ನು ಸಾಮಾನ್ಯವಾಗಿ ಧ್ವನಿ ಎಂದು ಕರೆಯುತ್ತಾರೆ. ನೀರಿನಲ್ಲಿ ಮೀನು ಈಜಾಡುವಾಗ ಕೇಳಿ ಬರುವ ಸಪ್ಪಳ, ಮೋಟಾರುವಾಹನಗಳು ಓಡಾಡುವಾಗ ಉಂಟಾಗುವ ಸಪ್ಪಳ, ಗಾಳಿ ಬೀಸುವಾಗ ಉಂಟಾಗುವ ಶಬ್ದ ಇತ್ಯಾದಿಗಳನ್ನೆಲ್ಲ ಧ್ವನಿ ಎಂದು ಸಾಮಾನ್ಯವಾಗಿ ಸಂಬೋಧಿಸುತ್ತೇವೆ. ಆದ್ದರಿಂದ ಧ್ವನಿಯ ಅರ್ಥಕ್ಷೇತ್ರ ತುಂಬ ವಿಶಾಲವಾದುದು. ಪ್ರಕೃತಿಯಲ್ಲಿ ಚೇತನ ಮತ್ತು ಅಚೇತನ ವಸ್ತಗಳಲ್ಲೆಲ್ಲ ಧ್ವನಿಶಕ್ತಿ ವ್ಯಾಪಿಸಿದೆ. ಭಾಷೆಯಲ್ಲಿಯ ಧ್ವನಿಯರೂಪವನ್ನು ಎರಡುರೂಪಗಳಲ್ಲಿ ವಿಭಾಗಿಸಲಾಗಿದೆ. ಡಾ ಡೇನಿಯಲ್ ಜೋನ್ಸ ಮತ್ತು ಡಾ ಸುನಿತಿ ಕುಮಾರ ಚಟರ್ಜಿಯವರು ಸಂವ್‌ಧ್ವನಿ.[53] ಅಂದರೆ ಯಾವ ಧ್ವನಿಯು ನಿಶ್ಚಿತ ಮತ್ತು ಅಪರಿವರ್ತನೀಯ ಗುಣಗಳನ್ನು ಹೊಂದಿರುತ್ತದೋ ಅಂತಹ ಧ್ವನಿಗಳು ಸಂವಧ್ವನಿಗಳೆನ್ನಿಸಿ ಕೊಳ್ಳುತ್ತವೆ. ಕೇನಿಯನ್ ಎನ್ನುವ ಭಾಷಾ ವಿಜ್ಞಾನಿಯು ಧ್ವನಿಗ್ರಾಮ[54] ಎನ್ನುವ ಹೆಸರಿನಲ್ಲಿ ಕರೆದಿದ್ದಾನೆ. ಭಾಷಾ ಧ್ವನಿಯು ಸೀಮಿತ ಅರ್ಥದಲ್ಲಿ ಬಳಕೆ

---

[53] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಧ್ವನಿ ಪದದ ಅರ್ಥವಿವರಣೆಯ ಭಾಗ ಪುಟ 284..

[54] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಧ್ವನಿ ಪದದ ಅರ್ಥವಿವರಣೆಯ ಭಾಗ ಪುಟ 284..

ಗೊಳ್ಳುವ ಧ್ವನಿಯಾಗಿದೆ. ಇದರ ಪ್ರಯೋಗ ಭಾಷೆಗೆಮಾತ್ರ ಸೀಮಿತವಾಗಿದೆ. ಭಾಷೆಯ ಧ್ವನಿಗಳನ್ನು ಇತರ ಧ್ವನಿಯೊಂದಿಗೆ ಬೇರ್ಪಡಿಸುವುದರ ಜೊತೆಗೆಭಾಷೆಯ ಧ್ವನಿ ಚಮತ್ಕಾರವನ್ನು ಎತ್ತಿತೋರಿಸುವುದೂ ಸೇರಿದೆ.

### 4.1 ಧ್ವನಿ ಅರ್ಥ – ನಾನಾರ್ಥಗಳು

'ಧ್ವನಿ' ಎಂಬ ಪದವನ್ನು ಸಾಂದರ್ಭಿಕವಾಗಿ ಅನೇಕ ಅರ್ಥಗಳಲ್ಲಿ ಬಳಸುತ್ತೇವೆ. ಅವುಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿವರಿಸಬಹುದು.

**ವ್ಯಂಗ್ಯಾರ್ಥವಾಗಿ**

ಧ್ವನಿ ಎಂಬ ಶಬ್ದ ಸಾಂದರ್ಭಿಕವಾಗಿ ವಿಭಿನ್ನಾರ್ಥಗಳನ್ನು ಪಡೆದಿದೆ. ಉದಾಹರಣೆಗೆ ಒಬ್ಬವ್ಯಕ್ತಿಯಲ್ಲಿ ಕೋಪಬಂದಾಗ ಅಥವಾ ಬೇಸರವಾದಾಗ "ನೀನು ಏನುಬೇಕಾದರೂ ಮಾಡಿಕೋ" ಎಂದು ನುಡಿಯುತ್ತೇವೆ ಎಂದಿಟ್ಟುಕೊಳ್ಳೋಣ ಆಗ ಆ ಸಂದರ್ಭದಲ್ಲಿ ಅದುನೀಡುವ ವ್ಯಂಗ್ಯಾರ್ಥವು ಮುಖ್ಯವೇ ಹೊರತು ಅದರ ವಾಚ್ಯಾರ್ಥವಲ್ಲ. ಇದಕ್ಕೆ ಬದಲಾಗಿ ವಾಚ್ಯಾರ್ಥವನ್ನು ಗಮನಿಸಿದರೆ ಸಂಪೂರ್ಣ ಅಪಾರ್ಥವುಂಟಾಗುತ್ತದೆ. ವ್ಯಂಗ್ಯಾರ್ಥವನ್ನು ಕಾವ್ಯಮಿಮಾಂಸೆಯಲ್ಲಿ 'ಧ್ವನಿ'[55] ಎಂದು ಕರೆಯುತ್ತಾರೆ.

**ಶಬ್ದವಾಗಿ**

ಧ್ವನಿ ಎಂಬುದನ್ನು ಒಬ್ಬ ಸಾಮಾನ್ಯ ವ್ಯಕ್ತಿ ಅರ್ಥೈಸುವ ರೀತಿ ಸಪ್ಪಳ ಎಂಬುದಾಗಿ. ಉದಾಹರಣೆಗೆ ಕೇಶಿರಾಜನು 'ಘನಸ್ವನಾದಿಧ್ವನಿಗಳ್'[56] ಎಂದು ಹೇಳುವಲ್ಲಿ ಶಬ್ದ ಎನ್ನುವ ಅರ್ಥವುಂಟಾಗುತ್ತದೆ. ಅದೇರೀತಿ ಇಬ್ಬರು ಜೊತೆ ಸೇರಿದಾಗ ಪರಸ್ಪರ ಮಾತನಾಡುತ್ತಾ

---

[55] . ಭಾರತೀಯ ಕಾವ್ಯ ಮೀಮಾಂಸೆ, ತಿ.ನಂ.ಶ್ರೀಕಂಠಯ್ಯ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, 1990 ಐದನೇ ಮುದ್ರಣ, ಪುಟ 40,ಎರಡನೇ ಸಾಲು.

[56] ಕೇಶಿರಾಜದರ್ಪಣ', ವ್ಯಾಖ್ಯಾನ: ಪ್ರೊ। ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಸಂ. ಡಾ. ಪಾದೇಕಲ್ಲು ವಿಷ್ಣುಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ 1999 ಉಡುಪಿ, ಪೀಠಿಕಾ ಭಾಗ ಸೂತ್ರ 12 ಪುಟ ಸಂಖ್ಯೆ : 22, ನಾಲ್ಕನೇ ಸಾಲು.

ಒಳ್ಳೆಯ ಸಪ್ಪಳವಲ್ಲವೆ? ಎಂದು ಪ್ರಕೃತಿಯಲ್ಲಿಯ ಯಾವುದಾದರೂ ಘಟನೆ ಕುರಿತು ಸಂಭಾಷಿಸುವುದುಂಟು.

**ನಾದ/ಸ್ವರ**

ಧ್ವನಿಗಿರುವ ಇನ್ನೊಂದು ಅರ್ಥ ನಾದ/ಸ್ವರ ಎಂದು. ಉದಾಹರಣೆಗೆ ಒಂದು ಕಡೆ ಸಂಗೀತ ಕಾರ್ಯಕ್ರಮ ನಡೆಯುತ್ತಿದೆ. ಅಲ್ಲಿ ಕೆಲವು ಪ್ರೇಕ್ಷಕರು ಎಷ್ಟೊಂದು ಒಳ್ಳೆಯ ಧ್ವನಿಯಪ್ಪಾ! ಎಮದು ಉದ್ಗರಿಸುತ್ತಾರೆ. ಆ ಸಂದರ್ಭದಲ್ಲಿ ನಾವು ಧ್ವನಿಯನ್ನು ಅರ್ಥಮಾಡಿಕೊಳ್ಳುವಂತದ್ದು ಸ್ವರ ಎಂಬುದಾಗಿದೆ.

**ಭಾಷೆಯ ಮೂಲ ಘಟಕ**

ಭಾಷಾವಿಜ್ಞಾನದ ಪರಿಭಾಷೆಯಲ್ಲಿ 'ಧ್ವನಿ' ಎಂದರೆ ಭಾಷೆಯ ಮೂಲಘಟಕ. ಪ್ರಕೃತಿಯಲ್ಲಿ ಅಸಂಖ್ಯಾತ ಧ್ವನಿಗಳಿವೆ. ಅವುಗಳಲ್ಲಿ ಕೆಲವು ಆಡುಭಾಷೆಗೆ ಸೀಮಿತವಾಗಿವೆ. ಇನ್ನು ಕೆಲವು ಗ್ರಂಥಸ್ಥಭಾಷೆಗೆ ಸೀಮಿತವಾಗಿವೆ. ಇನ್ನು ಕೆಲವು ಆಡುಭಾಷೆ ಮತ್ತು ಗ್ರಂಥಸ್ಥಭಾಷೆ ಎರಡರಲ್ಲಿಯೂ ಪ್ರಯೋಗಿಸಲ್ಪಡುತ್ತಿವೆ. ಇನ್ನು ಕೆಲವು ಉಭಯ ಭಾಷೆಗಳಿಗೂ ಸಿಗುವುದಿಲ್ಲ. ಭಾಷೆಯಲ್ಲಿ ವ್ಯವಹರಿಸಲು ನಾವು ಅನೇಕ ಧ್ವನಿಸಂಕೇತಗಳನ್ನು ಬಳಸುತ್ತೇವೆ. ಅವುಗಳ ಅತ್ಯಂತ ಚಿಕ್ಕ ಘಟಕವನ್ನು 'ಧ್ವನಿ' ಎಂದು ಕರೆಯುತ್ತೇವೆ.

## 4.2 ಧ್ವನಿನಿರ್ಧಾರಕಗಳು

ಧ್ವನಿನಿರ್ಧಾರಕಗಳೆಂದರೆ ಒಂದು ಭಾಷೆಯ ಧ್ವನಿಯನ್ನು ಅರ್ಥೈಸಿಕೊಳ್ಳುವಾಗ ನಾವು ಗಮನಿಸಬೇಕಾದ ಅಂಶಗಳಾಗಿವೆ. ಮಾತೃಭಾಷೆಯಷ್ಟು ಸರಾಗವಾಗಿ ಅನ್ಯ ಭಾಷೆಯನ್ನು ಅರ್ಥಮಾಡಿಕೊಳ್ಳುವುದು ಕಷ್ಟದಾಯಕವಾಗಿದೆ. ಹಾಗೆಯೇ ಮಾತೃಭಾಷಿಗನು ತನ್ನ ಸ್ವಂತಭಾಷೆಯನ್ನು ಸುಲಲಿತವಾಗಿ ಅರ್ಥಮಾಡಿ ಕೊಳ್ಳುವವನಾದರೂ ಅದರಮೇಲೇ ಸಾರ್ವಭೌಮತ್ವಡೆದಿರುವುದಿಲ್ಲ. ಯಾವೆಲ್ಲ ಆಯಾಮಗಳಡಿಯಲ್ಲಿ ಅಥವಾ ಹಿನ್ನೆಲೆಯನ್ನು ಗಮನಿಸಿ ನಾವು ಒಂದು ಧ್ವನಿಯನ್ನು ಅರ್ಥಮಾಡಿಕೊಳ್ಳಬೇಕು ಎಂಬುದನ್ನು ಅರಿತಾಗ ಮಾತ್ರ ತನ್ನ ಮಾತೃ ಭಾಷೆಯಲ್ಲಿ ಇನ್ನಷ್ಟು ಪ್ರಭುತ್ವ ಪಡೆಯಲುಸಾಧ್ಯ. ಅಂತಹ ಕೆಲವು ಅಂಶಗಳನ್ನು ಈಕೆಳಗಿನಂತೆ ಸಂಗ್ರಹಿಸಲಾಗಿದೆ.

**ಧ್ವನಿ ಏರಿಳಿತ**

ಒಂದೇರೂಪದ ಧ್ವನಿಗಳು ಅವುಉಚ್ಚಾರವಾಗುವಾಗ ಏರಿಳಿತಗಳಿಂದ ವಿಭಿನ್ನಾರ್ಥಗಳನ್ನು ನೀಡುತ್ತಿರುತ್ತವೆ. ಉದಾಹರಣೆಗೆ 'ಬೇಗ ಬಾ' ಎನ್ನುವುದನ್ನು ನಾವು ಏರಿಸಿ ಗಟ್ಟಿ ಧ್ವನಿಯಲ್ಲಿ ಹೇಳಿದಾಗ ಒಂದು ರೀತಿಯ ಅರ್ಥ ಬರುತ್ತದೆ. ನಮ್ಮನ್ನು ಯಾರಾದರೂ ಗದರಿಸುವ ಸಂದರ್ಭದಲ್ಲಿ ನಮಗಾಗದವರು ಅಥವಾ ಅತ್ಯಂತ ಪ್ರೀತಿಯಿದ್ದವರೋ ಅಥವಾ ಕಾಳಜಿ ಇದ್ದವರೋ ಹೀಗೆ ಕರೆಯುವುದುಂಟು ಆ ಸಂದರ್ಭದಲ್ಲಿ ಅದನ್ನು ನಾವು ಅರ್ಥಮಾಡುವ ಅಥವಾ ಅದಕ್ಕೆ ಪ್ರತಿಕ್ರಿಯಿಸುವ ರೀತಿ ಬೇರೆಯಾಗಿರುತ್ತದೆ. 'ಬೇಗ ಬಾ' ಎನ್ನುವುದನ್ನು ನಾವು ಮೆಲ್ಲಗೆ ಹೇಳಿದಾಗ ಮೊದಲಿನ ಅರ್ಥಕ್ಕೆ ತದ್ವಿರುದ್ಧವಾದ ಅರ್ಥಬರುತ್ತದೆ. ಯಾರಾದರೂ ಸಾಯುವ ಅಥವಾ ನೋವಿನಿಂದ ನರಳುತ್ತಿರುವ ಸಂದರ್ಭದಲ್ಲಿ ಶಕ್ತಿಹೀನವಾಗಿ ಬಿದ್ದುಕೊಂಡಿರುವಾಗ 'ಬೇಗ ಬಾ' ಎಂದುಕರೆದರೆ ಆಗುವ ಅರ್ಥ ಇದಾಗಿದೆ. ಪಶ್ಚಾತ್ತಾಪ ಅಥವಾ ದುಃಖದಿಂದ ನಾವು ಅವರಿಗೆ ಸಾಂತ್ವನಹೇಳ ಬಯಸುತ್ತೇವೆ. ಮಕ್ಕಳನ್ನು ಆಟಕ್ಕೆ ಕಳುಹಿಸುವಾಗ ಅಥವಾ ಗೆಳೆಯರೊಟ್ಟಿಗೆ ಒಗ್ಗೂಡಿ ಹೊರಟಾಗ ತಾಯಿಹೇಳುವ 'ಬೇಗ ಬಾ' ಎನ್ನುವುದಕ್ಕೆ ಬೇರೊಂದು ಅರ್ಥವಿದೆ. ದೂರದರ್ಶನ ಅಥವಾ ರೇಡಿಯೋ ಮಾಧ್ಯಮದಲ್ಲಿ ಬಿತ್ತರಗೊಳ್ಳುವ ಕಾರ್ಯಕ್ರಮಗಳಲ್ಲಿ ಪ್ರೇಕ್ಷಕರನ್ನು ಕುರಿತು ಹೇಳುವಾಗ ಮಗದೊಂದು ಅರ್ಥವಿದೆ. ಗೆಳೆಯ ಗೆಳತಿಗೆ 'ಬೇಗ ಬಾ' ಎಂದರೆ ಇನ್ನೊಂದು ಅರ್ಥಸ್ಫುರಿಸುತ್ತದೆ. ಇತ್ಯಾದಿ.

**ಕಾಲಘಟ್ಟ.**

ಒಂದು ಧ್ವನಿಯನ್ನು ಅರ್ಥಮಾಡಿಕೊಳ್ಳುವ ಮೊದಲು ಅದರಕಾಲಘಟ್ಟದ ಸಂಪೂರ್ಣ ಪರಿಚಯ ಅಥವಾ ಹಿನ್ನೆಲೆ ಅರಿಯುವುದು ಅತ್ಯಂತಅಗತ್ಯ. ಇದಕ್ಕೆ ಎರಡು ಕಾರಣಗಳನ್ನು ನೀಡಬಹುದು. ಒಂದು ಆಕಾಲದ ಭಾಷೆಯರೂಪ ಬೇರೆಬೇರೆಯಾಗಿರುತ್ತದೆ. ಕಾರಣ ಪರಭಾಷಿಗರ ದಬ್ಬಾಳಿಕೆ, ರಾಜಕೀಯ ಇಚ್ಛಾಶಕ್ತಿ, ಇತ್ಯಾದಿ. ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡದ ವ್ಯತ್ಯಾಸಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಇನ್ನೊಂದು ಕಾರಣ ಪರಭಾಷಿಗರ ದಾಳಿಯಿಂದಾಗಿ ಅಥವಾ

ಕಾರಣಾಂತರಗಳಿಂದ ಭಾಷೆ ನಶಿಸಿರಬಹುದು. ಉಭಯಭಾಷೆಗಳಲ್ಲಿ ಒಂದು ಭಾಷೆನಶಿಸಿದರೂ ಆ ಗ್ರಂಥ ಅಥವಾ ಕೃತಿಗಳನ್ನು ಓದಲು ಅಸಾಧ್ಯವಾಗುತ್ತದೆ. ಕಾಲಘಟ್ಟದ ಹಿನ್ನೆಲೆಯಲ್ಲಿ ನಾವು ಚಿಂತಿಸಿದಾಗ ಕೆಲವು ಪ್ರಾಚೀನ ಪದಗಳಿಗೆ ಹೀನಾರ್ಥ ಬಂದಿರುತ್ತದೆ. ಉದಾಹರಣೆಗೆ 'ಕುನ್ನಿ' ಎಂದರೆ ಹಳಗನ್ನಡ ಪರಿಭಾಷೆಯಲ್ಲಿ ಗಂಡು ಎಂದರ್ಥ ಆದರೆ ಹೊಸಗನ್ನಡ ಭಾಷೆಯಲ್ಲಿ 'ನಾಯಿ' ಎಂದು ಹೀನಾರ್ಥ ಪ್ರಾಪ್ತಿಯಾಗಿದೆ. ಇನ್ನು ಕೆಲವುಪದಗಳು ಉತ್ತಮಾರ್ಥ ಪಡೆದುಕೊಂಡಿವೆ. ಉದಾಹರಣೆಗೆ 'ನೈಟ್' ಎನ್ನುವುದಕ್ಕೆ 'ಸೇವಕ' ಎಂದು ಅರ್ಥವಿತ್ತು ಆದರೆ ಇಂದು ಪ್ರಶಸ್ತಿಯ ಸಂಕೇತವಾಗಿ ಬಳಕೆಯಲ್ಲಿದೆ. ಕೆಲವು ಧ್ವನಿಗಳು ಕಾಣೆಯಾಗಿರಬಹುದು ಅಂದರೆ ಅವುಗಳ ಬಳಕೆ ಈಗ ಇರಲಿಕ್ಕಿಲ್ಲ. ಉದಾಹರಣೆಗೆ ಋೂ ಕಾರ ಪ್ಲುತಾಕ್ಷರಗಳು ಉಪಧ್ಮಾನೀಯ ಜಿಹ್ವಾಮೂಲೀಯ ಇತ್ಯಾದಿ ಕೆಲವುಪದಗಳ ಅರ್ಥ ಸಂಕ್ಷಿಪ್ತಗೊಂಡಿರಬಹುದು. ಆಂಗ್ಲಭಾಷೆಯಲ್ಲಿ ಮೀಟ್ ಎಂದರೆ ಆಹಾರ ಎಂದು ವಿಶಾಲಾರ್ಥದಲ್ಲಿ ಬಳಸುತ್ತಿದ್ದರು ಆದರೆ ಇಂದು ಮಾಂಸಾಹಾರ ಎನ್ನುವ ಅರ್ಥಕ್ಕೆ ಸೀಮಿತವಾಗಿದೆ. ಅದೇರೀತಿ ಕೆಳವು ಪದಗಳ ಅಥವಿಕಾಸವಾಗಿರಬಹುದು. ಹಿಂದೆ ಎಣ್ಣೆಯೆಂದರೆ ಎಳ್+ ನೆಯ್ ಅಂದರೆ ಎಳ್ಳೆಣ್ಣೆ ಎಂಬುದಕ್ಕೆ ಮಾತ್ರ ಸೀಮಿತವಾಗಿತ್ತು ಆದರೆ ಇಂದು ಎಲ್ಲಾರೀತಿಯ ಎಣ್ಣೆಪದಾರ್ಥಗಳಿಗೆ ಸಾರ್ವತ್ರಿಕವಾಗಿ ಬಳಕೆಯಾಗುತ್ತಿದೆ. ನಾಗರಿಕತೆಯೂ ಪ್ರಭಾವಬೀರುತ್ತದೆ. ನಾಗರಿಕತೆ ಬದಲಾವಣೆಯಾದಂತೆಲ್ಲ ಸಹಜವಾಗಿಯೇ ಭಾಷೆಗಳು ಬದಲಾಗುತ್ತಿರುತ್ತವೆ, ಉದಾಹರಣೆಗೆ ಹಿಂದೊಮ್ಮೆ ಕನ್ನಡಭಾಷೆ ಸಂಸ್ಕೃತದ ಪ್ರಭಾವಕ್ಕೆ ಹೇರಳವಾಗಿ ಒಳಗಾಗಿತ್ತು. ಕ್ರಮೇಣ ದೇಶಿಯತ್ತ ಸರಿದು ಮುಂದೆ ಇಂಗ್ಲೀಷಿನ ಪ್ರಭಾವಕ್ಕೆ ಒಳಗಾಗಿರುತ್ತದೆ. ಹಲವು ಇಂಗ್ಲೀಷ ಪದಗಳು ಕನ್ನಡಭಾಷೆಯಲ್ಲಿ ಬಳಕೆಯಾಗುತ್ತಾ ಬಂದಿವೆ. ಉದಾಹರಣೆಗೆ ಪೋಸ್ಟು, ಆಫೀಸ್, ಗೌರ್ಮೆಂಟು ಇತ್ಯಾದಿ. ಕೆಲವು ಪದಗಳನ್ನು ಮನುಷ್ಯರೂಢಿಯಿಂದಲೂ ಅಥವಾ ಪ್ರಾಸಚೆಂದವಾಗಿಯೂ ಉಚ್ಚರಿಸುವುದುಂಟು. ಉದಾಹರಣೆಗೆ 'ಸರ್' ಎಂಬ ಇಂಗ್ಲೀಷ್ ಭಾಷೆಯ ಪದ 'ಗುರು' ಎಂಬರ್ಥನೀಡುತ್ತದೆ. ಆದರೆ ಇಂದು ಶಿಕ್ಷಣಸ್ಥರೂ ಕೂಡ 'ಇಲ್ಲಸರ್' 'ಹೌದುಸರ್' 'ಬೇಕಾಸರ್' ಇತ್ಯಾದಿಯಾಗಿ ತಮ್ಮಮಾತಿನ ಕೊನೆಯಲ್ಲಿ ನಿರಂತರವಾಗಿ ಬಳಸುತ್ತಿದ್ದಾರೆ ನಿಜವಾಗಿ ಯಾವ ಅರ್ಥವನ್ನು ನೀಡುತ್ತಿತ್ತೋ ಅದು ಇಲ್ಲಿ ಗೌಣವಾಗಿದೆ. ವಿಪರ್ಯಾಸವೆಂದರೆ ಆ 'ಸರ್' ಹೇಳುವ ವ್ಯಕ್ತಿಗೆ ನಿಜವಾಗಿಯೂ

'ಸರ್ ಮೇಲೇ' ಎಷ್ಟರಮಟ್ಟಿಗೆ ಗೌರವವಿರುತ್ತದೆ? ಅಷ್ಟೇ ಅಲ್ಲ ಆ 'ಸರ್' ಮನೋಭಾವ ಹೇಗಿರುತ್ತದೆಂದರೆ ಪೆಚ್ಚಿನ ಸಲ ತಮ್ಮವಿದ್ಯಾರ್ಥಿ ಸರ್ ಅಂತ ಹೇಳಿದಷ್ಟು ತ್ವರಿತಗತಿಯಲ್ಲಿ ಸ್ಪಂದಿಸುತ್ತಿರುತ್ತಾರೆ.

**ಉದಾತ್ತ, ಅನುದಾತ್ತ, ಸ್ವರಿತಗಳು.**

ವೈದಿಕವಾಙ್ಮಯದಲ್ಲಿ ಇದರ ಪ್ರಸ್ತಾಪವಿದೆ. ಅಲ್ಲಿ ಇದರ ಮುಖ್ಯಉದ್ದೇಶ ವೇದ ಮಂತ್ರಗಳನ್ನು ಪರಿಶುದ್ಧವಾಗಿ ಸ್ವಲ್ಪವೂ ಲೋಪವಿಲ್ಲದಂತೆ ಪಠಿಸಲು ಹಾಗೂ ವೇದಾಧ್ಯಯನಮಾಡುವವರೆಲ್ಲರೂ ಏಕರೀತಿಯಲ್ಲಿ ಉಚ್ಚರಿಸಲು ಅನುಕೂಲವಾಗಲೆಂದು ಮಾಡಿಕೊಂಡಿರುವ ವ್ಯವಸ್ಥೆಯಾಗಿತ್ತು ಉದಾತ್ತಸ್ವರ ಎನ್ನುವುದಕ್ಕೆ ಉಚ್ಚೈರುದಾತ್ತಃ[57] ಎಂದು ಸೂತ್ರವಿದೆ. ಎಂದರೆ ಅಕ್ಷರಗಳನ್ನು ಏರಿಸಿ ಉಚ್ಚರಿಸುವುದು ಅಂತಹ ಅಕ್ಷರಗಳಿಗೆ ಸಂಕೇತರೂಪವಾಗಿ ಆಯಾ ಅಕ್ಷರಗಳ ಮೇಲೊಂದು ಗೆರೆಯ ಗುರುತನ್ನು ಹಾಕಲಾಗುತ್ತಿತ್ತು. ಉದಾಹರಣೆಗೆ 'ಗಣಾನಾಂತ್ವಾ ಗಣಪತಿಗ್ಂಹವಾಮಹೇ' ಇತ್ಯಾದಿ ಅನುದಾತ್ತಕ್ಕೆ ನೀಚೈರನುದಾತ್ತ:[58] ಅಕ್ಷರಗಳನ್ನು ಇಳಿಸಿ ಉಚ್ಚರಿಸಬೇಕು ಎಂದರ್ಥ ಇಂತಹ ಉಚ್ಚಾರಣೆಗಳನ್ನು ತೋರಿಸಲು ಆಯಾ ಅಕ್ಷರಗಳ ಅಡಿಯಲ್ಲಿ ಅಡ್ಡಲಾಗಿ ಗೆರೆಯಗುರುತನ್ನು ಹಾಕಲಾಗುತ್ತಿತ್ತು. ಉದಾಹರಣೆಗೆ 'ಗಣಾನಾಂತ್ವಾ

---

[57] ಪಾಣಿನಿ,ಅಷ್ಟಾಧ್ಯಾಯಿ, ಸೂತ್ರ: 1–2–29 , ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ ಪೀಠಿಕಾ ಭಾಗ ಪುಟ ಸಂಖ್ಯೆ :11 ಕೊನೆಯ ಸಾಲು.

[58] ಪಾಣಿನಿ,ಅಷ್ಟಾಧ್ಯಾಯಿ, ಸೂತ್ರ: 1–2–30 ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ , ಪುಟ ಸಂಖ್ಯೆ :12 ಮೂರನೆಯ ಸಾಲು.

ಗ್ಣಪತಿಗ್ಂಹವಾಮಹೇ' ಹಾಗೆಯೇ ಸ್ವರಿತಕ್ಕೆ ಸಮಾಹಾರ ಸ್ವರಿತಃ[59] ಎಂಬ ಸೂತ್ರವಿದೆ. ಇವೆರಡೂ ಅಂದರೆ ಉದಾತ್ತಾನುದಾತ್ತಗಳಗುಣಗಳನ್ನು ಸಮಾನವಾಗಿಹೊಂದಿರುವಂತಹ ಅಕ್ಷರಗಳು ಇಂತಹ ಅಕ್ಷರಗಳಿಗೆ ಯಾವುದೇರೀತಿಯ ಚಿಹ್ನೆಗಳಿರುತ್ತಿರಲಿಲ್ಲ. ಉದಾಹರಣೆಗೆ 'ಗ್ಣಾನಾಂತ್ವಾ ಗ್ಣಪತಿಗ್ಂಹವಾಮಹೇ' ಇತ್ಯಾದಿ. ಭಾಷಾ ಶುದ್ಧಿಗೋಸ್ಕರ ಪ್ರಾಚೀನ ವೈದಿಕವಾಙ್ಮಯದಲ್ಲಿ ಇವುಗಳ ಪ್ರಸ್ತಾಪವಾಗಿವೆ.

**ಪ್ರಾದೇಶಿಕತೆ**

ಮಾನವನಿಗೆ ಭಾಷೆಯನ್ನು ಪ್ರಯೋಗಿಸಲ್ಲಶಕ್ತಿ ಹುಟ್ಟಿನಿಂದ ಬಂದಿದ್ದರೂ ಜನನದ ತರುವಾಯ ಅದು ರೂಢಿಯಾಗಿದೆ, ಸಂರಚನೆಯಾಗಿದೆ. ಮಾನವ ಬೆಳೆದ ಹಾಗೆ ಭಾಷಾ ಸಮುದಾಯವು ಹುಟ್ಟಿಕೊಂಡಿದೆ. ಪ್ರಾಚೀನ ನಾಗರೀಕತೆಯನ್ನು ಗಮಿಸಿದಾಗ ಮಾನವ ಮೊದಲಿಗೆ ಕೇವಲ ಹಾವಭಾವಗಳನ್ನಷ್ಟೇ ಮಾಡುತ್ತಿದ್ದನು ಇತರ ಪ್ರಾಣಿಗಳು ಹೇಗೆ ಈಗಲೂ ವ್ಯವಹಾರಮಾಧ್ಯಮವನ್ನು ಬಳಸುತ್ತವೆಯೋ ಹಾಗೆ ಮಾನವನೂ ಅಭಿವ್ಯಕ್ತಿ ಪಡಿಸುತ್ತಿದ್ದ. ಎನ್ನಲು ಸಾಕಷ್ಟು ಆಧಾರಗಳು ಸಿಗುತ್ತವೆ. ಆನಂತರ ಅವುಗಳ ಅಭಿವ್ಯಕ್ತಿಗೊಂದು ವ್ಯವಸ್ಥೆ ಕಂಡುಕೊಂಡ: ಅದುವೇ ಮುಂದೆ ಭಾಷೆ ಎಂಬುದಾಗಿ ರೂಢಿಯಾಯಿತು. ಈ ರೀತಿ ವ್ಯವಸ್ಥೆಯನ್ನು ಸೃಷ್ಟಿಸುವಾಗ ಆತನ ಗಮನ ಆತ ಬೆಳೆಯುವ ಪರಿಸರ. ಹಾಗಾಗಿ ಪ್ರಾದೇಶಿಕತೆ ಧ್ವನಿನಿರ್ಧಾರಕದಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತದೆ. ಕನ್ನಡ ಭಾಷೆಯಲ್ಲಿಯೇ ನಾವು ಇದನ್ನು ಹೇರಳವಾಗಿ ಗಮನಿಸಬಹುದು. ಮುಖ್ಯವಾಗಿ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕನಾರ್ಟಕದ ಕನ್ನಡಿಗರು ಬಳಸುವ ಪದಗಳು. ಉದಾರಣೆಗೆ 'ಕೇಸರಿಬಾತು' ಎನ್ನುವುದಕ್ಕೆ ಉತ್ತರಕನ್ನಡದಲ್ಲಿ 'ಅಕ್ಕಿಯಿಂದ ಮಾಡುವ ಸಿಹಿತಿನಿಸು' ಎಂದು ಅರ್ಥಮಾಡಿದರೆ ಅದನ್ನೇ ಬೆಂಗಳೂರು ಕಡೆಯವರು

---

[59] ಪಾಣಿನಿ,ಅಷ್ಟಾಧ್ಯಾಯಿ, ಸೂತ್ರ: 1–2–31 ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ ,ಪುಟ ಸಂಖ್ಯೆ :12 ಆರನೇ ಸಾಲು.

'ರವೆಯಿಂದ ಮಾಡಿದ ಸಿಹಿತಿನಿಸು' ಎಂದು ಅರ್ಥಮಾಡುತ್ತಾರೆ. ಇದು ಪ್ರಾದೇಶಿಕತೆ ಧ್ವನಿನಿರ್ಧಾರಕದ ಮೇಲೆ ಬೀರುವ ಪ್ರಭಾವವನ್ನು ಕುರಿತು ಹೇಳುತ್ತದೆ.

**ಮಾತೃಭಾಷೆ**

ಮಾನವ ತನ್ನ ಮಾತೃಭಾಷೆಯಷ್ಟು ಸರಳವಾಗಿ ಸುಲಲಿತವಾಗಿ ಸ್ವಚ್ಛಂದವಾಗಿ ಬೇರೆ ಭಾಷೆಯನ್ನು ಬಳಸಲಾರ ಪ್ರಯತ್ನಪಟ್ಟು ಬೇರೆ ಭಾಷೆಯನ್ನು ಕಲಿತರೂ ಅದು ಮಾತೃ ಭಾಷಾಸಾಮರ್ಥ್ಯವನ್ನು ಮೀರಿಸಲಾರದು. ವ್ಯಕ್ತಿಮಾತನಾಡುವ ಭಾಷೆ ಮಾತೃಭಾಷೆಯೋ ಅಥವಾ ಅಲ್ಲವೋ ಎನ್ನುವುದರ ಆಧಾರದಮೇಲೆ ಆತನ ಧ್ವನಿಯನ್ನು ಅರ್ಥೈಸಬೇಕಾಗುತ್ತದೆ. ಮಾತೃಭಾಷೆಯಲ್ಲಿ ಭಾವತೀವ್ರತೆಯಿಂದಮಾತನಾಡಿದರೆ ತಾನುಕಲಿತ ಇತರಭಾಷೆಗಳಲ್ಲಿ ಮಾತೃಭಾಷೆಯಷ್ಟು ಭಾವತೀವ್ರತೆ ಇರುವುದಿಲ್ಲ, ಈ ಹಿನ್ನೆಲೆಯಲ್ಲಿ ಧ್ವನಿನಿರ್ಧಾರಕದಲ್ಲಿ ಮಾತೃಭಾಷೆಯು ಪ್ರಮುಖಪಾತ್ರವಹಿಸುತ್ತದೆ.



**ಮನಸ್ಥಿತಿ**

ಪ್ರತಿಯೊಬ್ಬವ್ಯಕ್ತಿಯು ಮಾತನಾಡುವುದು ಆತನ ಅಂತರಂಗದ ಪ್ರೇರಣೆಯಿಂದಲೇ. ಆತನ ಮನಸ್ಸಿನಲ್ಲಿರುವ ಸುಖ, ದಃಖ ಮತ್ತಿತರ ಸ್ಥಿತಿಗಳಿಗನುಸಾರವಾಗಿ ನಾನಾರೀತಿಯಲ್ಲಿ ವಿಚಾರಗಳನ್ನು ಅಭಿವ್ಯಕ್ತಿ ಪಡಿಸುತ್ತಿರುತ್ತಾನೆ ಉದಾಹರಣೆಗೆ ಕೋಪಬಂದಾಗ ನಮ್ಮ ಮನಸ್ಸು ಮತ್ತು ಬುದ್ಧಿ ನಮ್ಮಹಿಡಿತದಲ್ಲಿ ಇರುವುದಿಲ್ಲ. ಆಗ ನಾವು ಅಸಂಬದ್ಧವಾಗಿ ಭಾಷೆಯನ್ನು ಬಳಸುವ ಸಾಧ್ಯತೆ ಅಧಿಕವಾಗಿದೆ. ಅದು ಅನೇಕ ಅನಾಹುತಗಳಿಗೆ ಕಾರಣವಾಗುತ್ತದೆ. ಆದ್ದರಿಂದ ವ್ಯಕ್ತಿಯ ಮನಸ್ಥಿತಿಯನ್ನು ಆಧರಿಸಿ ಧ್ವನಿನಿರ್ಧಾರ ಮಾಡಬೇಕಾಗುತ್ತದೆ.

**ಆಡುಭಾಷೆ ಮತ್ತು ಗ್ರಾಂಥಿಕ ಭಾಷೆ**

ಆಡುಭಾಷೆ ಮಾನವ ಸಂಭಾಷಣೆಯಲ್ಲಿ ಬಳಸುವ ಭಾಷೆ ಅದನ್ನೆಲ್ಲವನ್ನೂ ನೇರವಾಗಿ ಗ್ರಂಥರೂಪದಲ್ಲಿ ಇಳಿಸಲು ಅಸಾಧ್ಯ. ಆಡುಭಾಷೆಯ ಹರವು ಅಥವಾ ವ್ಯಾಪ್ತಿ ದೊಡ್ಡದು. ಪ್ರಾದೇಶಿಕವಾಗಿ ವಿಭಿನ್ನವಾಗಿರುತ್ತದೆ. ಉದಾಹರಣೆಗೆ ಕನ್ನಡಭಾಷೆಯನ್ನೇ

ತೆಗೆದುಕೊಂಡಾಗ ಗ್ರಾಂಥಿಕವಾಗಿ ಕನ್ನಡ ಭಾಷೆಗಿರುವುದು ಒಂದುರೂಪ ಆದರೆ ಆಡುಭಾಷೆಯಾಗಿ ಕನ್ನಡ ಭಾಷೆಯನ್ನು ಗಮನಿಸಿದಾಗ ಉತ್ತರಕರ್ನಾಟಕದವರೇ ಬೇರೆ, ದಕ್ಷಿಣ ಕರ್ನಾಟಕದವರೇ ಬೇರೆ ಕರಾವಳಿಕರ್ನಾಟಕದವರೇ ಬೇರೆ, ಹೈದರಾಬಾದ ಕರ್ನಾಟಕದವರೇ ಬೇರೇ ರೀತಿ ಬಳಸುತ್ತಾರೆ. ಆದರೆ ಇಂದು ಆಡುಭಾಷೆಯನ್ನು ಯಥಾವತ್ತಾಗಿ ಗ್ರಂಥರೂಪದಲ್ಲಿ ಬಳಸುವುದು ರೂಢಿಯಾಗುತ್ತಿದೆ. ಉದಾಹರಣೆಗೆ ಡಾಂಬರುಬಂದುದು, ರಂಗಣ್ಣನ ಕನಸಿನ ದಿನಗಳು ಇತ್ಯಾದಿ.

## ಅಲ್ಪಪ್ರಾಣ–ಮಹಾಪ್ರಾಣ

ಅಲ್ಪಪ್ರಾಣ ವೆಂದರೆ ಅಕ್ಷರವನ್ನು ಉಚ್ಚಾರಮಾಡುವಾಗ ಸ್ವಲ್ಪ ಉಸಿರು ತೆಗೆದುಕೊಂಡು ಉಚ್ಚಾರ ಮಾಡುವುದು. ಮಹಾಪ್ರಾಣ ವೆಂದರೆ ಅಕ್ಷರವನ್ನು ಉಚ್ಚರಿಸುವಾಗ ಹೆಚ್ಚು ಉಸಿರು ತೆಗೆದುಕೊಂಡು ಉಚ್ಚಾರ ಮಾಡುವುದು. ಇವುಗಳಲ್ಲಿ ಉಚ್ಚಾರ ದೋಷದಿಂದ ವ್ಯತ್ಯಾಸವಾಗುತ್ತವೆ. ಮಹಾಪ್ರಾಣ ಉಚ್ಚಾರ ಮಾಡುವಾಗ ಅಲ್ಪಪ್ರಾಣದ ಹಾಗೆ ಅಥವಾ ಅಲ್ಪಪ್ರಾಣವನ್ನು ಉಚ್ಚರಿಸುವಾಗ ಮಹಾಪ್ರಾಣದಂತೆ ಉಚ್ಚರಿಸಿದರೆ ಅರ್ಥವ್ಯತ್ಯಾಸ ವಾಗುತ್ತದೆ. ಮೂಲತಃ ಕನ್ನಡಭಾಷೆಯಲ್ಲಿ ಮಹಾಪ್ರಾಣಗಳಿಲ್ಲ. ಸಂಸ್ಕೃತ ಭಾಷೆಯಿಂದ ಬಂದಿದೆ. ಇಂದು ಆಡುಭಾಷೆಯಲ್ಲಿ ಮರೆಯಾಗುತ್ತಿದ್ದರೂ ಗ್ರಾಂಥಿಕ ಭಾಷೆಯಲ್ಲಿ ಜೀವಂತವಾಗಿ ಉಳಿದುಕೊಂಡಿದೆ. ಬಹುತೇಕ ಕನ್ನಡಿಗರು ಇಂದು ಮಹಾಪ್ರಾಣವನ್ನು ಉಚ್ಚರಿಸುವಾಗ ಅಲ್ಪಪ್ರಾಣ ದಂತೆ ಉಚ್ಚಾರ ಮಾಡುತ್ತಾರೆ ಅದೃಷ್ಟಶಾತ್ ಇನ್ನೊಬ್ಬ ಕನ್ನಡಿಗನಿಗೆ ಅದು ಅರ್ಥವಾಗಿಬಿಡುತ್ತದೆ. ಆದರೆ ಕಾಲಾಂತರದಲ್ಲಿ ಇದು ರೂಪಾಂತರವಾಗಲೂ ಬಹುದು.

## ಉಚ್ಚಾರ

ಭಾಷೆಯ ಜೀವಂತಿಕೆ ಅದರ ಬಳಕೆಯಮೇಲೆ ನಿಂತಿದೆ. ಭಾಷೆಯನ್ನು ಬಳಸುವಾಗ ಅದರ ಉಚ್ಚಾರ ಬಹುಮುಖ್ಯವಾಗಿದೆ. ಕೆಲವು ಪ್ರಾದೇಶಿಕವಾದ ವಿಭಿನ್ನತೆಗಳನ್ನು ಇಲ್ಲಿ ಸಂಗ್ರಹಿಸಬಹುದು. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸುತ್ತಮುತ್ತಲಿನ ಹಲವು ಜನರು 'ಲ' ಮತ್ತು 'ಳ' ವರ್ಣಗಳನ್ನು ಒಂದೇರೀತಿಯಲ್ಲಿ ಉಚ್ಚಾರಮಾಡುತ್ತಾರೆ. 'ಳ' ವರ್ಣವನ್ನು 'ಲ'

ವರ್ಣದಂತೆ ಉಚ್ಚಾರಮಾಡುತ್ತಾರೆ. ಉದಾಹರಣೆಗೆ 'ಮಳೆಗಾಲ' ಎನ್ನುವುದನ್ನು 'ಮಲೆಗಾಲ' ಎಂದು ಉಚ್ಚರಿಸುತ್ತಾರೆ. ಉತ್ತರಕನ್ನಡಜಿಲ್ಲೆಯಲ್ಲಿ ಹಲವು ಜನರು 'ಶ' ಮತ್ತು 'ಸ' ಗಳನ್ನು ಒಂದೇರೀತಿಯಲ್ಲಿ ಉಚ್ಚಾರಮಾಡುತ್ತಾರೆ. ಉತ್ತರಕರ್ನಾಟಕದ ಬಹುತೇಕಕಡೆಗಳಲ್ಲಿ ಪದಗಳನ್ನು ಸಂಕ್ಷೇಪಿಸಿ ಬಳಸುತ್ತಾರೆ ಮತ್ತು ಶಬ್ದಗಳ ಕೊನೆ ಭಾಗವನ್ನು ಸ್ಪಷ್ಟವಾಗಿ ಉಚ್ಚರಿಸದೆ ಏನೋ ಒಂದುರೀತಿಯ ಅವಸರದಲ್ಲಿದ್ದಂತೆ ಉಚ್ಚಾರಮಾಡುವುದು ಕಂಡುಬರುತ್ತದೆ. ಉದಾಹರಣೆಗೆ 'ಹೂಂನ್ರಿ', 'ಯಾಕ್ರಿ' ಇತ್ಯಾದಿ.

**ಅಭಿನಯ**

ಭಾಷೆಯಲ್ಲಿ ಅಭಿನಯವು ಬಹುಮುಖ್ಯ ಪಾತ್ರವಹಿಸುತ್ತದೆ. ಹಲವಾರು ಶಬ್ದಗಳ ಮೂಲಕ ಹೇಳಬಹುದಾದ ವಿಷಯವನ್ನು ಒಂದು ಅಭಿನಯದಮೂಲಕ ಮಾಡಿತೋರಿಸಬಹುದು. ಇದು ಮೌಖಿಕಭಾಷೆಗೆಮಾತ್ರ ಸೀಮಿತವಾದದ್ದು. ಗ್ರಾಂಥಿಕ ಭಾಷೆಯಲ್ಲಾದರೆ ಈ ಕಾರ್ಯವನ್ನು ಸಂಕೇತಗಳು ಮಾಡಿತೋರಿಸುತ್ತವೆ. ಉದಾಹರಣೆಗೆ ದುಃಖದ ಸನ್ನಿವೇಶವನ್ನು ಅಳುವದರ ಮುಖಾಂತರವೂ, ಸುಖದ ಸನ್ನಿವೇಶವನ್ನು ನಗುವುದರ ಮುಖಾಂತರವೂ ವ್ಯಕ್ತಪಡಿಸುವುದು. ಇನ್ನೊಂದು ವಿಚಾರ ವನ್ನು ಇಲ್ಲಿ ಸ್ಪಷ್ಟಪಡಿಸುವುದು ಒಳ್ಳೆಯದು, ಅಭಿನಯದ ಮೂಲಕವೆಂದರೆ ನಾವು ಮಾತನಾಡುವಾಗ ಹಾವಭಾವಗಳ ಮೂಲಕ ಮಾತನಾಡುವುದೆಂದರ್ಥ. ಇದು ಮಾತನಾಡುವವನ ಅನವಶ್ಯಕ ಶಬ್ದ ಬಳಕೆಯನ್ನು ಕಡಿಮೆಮಾಡುವುದರ ಜೊತೆಗೆ ಅದಕ್ಕೆ ಸಮ್ಯಕ್ ಅರ್ಥಬರುವಂತೆಯೂ ಮಾಡಲು ಸಹಕಾರಿಯಾಗಿದೆ. ಮುಖ್ಯವಾಗಿ ಒಂದು ಧ್ವನಿಯನ್ನು ಸಹಜವಾಗಿ ಅಂದರೆ ಯಾವುದೇ ಹಾವಭಾವಗಳಿಲ್ಲದೆಯೂ, ಏರಿಳಿತಗಳಿಂದಲೂ, ಅಭಿನಯದ ಮೂಲಕವೂ ವ್ಯಕ್ತಪಡಿಸಿದಾಗ ಆ ಧ್ವನಿ ನೀಡುವ ಅರ್ಥವಿಭಿನ್ನ ತೆರನಾಗಿರುತ್ತದೆ. ಧ್ವನಿಯನ್ನು ಅರ್ಥೈಸುವಾಗ ಅಭಿನಯವನ್ನು ಗಮನಿಸುವುದು ಮುಖ್ಯವಾಗಿದೆ.

**ಅರ್ಥಗ್ರಹಣ ಶಕ್ತಿ**

ಅರ್ಥಗ್ರಹಣ ಶಕ್ತಿಯೆಂದರೆ ಮಾತನಾಡುವವ ಮತ್ತು ಕೇಳುವವ ಇಬ್ಬರೂ ಕೂಡ ಒಂದು ನಿರ್ದಿಷ್ಟ ಭಾಷೆಯಲ್ಲಿ ಪಡೆದಿರಬಹುದಾದ ಅರ್ಥಸಂಪತ್ತು. ಅವರಿಬ್ಬರು

ಸಮಾನಪ್ರಭುತ್ವವನ್ನು ಗಳಿಸಿದ್ದರೆ ಅಲ್ಲಿ ಯಾವುದೇ ಸಮಸ್ಯೆ ಉದ್ಭವಿಸುವುದಿಲ್ಲ, ಒಂದು ವೇಳೆ ಇಬ್ಬರಲ್ಲಿ ಪರಸ್ಪರ ಭಿನ್ನರೀತಿಯ ಪ್ರಭುತ್ವಪಡೆದಿದ್ದರೆ ಅಲ್ಲಿ ಯಾವುದೇ ಸಮಸ್ಯೆ ಉಂಟಾಗದೆ ಸುಲಭವಾಗಿ ವಿಚಾರವಿನಿಮಯವಾಗುತ್ತದೆ. ಉದಾಹರಣೆಗೆ ಒಬ್ಬ ವ್ಯಕ್ತಿ ಇಂಗ್ಲೀಷ ಮಾತನಾಡುತ್ತಿದ್ದಾನೆ ಇನ್ನೊಬ್ಬವ್ಯಕ್ತಿ ಕನ್ನಡಮಾತನಾಡುವವನಾಗಿದ್ದಾನೆ. ಇವರಲ್ಲಿ ಪರಸ್ಪರ ಇನ್ನೊಂದು ಭಾಷೆಯ ಜ್ಞಾನ ಅಥವಾ ಮಾತನಾಡಲು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿರುವುದಿಲ್ಲ ಎಂದಾದರೆ ಅಲ್ಲಿ ಎಷ್ಟು ಸಂಭಾಷಣೆನಡೆದರೂ ಯಾವುದೇ ಪ್ರಯೋಜನವಾಗದು.

**ಅಭಿವ್ಯಕ್ತಿಶಕ್ತಿ**

ಅಭಿವ್ಯಕ್ತಿ ಎಂದರೆ ಮನದಲ್ಲಿ ಹುದುಗಿರುವ ವಿಚಾರವನ್ನು ಹೊರಹಾಕುವಿಕೆ. ಇದು ಮುಖ್ಯವಾಗಿ ಎರಡುವಿಧ ಒಂದು ಗ್ರಾಂಥಿಕ ಇನ್ನೊಂದು ಮೌಖಿಕ. ಮೌಖಿಕದಲ್ಲಿ ಪುನಃ ಸ್ಪಷ್ಟ ಉಚ್ಚಾರ, ಅಸ್ಪಷ್ಟ ಉಚ್ಚಾರ ಅನರ್ಥ ಉಚ್ಚಾರ ಹಾಗು ಅಸಂಬದ್ಧ ಉಚ್ಚಾರ ಇತ್ಯಾದಿಗಳನ್ನು ಪಟ್ಟಿಮಾಡಬಹುದು. ಒಂದು ಧ್ವನಿಯನ್ನು ಹೇಗೆ ಅಭಿವ್ಯಕ್ತ ಪಡಿಸಬೇಕೆಂದು ಆಯಾಭಾಷೆಯ ಒಂದು ಒಳಸಂರಚನೆಯಲ್ಲಿ ರೂಪಿತವಾಗಿರುತ್ತದೆ. ಅದಕ್ಕನುಸಾರ ಬಳಕೆಯಾದರೆ ಯಾವುದೇಗೊಂದಲಗಳಿರುವುದಿಲ್ಲ. ಸಂದೇಶ ರವಾನಿಸುವವನ ಮತ್ತು ಸಂದೇಶ ಸ್ವೀಕರಿಸುವವನ ನಡುವೇ ಯಾವುದೇ ಗೊಂದಲಗಳಿಲ್ಲದೆ ವಿಚಾರವಿನಿಮಯ ತುಂಬ ಸರಾಗವಾಗಿರುತ್ತದೆ. ಇದಕ್ಕೆ ಬದಲಾಗಿ ಅಸ್ಪಷ್ಟತೆಯಿಂದಲೂ, ಅಸಂಬದ್ಧವಾಗಿಯೂ, ಅನರ್ಥ ಬರುವಂತೆಯೂ ಉಚ್ಚಾರ ಮಾಡಿದರೆ ಅದು ನಿಷ್ಪ್ರಯೋಜನಗೊಳ್ಳುತ್ತದೆ. ಉದಾಹರಣೆಗೆ ಫಲಾಹಾರ ಎನ್ನುವುದನ್ನು ಪಲಾಹಾರ ಎಂದು ಉಚ್ಚಾರ ಮಾಡಿದರೆ ಅರ್ಥಕೆಡುತ್ತದೆ. ಪ ಮತ್ತು ಫ ನಡುವೆ ಅಕ್ಷರ ವ್ಯತ್ಯಾಸ ಮಾಡುವುದರಿಂದ ಅರ್ಥವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಧಾರವಾಡಕ್ಕೆ ಹೋಗಿದ್ದಿಯಾ ಎಂದು ಕೇಳಿದಾಗ, ಶಿವಮೊಗ್ಗಕ್ಕೆ ಹೋಗಲಿಲ್ಲ ಎಂದು ಉತ್ತರಿಸಿದರೆ ಅದು ಅರ್ಥಚ್ಯುತಿಗೆ ಕಾರಣವಾಗುತ್ತದೆ.

**ಪರಿಸರ**

ಒಂದು ಭಾಷೆಯ ಧ್ವನಿಗಳು ಬರುವ ಸಾರ್ಥಕ ನಡೆಯನ್ನು ಧ್ವನಿಗಳ ಪರಿಸರ ಎಂದು ಕರೆಯುತ್ತೇವೆ. ಪರಿಸರದ ಪ್ರಭಾವದಿಂದಾಗಿ ಒಂದೇ ಧ್ವನಿಯಲ್ಲಿ ವಿಭಿನ್ನಅರ್ಥ ಬರಲು

ಸಾಧ್ಯವಿದೆ. ಧ್ವನಿಗಳನ್ನು ಬಳಸುವಾಗ ಯಾವಪರಿಸರದಲ್ಲಿ ಬಳಸುತ್ತೇವೆ ಎನ್ನುವುದು ಬಹಳ ಮುಖ್ಯವಾದದ್ದು. ಭೌಗೋಳಿಕ ಪರಿಸರ, ಭಾಷಿಕಸಮುದಾಯ, ಕೇಳುವವನ ಆಸಕ್ತಿ, ಇವೆಲ್ಲ ಬಹುಮುಖ್ಯ ಪಾತ್ರಹವಹಿಸುತ್ತವೆ. ಇಲ್ಲವಾದಲ್ಲಿ ಸಮುದ್ರದಲ್ಲಿ ಮಳೆ ಬಂದಂತೆ ನಿಷ್ಪ್ರಯೋಜಕವಾಗುತ್ತದೆ. ಒಂದು ಧ್ವನಿಯನ್ನು ಉಚ್ಚಾರ ಮಾಡುವಾಗ ಅಥವಾ ಬಳಸುವಾಗ ಪರಸ್ಪರ ಸ್ವೀಕರಿಸುವವನ ಮತ್ತು ಬಳಕೆಮಾಡುವವನ ನಡುವೆ ಒಂದೇರೀತಿಯ ಪರಿಸರ ವಿದ್ದಾಗ ಮಾತ್ರ ಅದು ಸಮಂಜಸ ಎಂದು ಕರೆಯಿಸಿಕೊಳ್ಳುತ್ತದೆ. ಉದಾಹರಣೆಗೆ 'ಫ' ವರ್ಣವನ್ನು ಉಚ್ಚಾರಮಾಡುವಾಗ ಅದರ ಅರ್ಥವ್ಯಾಪಕತೆಯನ್ನು ತಿಳಿಯುವುದರ ಜೊತೆಗೆ ಅದು ಪ್ರಸಾರ ವಾಗುವ ವಿಭಿನ್ನ ಪರಿಸರವನ್ನು ಅರಿಯುವುದು ಅಷ್ಟೇ ಮುಖ್ಯವಾಗಿದೆ. ಇಲ್ಲವಾದಲ್ಲಿ ಅದರ ಸಾರ್ಥಕತೆ ಉಂಟಾಗುವುದಿಲ್ಲ. ಒಂದೇ ಪರಿಸರದಲ್ಲಿ ಅದು ಹೆಚ್ಚಿನ ವಿಭಿನ್ನತೆಯನ್ನು ಹೊಂದಿರದಿದ್ದರೂ ಪ್ರಾದೇಶಿಕವಾದ ವಿಭಿನ್ನಿತೆಯನ್ನು ಹೊಂದಿರಲು ಸಾಧ್ಯವಿದೆ. ಅಂತಹ ಸಂದರ್ಭದಲ್ಲಿ ಅವೆಲ್ಲದರ ಬಗ್ಗೆ ಪ್ರತ್ಯೇಕ ಧ್ವನಿಮಾ ಎಂದು ಪರಿಗಣಿಸಲಾಗುವುದಿಲ್ಲ. ಅದನ್ನು ಒಂದೇ ಧ್ವನಿಮಾ ಎಂದು ಪರಗಣಿಸಬೇಕಾಗುತ್ತದೆ. ಉದಾಹರಣೆಗೆ ಕನ್ನಡ ಭಾಷೆಯಲ್ಲಿಯೂ ಹಲವಾರು ಪ್ರಾಂತಭೇದಗಳಿರುವುದು ಸರಿಯಷ್ಟೆ. ಪ್ರಾಂತೀಯ ಭಾಷೆಗಳಾಗಿರಲು ಕಾರಣ ಅಲ್ಲಿಯ ಜನಜೀವನ, ಅನ್ಯಭಾಷೆಯ ಪ್ರಭಾವ ಸ್ಥಳೀಯ ರೂಢಿಗಳು ಇತ್ಯಾದಿ. ಇದನ್ನು ಗಮನಿಸಿಯೇ ಧ್ವನಿಯನ್ನು ನಾವು ಅರ್ಥೈಸಿಕೊಳ್ಳ ಬೇಕಾಗುತ್ತದೆ. ಉತ್ತರಕರ್ನಾಟಕದವರು ಬಳಸುವ ಅನೇಕ ಧ್ವನಿಗಳು ದಕ್ಷಿಣ ಕರ್ನಾಟಕದಲ್ಲಿಲ್ಲ. ದಕ್ಷಿಣ ಕರ್ನಾಟಕದ ಕೆಲವು ಧ್ವನಿಗಳು ಮೈಸೂರು ಕನ್ನಡದಲ್ಲಿಲ್ಲ. ಭಾಷಾಪರಿಸರದಮೇಲೆ ಪ್ರಾದೇಶಿಕತೆಯು ಪರಿಣಾಮ ಬಿರುತ್ತದೆ ಇವುಗಳನ್ನು ಗಮನಿಸಿಯೇ ಧ್ವನಿನಿರ್ಧರಿಸಬೇಕಾಗುತ್ತದೆ.

**ಸಂದರ್ಭ**

ಧ್ವನಿಯನ್ನು ಬಳಸುವ ನಿರ್ದಿಷ್ಟಸನ್ನಿವೇಶವೇ ಆ ಧ್ವನಿಯ ಸಂದರ್ಭವಾಗಿದೆ. ಸಂದರ್ಭಾನುಸಾರವಾಗಿ ಅದರ ಅರ್ಥ ವಿಭಿನ್ನವಾಗಿರಲು ಸಾಧ್ಯ. ಉದಾಹರಣೆಗೆ ಆಡು ಎಂಬ ಶಬ್ದವಿದೆ. ನಾನಾರ್ಥಬರುವಂತಹ ಪದವಾಗಿದೆ. ಸಾಂದರ್ಭಿಕವಾಗಿ ಆಟವನ್ನು ಆಡುತ್ತಾನೆ ಎನ್ನುವಲ್ಲಿ ಒಂದು ಅರ್ಥಹೊರಹೊಮ್ಮಿದರೆ, ನಾನು ಒಂದು

ಅದನ್ನು ನೋಡಿದೆ ಎನ್ನುವಲ್ಲಿ ಬೇರೊಂದು ಅರ್ಥವಿದೆ. ಇದರ ಜೊತೆಗೆ ಬಳಸುವವನು ಮಾನಸಿಕವಾಗಿ ದೈಹಿಕವಾಗಿ ಹಾಗೂ ಪ್ರಾದೇಶಿಕವಾಗಿ ಯಾವ ಹಿನ್ನೆಲೆಯನ್ನಿಟ್ಟುಕೊಂಡು ಅದನ್ನು ಬಳಸಿದ್ದಾನೆ ಎನ್ನುವುದು ಒಂದು ಕಡೆಯಾದರೆ ಇನ್ನೊಂದು ಕಡೆ ಅದನ್ನು ಸ್ವೀಕರಿಸುವವ, ಆತನಮನಸ್ಥಿತಿ ಭಾಷಾಪ್ರಭುತ್ವ ಪ್ರಾದೇಶಿಕಹಿನ್ನೆಲೆಯೂ ಅಷ್ಟೇ ಪ್ರಭಾವಬೀರುತ್ತದೆ. ಉದಾಹರಣೆಗೆ ಒಬ್ಬ ಮಾನಸಿಕವಾಗಿ ಚಿಂತಾಕ್ರಾಂತನಾಗಿದ್ದಾಗ ಅವನ ಮನಸ್ಸು ಆತನ ಹಿಡಿತದಲ್ಲಿರುವುದಿಲ್ಲ. ಆಗ ಆತ ಬಳಸುವಭಾಷೆ ಒಂದು ರೀತಿಯಾಗಿರುತ್ತದೆ. ಅದೇವ್ಯಕ್ತಿ ಮುಕ್ತಮನಸ್ಸಿನಲ್ಲಿದ್ದಾಗ ಬಳಸುವುದು ಇನ್ನೊಂದು ತೆರನಾಗಿರುತ್ತದೆ. ಸ್ವೀಕರಿಸುವ ವ್ಯಕ್ತಿಯೂ ಕೂಡ ಮಾನಸಿಕ ಅಸ್ವಸ್ಥನಾಗಿದ್ದಾಗ ಭಾಷೆಯನ್ನು ಅರ್ಥೈಸುವುದಕ್ಕೂ ಸ್ವಸ್ಥನಾಗಿರುವಾಗ ಅರ್ಥೈಸುವುದಕ್ಕೂ ಬಹಳ ವ್ಯತ್ಯಾಸವಿದೆ. ಈ ಎರಡು ಸಂದರ್ಭವನ್ನು ಗಮನಿಸಿಯೆ ನಾವು ಒಂದು ಧ್ವನಿಯನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ.

**ಆಘಾತ**

ಧ್ವನಿಯನ್ನು ಬಳಸುವಾಗ ಪ್ರತಿಯೊಂದು ಧ್ವನಿಯನ್ನು ಹೇಗೆ ಬಳಸಬೇಕು ಎನ್ನುವುದರ ಜೊತೆಗೆ ಎಷ್ಟು ಒತ್ತನ್ನು ನೀಡಬೇಕು ಎನ್ನುವುದನ್ನು ಒಂದು ಭಾಷಾ ಸಮುದಾಯ ಒಪ್ಪಿಕೊಂಡಿರುತ್ತದೆ. ಅದಕ್ಕೆ ವಿಭಿನ್ನವಾಗಿ ನಾವು ಬಳಸಿದಾಗ ಅನರ್ಥಕ್ಕೆಡೆಮಾಡಿ ಕೊಟ್ಟಂತಾಗುತ್ತದೆ. ಯಾವ ಅಕ್ಷರವನ್ನು ಎಷ್ಟು ಒತ್ತುಕೊಟ್ಟು ಉಚ್ಚರಿಸಬೇಕೆಂದು ನಿರ್ದಿಷ್ಟಪಡಿಸಿರುವಿಕೆಯೆ ಆಘಾತ ಎನ್ನುವ ಪದದ ಅರ್ಥ. ಇದು ಕೇವಲ ಒಂದು ಧ್ವನಿ ಅಥವಾ ಅಕ್ಷರದ ಮೇಲಿರಬಹುದು ಅಥವಾ ಶಬ್ದ ವಾಕ್ಯಗಳ ಮೇಲೂ ಇರಬಹುದು. ಅರ್ಥಾನುಸಾರಿಯಾಗಿ ನಿರ್ಧಾರಿತವಾಗಿರುತ್ತದೆ, ಸಂದರ್ಭಾನುಸಾರ ವ್ಯತ್ಯಾಸ ವಾಗಿರುತ್ತದೆ, ಬೇಗ ಬಾ ಎನ್ನುವ ಒಂದು ಪದರಚನೆ ಇದೆ ಎಂದಿಟ್ಟುಕೊಳ್ಳೋಣ. ಇಲ್ಲಿ ನಾವು ಬೇ ಎನ್ನುವ ಅಕ್ಷರದ ಮೇಲೆ ಹೆಚ್ಚು ಒತ್ತು ಕೊಟ್ಟಾಗ ಅದೊಂದು ಸಿಟ್ಟಿನಿಂದ ಉದ್ಗರಿಸುವ ಅರ್ಥವನ್ನು ನೀಡುತ್ತದೆ. ಅದೇ ಬೇಗ ಬಾ ಎನ್ನುವುದನ್ನು ಮೃದುವಾಗಿ ಉಚ್ಚರಿಸಿದರೆ ಅದು ನಮ್ಮ ನಮ್ರತೆಯನ್ನು ಸೂಚಿಸುತ್ತದೆ. ಇನ್ನೊಂದು ಸಂದರ್ಭದಲ್ಲಿ ಅದು ಮುದ್ದು ಭಾಷೆಯಾಗಿಯೂ ಮಕ್ಕಳಜೊತೆಗೆ ಸಂಭಾಷಿಸುವಾಗ ಬಳಕೆಯಾಗುತ್ತದೆ. ಹೀಗೆ ಆಘಾತವು ಅರ್ಥವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಇಂತಹ ಸಂದರ್ಭದಲ್ಲಿ ಇವುಗಳನ್ನೆಲ್ಲ ಪ್ರತ್ಯೇಕ ಧ್ವನಿಮಾ ಎಂದು ಪರಿಗಣಿಸಲಾಗುವುದಿಲ್ಲ. ಒಂದು

ಸ್ವತಂತ್ರಧ್ವನಿಯ ಉಪಧ್ವನಿಗಳಾಗಿವೆ ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ. ಇಲ್ಲವಾದಲ್ಲಿ ನಮ್ಮ ವರ್ಣಮಾಲೆಗೆ ಗಡಿರೇಖೆ ಹಾಕುವುದು ಕಷ್ಟದಾಯಕ ವಾಗಿರುತ್ತದೆ.

**ವಿರಾಮಚಿಹ್ನೆಗಳು**

ವಿರಾಮ ಚಿಹ್ನೆಗಳನ್ನು ಬಳಸುವುದು ಗ್ರಾಂಥಿಕ ಭಾಷೆಯಲ್ಲಿ ಮಾತ್ರವಾದರೂ ಮೌಖಿಕ ಭಾಷೆಯಲ್ಲಿ ವಿರಾಮಚಿಹ್ನೆಗಳನ್ನು ಗಮನಿಸಿಯೇ ನಾವು ಭಾಷೆಗಳನ್ನು ಬಳಸಬೇಕಾಗುತ್ತದೆ. ಧ್ವನಿ ನಿರ್ಣಯದಲ್ಲಿ ವಿರಾಮ ಚಿಹ್ನೆಗಳು ಪ್ರಮುಖ ಪಾತ್ರವಹಿಸುತ್ತವೆ. ಪ್ರಶ್ನೆಗಳನ್ನು ಕೇಳುವಾಗ ಆ ಪ್ರಶ್ನೆ ಒಂದು ವಾಕ್ಯದ ರೂಪದಲ್ಲಿರ ಬಹುದು ಅಥವಾ ಒಂದು ಶಬ್ದದ ರೂಪದಲ್ಲಿರಬಹುದು. ಆ ವಾಕ್ಯ ಅಥವಾ ಶಬ್ದದ ಕೊನೆಯಲ್ಲಿ ಪ್ರಶ್ನಾರ್ಥಕ ಚಿಹ್ನೆಯಿರಬೇಕು ಆ ಪ್ರಶ್ನಾರ್ಥಕ ಚಿಹ್ನೆಗನುಸಾರ ಆತ ಆ ಪ್ರಶ್ನೆಯ ಕೊನೆ ಅಕ್ಷರವನ್ನು ಉಚ್ಚಾರ ಮಾಡುವ ರೀತಿಯಲ್ಲಿ ಅದನ್ನು ಉಚ್ಚರಿಸ ಬೇಕಾಗಿರುತ್ತದೆ ಅದಕ್ಕೆ ವಿಭಿನ್ನವಾಗಿ ಅಥವಾ ಅದನ್ನು ಹೇಗೆ ಉಚ್ಚಾರ ಮಾಡಬೇಕೋ ಹಾಗೆ ಉಚ್ಚಾರ ಮಾಡದೆ ಸಹಜವಾಕ್ಯ ಎಂಬಂತೆ ಅದನ್ನು ಉಚ್ಚಾರ ಮಾಡಿದರೆ ಅದು ಹೇಗೆ ತಾನೆ ಪ್ರಶ್ನಾರ್ಥವನ್ನು ನೀಡಲಿಕ್ಕೆ ಸಾಧ್ಯ? ಉದಾ 'ಏನು' ಎನ್ನುವುದು ಒಂದು ಪ್ರಶ್ನಾರ್ಥಕಪದ ಎಂದಿಟ್ಟುಕೊಳ್ಳೋಣ. ಅದನ್ನು ಏರಿಕೆಯ ಸ್ವರದಲ್ಲಿ ಉಚ್ಚರಿಸಿದಾಗ ಅದೊಂದು ಪ್ರಶ್ನೆಯಾಗಲು ಸಾಧ್ಯ. ಅದಕ್ಕೆ ಬದಲಾಗಿ ಸಹಜವಾಗಿ ಮಾತಿನ ನಡುವೆ 'ಏನು' ಎಂದು ಕೇಳಿದರೆ ಅದು ಪ್ರಶ್ನೆ ಎಂದು ಕರೆಯಿಸಿಕೊಳ್ಳುವುದಿಲ್ಲ. ಅದೊಂದು ಸಾಮಾನ್ಯ ನುಡಿಯಾಗುತ್ತದೆ. ಆದ್ದರಿಂದ ಪ್ರಶ್ನೆ ಎಂದು ಕರೆಯಿಸಿಕೊಳ್ಳಬೇಕಾದರೆ ಆ ರೀತಿಯ ಉಚ್ಚಾರಣೆಯಾಗಬೇಕಾಗುತ್ತದೆ. ಹಾಗೆಯೆ ಉದ್ಗಾರವಾಚಕ ಚಿಹ್ನೆ, ಅಲ್ಪವಿರಾಮ, ಅರ್ಧವಿರಾಮ, ಪೂರ್ಣವಿರಾಮ, ಇತ್ಯಾದಿ ವಿರಾಮ ಚಿಹ್ನೆಗಳೂ ಧ್ವನಿಗೆ ಅರ್ಥಬೋಧೆ ಉಂಟುಮಾಡುತ್ತವೆ. ಇಂತಹ ಉಚ್ಚಾರಣೆ ಉದ್ದೇಶದಿಂದಲೇ ಅದಕ್ಕೊಂದು ಸಂಕೇತ ನೀಡಲಾಗುತ್ತದೆ. ಆ ಸಂಕೇತವೇ ಒಂದು ಧ್ವನಿಯನ್ನು ಅರ್ಥಸೂಚ್ಯವನ್ನಾಗಿಸುತ್ತದೆ. ಆದ್ದರಿಂದ ವಿರಾಮ ಚಿಹ್ನೆಗಳೂ ಕೂಡ ಅರ್ಥ ದೃಷ್ಟಿಯಿಂದ ಧ್ವನಿಗಳಿಗೊಂದು ವಿಶಿಷ್ಟಾರ್ಥವನ್ನು ನೀಡುತ್ತಿರುತ್ತವೆ.

**ಸಮಯ/ ಮಾತ್ರಾಕಾಲ**

ಧ್ವನಿಪ್ರಾಸರಗೊಳ್ಳುವ ಕಾಲವನ್ನು ಧ್ವನಿಯ ಸಮಯ ಅಥವಾ ಅದರ ಮಾತ್ರಾಕಾಲ ವೆಂದು ಕರೆಯಲಾಗುತ್ತದೆ. ಭಾಷಾವ್ಯವಸ್ಥೆಯಲ್ಲಿ ರೂಢಿಗತವಾಗಿ ಬಂದಿರುತ್ತದೆ. ಸಾಮಾನ್ಯವಾಗಿ ಒಂದು ಮಾತ್ರಾಕಾಲಕ್ಕೆ ಒಂದು ಸೆಕೆಂಡು ಅಥವಾ ಒಂದು ಕಣ್ಣು ಮುಚ್ಚಿತೆರೆಯುವ ಸಮಯ. ನಾವು ನಿರಂತರವಾಗಿ ಬಳಸುವ ಕಾಲಾವಕಾಶವನ್ನೆ ಒಂದು ಮಾತ್ರಾಕಾಲ ವೆಂದು ಕರೆಯುತ್ತೇವೆ. ಅದರ ಆಧಾರದ ಮೇಲೆ ಒಂದು ಮಾತ್ರಾಕಾಲದ ಅಕ್ಷರವನ್ನು ಹ್ರಸ್ವ ಎಂದೂ, ಎರಡು ಮಾತ್ರಾಕಾಲಗಳನ್ನು ಹೊಂದಿದ ಅಕ್ಷರವನ್ನು ದೀರ್ಘವೆಂದು ಹಾಗೂ ಮೂರುಮಾತ್ರಾಕಾಲವನ್ನು ಹೊಂದಿರುವ ಅಕ್ಷರವನ್ನು ಪ್ಲುತವೆಂದೂ ಕರೆಯಲಾಗುತ್ತದೆ. ಉದಾಹರಣೆಗೆ 'ಬರೆ' ಎಂಬ ಪದವನ್ನು 'ಬಾರೆ' ಎಂದು ಉಚ್ಚಾರ ಮಾಡಿದರೆ ಅರ್ಥವ್ಯತ್ಯಾಸವಾಗುತ್ತದೆ.

ಏಕಮಾತ್ರೋ ಭವೇದ್ಧ್ರಸ್ವೋ ದ್ವಿಮಾತ್ರೋ ದೀರ್ಘ ಉಚ್ಯತೇ
ತ್ರಿಮಾತ್ರಸ್ತು ಪ್ಲುತೋಜ್ಞೇಯೋ ವ್ಯಜನಂಚಾರ್ಧಮಾತ್ರಕಮ್[60]

(ಒಂದು ಮಾತ್ರಾಕಾಲದಲ್ಲಿ ಉಚ್ಚಾರಮಾಡುವ ವರ್ಣವನ್ನು ಹ್ರಸ್ವವೆಂತಲೂ, ಎರಡು ಮಾತ್ರಾಕಾಲದಲ್ಲಿ ಉಚ್ಚರಿತವಾಗುವ ವರ್ಣವನ್ನು ದೀರ್ಘವೆಂತಲೂ, ಎರಡಕ್ಕಿಂತ ಹೆಚ್ಚು ಮಾತ್ರಾಕಾಲದಲ್ಲಿ ಉಚ್ಚರಿತವಾಗುವ ವರ್ಣವನ್ನು ಪ್ಲುತಾಕ್ಷರವೆಂದು ಕರೆಯುತ್ತಾರೆ. ವ್ಯಂಜನವು ಅರ್ಧಮಾತ್ರೆಯನ್ನು ಹೊಂದಿದೆ)ಕೇಶಿರಾಜನು

ಹ್ರಸ್ವಮದೇಕಮಾತ್ರಕಂ,
ದೀರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ[61] ಎಂದು ಹೇಳಿದ್ದಾನೆ .

ಹೀಗೆ ಮಾತ್ರಾಕಾಲವು ಧ್ವನಿಯನ್ನು ಅರ್ಥಮಾಡಿಕೊಳ್ಳುವಾಗ ಗಮನಿಸಬೇಕಾಗಿದೆ.

---

[60] ಕನ್ನಡ ಛಂದಃಸ್ವರೂಪ.ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ, ಮೈಸೂರು ಪ್ರಿಂಟಿಂಗ ಪ್ರೆಸ್ ಮೈಸೂರು, ಎರಡನೇ ಮುದ್ರಣ 1996, ಪುಟ ಸಂಖ್ಯೆ : 15, ಮೊದಲ ಶ್ಲೋಕ.

[61] ಕೇಶಿರಾಜದರ್ಪಣ', ವ್ಯಾಖ್ಯಾನ: ಪ್ರೊ। ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಸಂ. ಡಾ. ಪಾದೇಕಲ್ಲು ವಿಷ್ಣುಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ 1999 ಉಡುಪಿ, ಸೂತ್ರ 20 ಪುಟ ಸಂಖ್ಯೆ : 39.

## ದೇಶೀಯತೆ

ಪ್ರತಿಯೊಂದು ಹೊಸಭಾಷೆಯ ಉತ್ಪತ್ತಿ ಯಾವುದೋ ಕ್ಷಣದಲ್ಲಿ ನಿರ್ಮಾಣವಾಗುವಂತದ್ದಲ್ಲ. ಅದೊಂದು ದೀರ್ಘ ಸಮಯದ ಜೀವನಾನುಭದ ಪಾಕವಾಗಿರುತ್ತದೆ. ಶತ ಶತ ಮಾನಗಳ ಪರಿಶ್ರಮದ ಫಲವಾಗಿದೆ. ಕನ್ನಡನಾಡಿನಮಟ್ಟಿಗೆ ಹೇಳುವುದಾರೆ ನಮ್ಮಲ್ಲಿ ಅನೇಕಭಾಷಾ ವೈವಿಧ್ಯಗಳನ್ನು ಕಾಣಬಹುದು. ಇದು ಕರ್ನಾಟಕದ ಗಡಿಜಿಲ್ಲೆಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಅನ್ಯಭಾಷಾಪ್ರಭಾವವು ಇದಕ್ಕೆ ಪ್ರಮುಖ ಕಾರಣವಾಗಿರುತ್ತದೆ. ದೇಶೀಯತೆಯ ಹಿನ್ನೆಲೆಯಲ್ಲಿ ಕೆಲವು ಸ್ಥಳೀಯಶಬ್ದರೂಢಿಗಳು ಒಂದು ಮುಖ್ಯಭಾಷೆಯ ಮೇಲೆ ಪ್ರಭಾವಬೀರುತ್ತವೆ. ಉದಾಹರಣೆಗೆ ನಾವು ಇಂದು ಇಂಗ್ಲೀಷ್ ಭಾಷೆಯನ್ನು ವ್ಯಾವಹರಿಕವಾಗಿ ಬಳಸುತ್ತೇವೆ. ಕನ್ನಡ ಭಾಷಾಪದಗಳೂಕೂಡ ಇಂಗ್ಲೀಷ್‌ಭಾಷೆಯಲ್ಲಿ ಬಳಕೆಯಾಗುತ್ತವೆ. ಇನ್ನು ಕೆಲವು ಶಬ್ದಗಳಿಗೆ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಭಾಷಾಂತರಮಾಡುವುದು ಅಸಾಧ್ಯವಾಗಿದೆ.

## ಪ್ರಾದೇಶಿಕ ವೈವಿಧ್ಯ

ಕನ್ನಡಭಾಷೆ ಕರ್ನಾಟಕ ರಾಜ್ಯದ ಆಡಳಿತಭಾಷೆ ಮತ್ತು ರಾಜ್ಯಭಾಷೆಯಾಗಿದೆ. ಹೀಗಿದ್ದರೂ ಕರ್ನಾಟಕದ ಸಂಪೂರ್ಣಭಾಗದಲ್ಲಿ ಕನ್ನಡಮಾತನಾಡುವವರಿದ್ದಾರೆಂದು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಇಲ್ಲಿಯೂ ಅನೇಕ ಭಾಗಗಳಲ್ಲಿ ಪ್ರಾದೇಶಿಕವಾಗಿ ವೈವಿಧ್ಯವನ್ನು ಕಾಣಬಹುದಾಗಿದೆ. ಉದಾಹರಣೆಗೆ ಮರಾಠಿಕನ್ನಡ, ಹೈದ್ರಾಬಾದ್‌ಕನ್ನಡ, ಕರಾವಳಿಕನ್ನಡ, ಮೈಸೂರು ಕನ್ನಡ, ಬೆಂಗಳೂರು ಕನ್ನಡ ಇತ್ಯಾದಿ. ಪ್ರಾದೇಶಿಕವಾಗಿ ಭಿನ್ನತೆಯನ್ನು ಹೊಂದಿರುವುದರ ಜೊತೆಗೆ ಪುನಃ ಅಲ್ಲಿ ಜಾತಿಭಾಷೆಗಳನ್ನು ಕಾಣಬಹುದಾಗಿದೆ. ಉದಾಹರಣೆಗೆ ಜಾತಿ ಭಾಷೆಗಳು: ಹವ್ಯಕ, ನಾಡವರಭಾಷೆ, ಲಂಬಾಣಿಭಾಷೆ, ಈಡಿಗರಭಾಷೆ, ಸೋಲಿಗರಭಾಷೆ ಇತ್ಯಾದಿಯಾಗಿ ಪ್ರತಿಯೊಂದು ಜನಾಂಗಕ್ಕೂ ಒಂದೊಂದು ಭಾಷಾಶೈಲಿಯಿರುತ್ತದೆ. ಈ ಕೆಳಗಿನ ಕೋಷ್ಟಕದ ಮೂಲಕ ಇನ್ನಷ್ಟು ವಿಶದೀಕರಿಸಬಹುದು

| |
|---|
| ಕನ್ನಡಭಾಷೆ |
| ಪ್ರಾದೇಶಿಕ ಕನ್ನಡಭಾಷಾ ಪ್ರಭೇದಗಳು |
| ಜಾತಿ / ಜನಾಂಗದ ಆಧಾರದಮೇಲೆ ಕನ್ನಡಭಾಷಾ ಪ್ರಭೇದಗಳು |
| ಜಾತಿ / ಜನಾಂಗದ ಆಧಾರದಮೇಲೆ ಪ್ರಾದೇಶಿಕ ಕನ್ನಡಭಾಷಾ ಪ್ರಭೇದಗಳು |
| ಉಪಜಾತಿ / ಜನಾಂಗದ ಆಧಾರದಮೇಲೆ ಕನ್ನಡಭಾಷಾ ಪ್ರಭೇದಗಳು |
| ಉಪಜಾತಿ / ಜನಾಂಗದ ಆಧಾರದಮೇಲೆ ಪ್ರಾದೇಶಿಕ ಕನ್ನಡಭಾಷಾ ಪ್ರಭೇದಗಳು ಇತ್ಯಾದಿ. |

ಕೋಷ್ಟಕ 01

ಉದಾ: ಕನ್ನಡ ಭಾಷೆ; ಪ್ರಾದೇಶಿಕವಾಗಿ ಮರಾಠಿಕನ್ನಡ, ಹೈದ್ರಾಬಾದ್‌ಕನ್ನಡ, ಕರಾವಳಿಕನ್ನಡ, ಮೈಸೂರು ಕನ್ನಡ, ಬೆಂಗಳೂರು ಕನ್ನಡ ಇತ್ಯಾದಿ ಭೇದಗಳು; ಹವ್ಯಕ, ನಾಡವರಭಾಷೆ, ಲಂಬಾಣಿಭಾಷೆ, ಈಡಿಗರಭಾಷೆ, ಸೋಲಿಗರಭಾಷೆ ಇತ್ಯಾದಿ; ಕರಾವಳಿ ಹವ್ಯಕ ಕನ್ನಡ, ಮೈಸೂರು ಹವ್ಯಕ ಕನ್ನಡ, ಬೆಂಗಳೂರು ಹವ್ಯಕ ಕನ್ನಡ; ಒಂದು ಜಾತಿಯಲ್ಲಿ ಅನೇಕ ಉಪಜಾತಿಗಳಿರುತ್ತವೆ. ಉದಾಹರಣೆಗೆ ಬ್ರಾಹ್ಮಣರಭಾಷೆಯಲ್ಲಿ ಹವ್ಯಕ, ಶಿವಳ್ಳಿ,ಸ್ಮಾರ್ತ, ಕುಲಕರ್ಣಿ, ಚಿತ್ಪಾವನ,ಮರಾಠಿ ಇತ್ಯಾದಿ ಅನೇಕ ಪ್ರಭೇದಗಳಿವೆ ಅವರೆಲ್ಲ ಒಂದು ಭಾಷೆಯನ್ನು ರೂಢಿಸಿಕೊಂಡು ಬಂದಿದ್ದಾರೆ. ಹೀಗೆ ಭಾಷಾ ಪ್ರಭೇದವನ್ನು ಸೂಕ್ಷ್ಮವಾಗಿಗಮನಿಸುತ್ತಾ ಹೋದರೆ ಅನೇಕ ಪ್ರಭೇದಗಳಪಟ್ಟಿಯನ್ನೇ ತಯಾರಿಸಬಹುದಾಗಿದೆ. ಈ ರೀತಿಯ ಭಿನ್ನತೆಯಹಿನ್ನೆಲೆಯನ್ನು ಅರಿತುಕೊಂಡು ಧ್ವನಿ ನಿರ್ಧರಿಸಬೇಕಾಗುತ್ತದೆ.

## ದ್ವಂದ್ವತೆ

ಕೆಲವು ಸಂದರ್ಭದಲ್ಲಿ ಭಾಷಾ ಬಳಕೆಯಲ್ಲಿ ನಾವು ದ್ವಂದ್ವತೆಯನ್ನು ಕಾಣುತ್ತೇವೆ. ದ್ವಂದ್ವತೆಯೆಂದರೆ ಒಂದು ಧ್ವನಿ ನಾನಾರ್ಥವನ್ನು ಹೊಂದಿರಬಹುದು. ಅದು ಯಾವ ಉದ್ದೇಶ ಹೊಂದಿರುತ್ತದೆಯೋ ಆ ಉದ್ದೇಶಕ್ಕೆ ಅದನ್ನು ಬಳಸದೆ ಅದು ಪರೋಕ್ಷವಾಗಿ

ನೀಡುವ ಇನ್ನೊಂದು ಅರ್ಥದ ದೃಷ್ಟಿಯಿಂದ ಬಳಸುವುದು. ಇದರ ಅರ್ಥ ಯಾವ ಶಬ್ದ ಭಂಡಾರದಲ್ಲಿಯೂ ಕಾಣಸಿಗುವುದಿಲ್ಲ. ಇದು ಕೇವಲ ಅನುಭವಜನ್ಯವಷ್ಟೆ. ಇದನ್ನೆ ದ್ವಂದ್ವತೆ ಎನ್ನಲಾಗಿಗಿದೆ. ಧ್ವನ್ಯಾರ್ಥವೆಂತಲೂ ಕಾವ್ಯಮೀಮಾಂಸೆಯಲ್ಲಿ ಕರೆಯಲಾಗಿದೆ. ದ್ವಂದ್ವತೆಯನ್ನು ಅರ್ಥೈಸಿಕೊಳ್ಳುವಾಗ ಆತನ ಭಾಷಾ ಪಾಂಡಿತ್ಯವು ಪ್ರಮುಖ ಪಾತ್ರ ವಹಿಸುತ್ತದೆ. ಇಲ್ಲವಾದಲ್ಲಿ ಅದು ಯಾವ ಉದ್ದೇಶವಿಟ್ಟು ಕೊಂಡು ಬಳಲಾಗಿತ್ತೋ ಆ ಉದ್ದೇಶ ಈಡೇರುವುದಿಲ್ಲ. ಉದಾ ಒಂದುಸಮಾರಂಭದಲ್ಲಿ ಅತಿಥಿಗಳನ್ನು ಪರಿಚಯಿಸಿಕೊಡುತ್ತಿರುವಾಗ ನಾವು ಅನೇಕರೀತಿಯಲ್ಲಿ ಅತಿಥಿಗಳನ್ನು ಹೊಗಳಿ ಹೊಗಳಿ ಅಟ್ಟಕ್ಕೇರಿಸುತ್ತೇವೆ. 'ದಾನ ಶೂರ ಕರ್ಣನಂತೆ', 'ಸೂರ್ಯನಿಗೆ ಸಮಾನನು', 'ನಡೆದಾಡುವ ವಿಶ್ವಕೋಶ' ಇತ್ಯಾದಿಯಾಗಿ ವರ್ಣಿಸುತ್ತೇವೆ. ಈ ಎಲ್ಲ ಸಂದರ್ಭದಲ್ಲಿ ನಾವು ಬಳಸುವ ಪದಗಳು ಶಾಬ್ದಿಕವಾಗಿ ನೀಡುವ ಅರ್ಥ ಯಾವುದಿದೆಯೋ ಅದಕ್ಕೆ ಆ ವ್ಯಕ್ತಿ ನೂರಕ್ಕೆನೂರರಷ್ಟು ಪೂರಕವಾಗಿರುವುದಿಲ್ಲ. ಕೆಲವರಂತೂ ತದ್ವಿರುದ್ಧ ವಾಗಿರುತ್ತಾರೆ. ಅತಿಥಿಗಳನ್ನು ಹೊಗಳಿ ಮಾತನಾಡುವ ಸಂಪ್ರದಾಯ ನಮ್ಮದಾಗಿರುವ ಕಾರಣ ಅದನ್ನು ಮುಂದುವರಿಸಿಕೊಂಡು ಹೋಗುತ್ತಿದ್ದೇವೆ. ಹೀಗೆ ಶಬ್ದಗಳನ್ನು ಪ್ರಯೋಗಿಸಿದಾಗ ಅದರ ದ್ವಂದ್ವತೆಯನ್ನು ಪರಿಗಣಿಸುವ ಸಾಮರ್ಥ್ಯವು ನಮಗೆ ಅವಶ್ಯವಾಗಿ ಬೇಕಾಗುತ್ತದೆ. ಇಲ್ಲಿ ಒಂದೇ ರೀತಿಯ ಧ್ವನಿ ಸಮುದಾಯವು ವಿಭಿನ್ನ ಆರ್ಥವನ್ನು ನೀಡುತ್ತರುತ್ತದೆ. ಇದನ್ನು ಪರಿಗಣಿಸಿಯೇ ಧ್ವನಿಯನ್ನು ನಿರ್ಧರಿಸ ಬೇಕಾಗುತ್ತದೆ. ಇದು ಮುಖ್ಯವಾಗಿ ಬೌದ್ಧಿಕ ಕಸರತ್ತಿಗೆ ಸಂಬಂಧಿಸಿದ ವಿಚಾರವಾಗಿದೆ. ಬಹುತೇಕವಾಗಿ ಮೌಖಿಕಭಾಷೆಯಲ್ಲಿ ಹೇರಳವಾಗಿ ಕಂಡುಬರುತ್ತದೆ.

## ಪ್ರಯೋಜನ

'ಪ್ರಯೋಜನಮನುದ್ದಿಶ್ಯ ಮಂದೋಪಿ ನಪ್ರವರ್ತತೆ' ಎನ್ನುವ ಮಾತಿದೆ. ಅಂದರೆ ಪ್ರಯೋಜನವಿಲ್ಲದೆ ಬುದ್ಧಿಮಾಂದ್ಯವುಳ್ಳವನೂ ಯಾವುದೇಕಾರ್ಯಕ್ಕೆ ಮುಂದಾಗುವುದಿಲ್ಲ. ಭಾಷೆಯಲ್ಲಿ ಯಾವುದೇ ಧ್ವನಿ ಬಳಕೆಯಾಗಬೇಕಾದರೂ ಅದಕ್ಕೊಂದು ನಿರ್ದಿಷ್ಟ ಉದ್ದೇಶ ವಿರಬೇಕಾಗುತ್ತದೆ. ಇಲ್ಲವಾದಲ್ಲಿ ಅದು ಕೇವಲ ಕೇಶಿರಾಜ ಹೇಳಿದಂತೆ ಘನಸ್ವನಾದಿ ಧ್ವನಿಗಳಾಗುತ್ತವೆ. ಇಲ್ಲಿ ಎರಡು ಅಂಶಗಳು ಮುಖ್ಯವಾಗಿವೆ. ಒಂದು ಭಾಷೆಯನ್ನು ಅರ್ಥಮಾಡಿಕೊಳ್ಳಬೇಕಾದಾಗ ಮಾತನಾಡುವವ ಹಾಗು ಅದನ್ನು

ಸ್ವೀಕರಿಸುವವ ಇವರಿಬ್ಬರಲ್ಲಿ ಪರಸ್ಪರ ಪ್ರಯೋಜನಾಪೇಕ್ಷೆಯಿಲ್ಲದೆ ಹೋದರೆ ಅರ್ಥವಾಗುವುದಿಲ್ಲ. ಕೇವಲ ಭಾಷೆಯನ್ನು ಬಳಸಿದಾಕ್ಷಣ ಅದು ಅರ್ಥವಾಗಬೇಕೆಂದೇನಿಲ್ಲ. ಅದು ಯಾವ ಉದ್ದೇಶದಿಂದ ಬಳಕೆಯಾಗಿದೆ ಎನ್ನುವುದು ಬಹುಮುಖ್ಯವಾಗಿದೆ, ಒಂದು ಧ್ವನಿಯು ಪ್ರಸಾರವಾಗುವ ನಿರ್ದಿಷ್ಟ ಉದ್ದೇಶವನ್ನು ಪ್ರಯೋಜನ ಎಂದು ಕರೆಯಬಹುದಾಗಿದೆ. ಈ ಪ್ರಯೋಜನದ ಆಧಾರದ ಮೇಲೆ ಧ್ವನಿಯನ್ನು ಅರ್ಥೈಸಿಕೊಳ್ಳಬಹುದು ಅದರಜೊತೆಗೆ ಧ್ವನಿಯ ವಿಭಿನ್ನ ಅರ್ಥವನ್ನು ಊಹಿಸಿಕೊಳ್ಳಬಹುದಾಗಿದೆ.

## ಆರೋಗ್ಯ

'ಆರೋಗ್ಯವೇ ಭಾಗ್ಯ' ಎಂದು ಗಾದೆಯಿದೆ. ಭಾಷೆಯನ್ನು ಬಳಸುವಾಗ ಆರೋಗ್ಯ ಮಹತ್ತರ ಪಾತ್ರವಹಿಸುತ್ತದೆ. ಆರೋಗ್ಯ ಸರಿಯಿದ್ದಾಗ ಮಾತ್ರ ನಿರೀಕ್ಷಿತ ಮಟ್ಟದಲ್ಲಿ ವ್ಯವಹರಿಸಲು ಸಾಧ್ಯವಿದೆ. ಅನಾರೋಗ್ಯದಲ್ಲಿದ್ದಾಗ ಮಾನಸಿಕ ಅಸ್ವಸ್ಥನಾಗಿ ಭಾಷೆಯನ್ನು ಬಳಸುತ್ತಿರುತ್ತಾನೆ. ಅದು ಅರ್ಥಪೂರ್ಣವೂ, ಅನರ್ಥವೂ, ಅಸಂಬದ್ಧವೂ ಆಗಿರುವ ಸಾಧ್ಯತೆಯಿದೆ. ಬೌದ್ಧಿಕವಾಗಿ ಅನಾರೋಗ್ಯ ಪೀಡಿತನಾಗಿದ್ದರೆ ಆತನ ಮಾತು ಸಾಮಾನ್ಯವಾಗಿ ಅಸಂಬದ್ಧವಾಗಿರುತ್ತದೆ. ಹಾಗೆಯೆ ಇತರ ಯಾವುದಾದರೂ ಅಂಗಾಗ ಗಳು ಅಂದರೆ ಧ್ವನಿಉಚ್ಚಾರಕ್ಕೆ ಅಡ್ಡಿಯಾಗದ ಹಾಗೆ ಇತರ ಅಂಗಾಗಳು ಯಾವುದಾದರೂ ನ್ಯೂನತೆಗೊಳಗಾದರೆ ಯಾವುದೇ ಹಾನಿಯಿರುವುದಿಲ್ಲ. ಆದರೆ ದೈಹಿಕವಾಗಿ ಧ್ವನ್ಯಂಗಗಳು ತೊಂದರೆಯಿಂದ ಬಳಲಿದಾಗ ಮಾತ್ರ ಅರ್ಥಕ್ಕೆ ಚ್ಯುತಿ ಬರುತ್ತದೆ. ಯಾವ ಅರ್ಥವನ್ನು ನೀಡಬೇಕಾಗಿತ್ತೋ ಆ ಅರ್ಥವನ್ನು ನೀಡದೆ ವ್ಯತಿರಿಕ್ತ ಅರ್ಥವನ್ನು ನೀಡುತ್ತಿರುತ್ತದೆ. ಆದ್ದರಿಂದ ಒಬ್ಬವ್ಯಕ್ತಿಯ ಭಾಷೆಯನ್ನು ಅರ್ಥಮಾಡಿಕೊಳ್ಳುವಾಗ ಆತನ ಆರೋಗ್ಯದ ಅರಿವು ಚೆನ್ನಾಗಿ ತಿಳಿದಿರಬೇಕಾಗಿರುವುದು ಅತ್ಯವಶ್ಯವಾಗಿದೆ.

## ಧೈರ್ಯ

ಒಬ್ಬವ್ಯಕ್ತಿ ಹೇಗೆ ಮಾತನಾಡುತ್ತಾನೆ ಎಂದು ಅರ್ಥೈಸಿಕೊಳ್ಳುವಾಗ ಆತನ ಎದೆಗಾರಿಕೆಯು ಪ್ರಭಾವ ಬೀರುತ್ತದೆ. ಧೈರ್ಯವಿದ್ದರೆ ಆತ್ಮವಿಶ್ವಾಸ ತಾನಾಗಿಯೇ

ಇರುತ್ತದೆ. ಇದಕ್ಕೆ ವಿರುದ್ಧವಾಗಿ ಒಬ್ಬ ವ್ಯಕ್ತಿ ಗಾಬರಿಯಿಂದ, ಹೆದರಿಕೆಯಿಂದ ಏನೇನನ್ನೋ ಹೇಳುವ ಸಾಧ್ಯತೆಯಿದೆ. ಕೆಲವರು ಮಾತನಾಡಲಾರದೆ ತೊದಲುತ್ತಾರೆ. ಉದಾರಣೆಗೆ ಮೊದಲಸಲ ಯಾವುದೇ ಒಂದು ಸಭೆಗೆ ನಮ್ಮನ್ನು ಆಮಂತ್ರಿಸಿದರೆ ನಾವು ಮಾತನಾಡುವಾಗ ತೊದಲುತ್ತೇವೆ. ಕೆಲವು ವಿಷಯಗಳನ್ನು ಮರೆಯುತ್ತೇವೆ. ಕೆಲವಿಚಾರಗಳನ್ನು ಹೇಳಬೇಕೆಂದು ಬಹಳದಿನಗಳಿಂದ ಎಡೆಬಿಡದೆ ಪ್ರಯತ್ನ ಮಾಡುತ್ತಿದ್ದರೂ ಅವುಗಳನ್ನು ಪೂರ್ಣವಾಗಿ ಪ್ರಸ್ತುತಪಡಿಸಲು ಸಾಧ್ಯವಾಗುವುದಿಲ್ಲ. ಇನ್ನು ಕೆಲವರು ನಡುಗಿ ಸುಸ್ತಾಗಿ ಕುಳಿತುಬಿಡುತ್ತಾರೆ ಆದ್ದರಿಂದ ಒಬ್ಬ ವ್ಯಕ್ತಿಯ ಧೈರ್ಯವೂ ಕೂಡ ಧ್ವನಿಯನ್ನು ಅರ್ಥೈಸಿಕೊಳ್ಳುವಾಗ ಪರಿಣಾಮಬೀರುತ್ತದೆ.

### ಧ್ವನ್ಯಂಗಗಳ ಪ್ರಭಾವ

ಧ್ವನ್ಯಂಗಗಳ ಪ್ರಭಾವವನ್ನು ಎರಡುರೀತಿಯಲ್ಲಿ ವರ್ಗೀಕರಿಸಬಹುದು. ಒಂದು ಧ್ವನ್ಯಂಗಗಳು ಊನವಾಗಿರುವ ವ್ಯಕ್ತಿ, ಧ್ವನ್ಯಂಗಗಳ ಬಗ್ಗೆ ತಿಳುವಳಿಕೆ ಇಲ್ಲದ ವ್ಯಕ್ತಿ ಒಬ್ಬವ್ಯಕ್ತಿಗೆ ಸ್ವಾಭಾವಿಕವಾಗಿ ಆತನ ಹುಟ್ಟಿನಿಂದಲೇ ಅಥವಾ ಆನಂತರದಲ್ಲಿ ಆಕಸ್ಮಿಕವಾಗಿ ಧ್ವನ್ಯಂಗಗಳು ಊನವಾಗಿದ್ದರೆ, ಆತ ಸ್ಪಷ್ಟವಾಗಿ ಅಥವಾ ಭಾಗಶಃವಾಗಿ ಮಾತನಾಡಲಾರ. ಅದೇರೀತಿ ಇನ್ನು ಕೆಲವರಿಗೆ ಧ್ವನ್ಯಂಗಗಳ ಬಗ್ಗೆ ಯಾವುದೇ ತಿಳುವಳಿಕೆ ಇರುವುದಿಲ್ಲ. ಪಾರಂಪರಿಕವಾಗಿ ತಮ್ಮ ಮನೆತನದ ರೂಢಿಯಿಂದ ಭಾಷೆಯನ್ನು ಕಲಿತುಕೊಂಡು ಅನುಸರಿಸಿಕೊಂಡು ಬಂದಿರುತ್ತಾರೆ. ಇವರು ತಮ್ಮ ಪೂರ್ವಜರನ್ನು ಯಥಾವತ್ತಾಗಿ ಅನುಸರಿಸುತ್ತಿರುವ ಕಾರಣ ಪೂರ್ವಜರ ತಪ್ಪುಗಳನ್ನೇ ಸರಿ ಎಂದು ಭಾವಿಸುತ್ತಾ ಬಂದಿರುತ್ತಾರೆ. ಅದುವೇ ಸರಿ ಎಂದು ವಾದಿಸುತ್ತಾರೆ. ಅದು ಯಾಕೆ ತಪ್ಪಿರಬಹುದೆಂಬ ಆಲೋಚನೆ ಅವರಿಗಾಗುವುದಿಲ್ಲ. ಏಕೆಂದರೆ ಶಿಕ್ಷಣದಿಂದ ವಂಚಿತರಾಗಿ ಆ ರೀತಿ ಹೇಳುವುದು ಸ್ವಾಭಾವಿಕವಾಗಿದೆ.

## 4.3 ಧ್ವನಿ ಉಗಮದ ರಹಸ್ಯ

ಧ್ವನಿಯನ್ನು ಮನುಷ್ಯ ಸಹಜವಾಗಿ ಹೊರಡಿಸಬಲ್ಲವನಾಗಿದ್ದರೂ ಅದರ ಉಗಮದ ಸ್ವರೂಪ ತಿಳಿದರೆ ಆಶ್ಚರ್ಯವಾಗದಿರದು ಎಂತಹ ಅದ್ಭುತ ಪ್ರಕ್ರಿಯೆಯಲ್ಲವೇ ಎಂದು

ಊಹಿಸಲೂ ಅಸಾಧ್ಯವಾಗುತ್ತದೆ. 'ಧ್ವನಿ' ಹೇಗೆ ಉದ್ಗಮಿಸುತ್ತದೆ ಎನ್ನುವುದನ್ನು ಪ್ರಾಚೀನ ಸಂಸ್ಕೃತ ವೈಯಾಕರಣಿಗಳೂ ವಿಸ್ತೃತವಾಗಿ ಚರ್ಚಿಸಿದ್ದಾರೆ. ಅವೆಲ್ಲದರಲ್ಲಿ ಮುಖ್ಯವಾಗಿ ಗಮನಿಸುವಂತದ್ದು ಪಾಣಿನಿಯ ಅಭಿಪ್ರಾಯ. ಆತ ತನ್ನ ಶಿಕ್ಷಾ ದಲ್ಲಿ

ಆತ್ಮಾ ಬುಧ್ಯಾ ಸಮೇತ್ಯಾರ್ಥಾನ್ ಮನೋಯುಂಕ್ತೇ ವಿವಕ್ಷಯಾ।
ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್ ॥[62]
ಮಾರುತಸ್ತೂರಸಿ ಚರನ್ ಮಂದ್ರಂ ಜನಯತಿ ಸ್ವರಂ।
ಪ್ರಾತಃ ಸವನಯೋಗಂತಂ ಛಂದೋ ಗಾಯತ್ರಮಾಶ್ರಿತಂ॥[63]
ಕಂಠೇ ಮಾಧ್ಯಂದಿನಯುಗಂ ಮಧ್ಯಮಂ ತ್ರೈಷ್ಟುಭಾನುಗಂ।
ತಾರಂ ತಾರ್ತೀಯಸವನಂ ಶೀರ್ಷಣ್ಯಂ ಜಾಗತಾನುಗಂ॥[64]
ಸೋದೀರ್ಣೋರ್ ಮೂರ್ಧ್ನ್ಯಭಿಹತೋ ವಕ್ತ್ರಮಾಪಾದ್ಯ ಮಾರುತಃ।
ವರ್ಣಾರ್ಞ್ಜನಯತೇ ತೇಷಾಂವಿಭಾಗಃ ಪಂಚಧಾ ಸ್ಮೃತಃ॥[65]

ಭಾರತೀಯ ಪರಂಪರೆಯ ಅನುಸಾರ ಆತ್ಮ ಮತ್ತು ಬುದ್ಧಿ ಜೊತೆಗೆ ಸಮಾಲೋಚಿಸಿ ಮನಸ್ಸಿಗೆ ಅಭಿವ್ಯಕ್ತಿ ಮಾಡುವಂತೆ ಆಜ್ಞೆಮಾಡುತ್ತವೆ, ಮನಸ್ಸು ಕಾಯಾಗ್ನಿಯ ಪ್ರೇರಣೆಯಿಂದ ಧ್ವನ್ಯುತ್ಪಾದನೆ ಮಾಡಬಲ್ಲ ವಾಯುವನ್ನು ಉದ್ಭವಿಸುವಂತೆ ಮಾಡುತ್ತದೆ, ಧ್ವನ್ಯುತ್ಪಾದಕ ಶಕ್ತಿಯುಳ್ಳ ವಾಯುವು ಧ್ವನಿಯಂತ್ರದ ಸಹಾಯದಿಂದ ವಿಭಿನ್ನ ಧ್ವನಿಗಳ ಉಚ್ಚಾರಣೆಗೆ ಕಾರಣ ವಾಗುತ್ತದೆ. ಶ್ವಾಸ ವಾಯುವು ಮುಖವಿವರದಲ್ಲಿಯ ಬಾಯಿ ಮತ್ತು ನಾಸಿಕ ಮಾರ್ಗಗಳನ್ನು ಬಳಸಿಕೊಳ್ಳುತ್ತವೆ. ನಾಸಿಕ ಮಾರ್ಗದ ಮೂಲಕ ರಂಧ್ರಾಕೃತಿಯಲ್ಲಿ ವಾಯುವು ಸಂಚರಿಸಿ ನಾಸಿಕ ಧ್ವನಿಗಳು ಉತ್ಪನ್ನಗೊಳ್ಳುವಂತೆ ಮಾಡುತ್ತವೆ.

---

[62] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 10. ಶ್ಲೋಕ 6.

[63] .ಅದೇ, ಪುಟ ಸಂಖ್ಯೆ 11, ಶ್ಲೋಕ 7.

[64] ಅದೇ, ಪುಟ ಸಂಖ್ಯೆ 13, ಶ್ಲೋಕ 8.

[65] ಅದೇ, ಪುಟ ಸಂಖ್ಯೆ 14, ಶ್ಲೋಕ 9.

ಪಾಣಿನಿ ಉಲ್ಲೇಖಿಸಿದ ವರ್ಣಗಳ ಸ್ಥಾನೋತ್ಪತ್ತಿಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡುವುದು.

| ಸ್ವರ | ಅಂತಸ್ಥ | ಸ್ಪರ್ಶ | ಊಷ್ಮ | ಅಯೋಗವಾಹ |
|---|---|---|---|---|
| ಅ | – | ಕ ವರ್ಗ | ಹ | ಜಿಹ್ವಾಮೂಲೀಯ |
| ಇ | ಯ | ಚ ವರ್ಗ | ಶ | – |
| ಉ | ವ | ಪ ವರ್ಗ | – | ಉಪಧ್ಮಾನೀಯ |
| ಋ | ರ | ಟ ವರ್ಗ | ಷ | – |
| ಲೃ | ಲ | ತ ವರ್ಗ | ಸ | – |

ಆತ್ಮವು ಬುದ್ಧಿಯ ಸಹಾಯದಿಂದ ಮನಸ್ಸಿನಲ್ಲಿ ಇಚ್ಛೆ ಉಂಟಾಗುವಂತೆ ಮಾಡುತ್ತದೆ. ಮನಸ್ಸಿನಲ್ಲಿ ಹೀಗೆ ಮಾತನಾಡ ಬೇಕೆಂಬ ಪ್ರೇರಣೆಯ ಜೊತೆಗೆ ಕಾಯಾಗ್ನಿ ಉದ್ಭವವಾಗುವಂತೆ ಮಾಡುತ್ತದೆ. ಕಾಯಾಗ್ನಿ ಎಂದರೆ ಶಾರೀರಿಕ ಶಕ್ತಿ. ಅಲ್ಲಿ ವಾಯುವಿನಲ್ಲಿ ಪ್ರೇರಣೆ ಸಿಗುತ್ತದೆ. ಅಂದರೆ ಅಲ್ಲಿ ಕೃಶಾಗ್ನಿ ಪ್ರಾಣವಾಯುವಿಗೆ ಪ್ರೇರಣೆಯನ್ನು ನೀಡುತ್ತದೆ. ಆತ್ಮ ವೆಂದರೆ ಅಂತಃಕರಣ ಎಂಬ ನಂಬಿಕೆಯಿದೆ. ಆಚಾರ್ಯ ದೇವೇಂದ್ರ ನಾಥ ಶರ್ಮರಪ್ರಕಾರ ಕೇವಲ ಉಚ್ಛ್ವಾಸಗಳಿಂದ ಮಾತ್ರ ಧ್ವನಿ ಉತ್ಪಾದನೆ ಯಾಗುವುದಿಲ್ಲ, ನಿಃಶ್ವಾಸಗಳಿಂದಲೂ ಧ್ವನಿ ಉತ್ಪಾದನೆ ಯಾಗುತ್ತದೆ.

ಮಾರುತ ಅಂದರೆ ಪ್ರಾಣವಾಯು ಉರಃಸ್ಥಲದಲ್ಲಿ ಸಂಚಲನವನ್ನು ಉಂಟು ಮಾಡುತ್ತದೆ. ಅಲ್ಲಿ ಮಂದ್ರ ಸ್ವರ ಉತ್ಪನ್ನವಾಗುತ್ತದೆ. ಮುಂಜಾನೆಯಲ್ಲಿ ಸವನ ಕರ್ಮಗಳಿಗೆ ಸಾಧನಾರೂಪಿ ಯಾಗಿರುವ ಕಾರಣ ಗಾಯತ್ರೀ ಛಂದಸ್ ಎಂದು ಪ್ರಸಿದ್ಧವಾಗಿದೆ. ಸವನ ಕರ್ಮಗಳೆಂದರೆ ಯಜನ ಅಥವಾ ಸ್ನಾನ ಎನ್ನು ಅರ್ಥದಲ್ಲಿ ಅದು ಬಿಂಬಿತವಾಗಿದೆ. ಹೀಗೆ ಪ್ರಾಣ ವಾಯುವು ಕಂಠ ಪ್ರದೇಶವನ್ನು ಸಂಚರಣ ಗೊಳಿಸಿತ್ರಿಷ್ಟುಭ್ ಛಂದಸ್ಸನ್ನು ರಚಿಸಿ ಮಾಧ್ಯಂದಿನ 'ಸವನಕರ್ಮದ' ಉದ್ದೇಶದಿಂದ ಸಾಮಾನ್ಯವಾಗಿ ಮಧ್ಯಮಸ್ವರಗಳನ್ನು ಉತ್ಪಾದನೆ ಮಾಡುತ್ತದೆ.

## 4.4 ಧ್ವನಿ ಮತ್ತು ಅದರ ಪ್ರಸಾರ

ಧ್ವನಿ ಪ್ರಸಾರವೆಂದರೆ ಮಾನವ ಮಾತನಾಡುವಾಗ ಅಸಂಖ್ಯಾತ ಧ್ವನಿಗಳನ್ನು ಬಳಸುತ್ತಾನೆ. ಅವುಗಳು ಹೇಗೆ ಉತ್ಪತ್ತಿಯಾಗುತ್ತವೆ, ಪರಿಸರದಲ್ಲಿ ಹೇಗೆ ಪ್ರಸಾರಗೊಳ್ಳುತ್ತವೆ ಮತ್ತು ಇನ್ನೊಬ್ಬನ ಶ್ರವಣೇಂದ್ರಿಯಕ್ಕೆ ಹೇಗೆ ತಲುಪುತ್ತವೆ ಎಂಬುದನ್ನು ಒಟ್ಟಾರೆಯಾಗಿ ಧ್ವನಿಪ್ರಸಾರ ಎನ್ನುತ್ತೇವೆ. ಭಾಷೆಯಲ್ಲಿ ಧ್ವನಿ ಪ್ರಸಾರಗೊಳ್ಳುವ ಬಗೆಯನ್ನು ಐದು ಬಗೆಗಳಲ್ಲಿ ವರ್ಗೀಕರಿಸಬಹುದಾಗಿದೆ.

1. ಧ್ವನಿ ಉದ್ಗಮವಾಗುವ ಹಂತ.
2. ಮುಖವಿವರದಲ್ಲಿ ಸಾಗುವಹಂತ.
3. ಗಾಳಿಯಲ್ಲಿ ಅಥವಾ ಪರಿಸರದಲ್ಲಿ ಪ್ರಸಾರವಾಗುವ ಹಂತ.
4. ಬೇರೊಂದು ಶ್ರವಣೇಂದ್ರಿಯಕ್ಕೆ ತಲುಪುವ ಹಂತ.
5. ಶ್ರವಣೇಂದ್ರಿಯವು ಸಕ್ರಿಯವಾಗುವ ಹಂತ.

ಪ್ರತಿಯೊಂದು ಧ್ವನಿಹುಟ್ಟಲು ಒಂದು ಕಾರಣವಿದೆ. ಕಾರಣರಹಿತವಾಗಿ ನಾವು ಧ್ವನಿಯನ್ನುಹೊರಡಿಸಲು ಯಾರೂ ಮುಂದಾಗುವುದಿಲ್ಲ. ಯಾವ ಧ್ವನಿಯನ್ನು ಯಾವ ಪರಿಸರದಲ್ಲಿ ಉಚ್ಚಾರಮಾಡಬೇಕೆಂದು ತೀರ್ಮಾನಮಾಡುವ ಹಂತವೇ ಧ್ವನಿ ಉದ್ಗಮದ ಹಂತವಾಗಿದೆ. ಈ ಪ್ರಕ್ರಿಯೆ ನಡೆಯುವುದು ನಮ್ಮ ಅಂತಶ್ಶಕ್ತಿಯಿಂದ ಆದ್ದರಿಂದ ಇದು ದೃಶ್ಯಗೋಚರವೂ ಅಲ್ಲ. ಶ್ರವಣಾನುಭವವೂ ಅಲ್ಲ. ಧ್ವನಿ ಉದ್ಗಮದ ನಂತರ ಹವೆಯು ಮುಖವಿವರದಲ್ಲಿ ಪ್ರಸಾರವಾಗುವ ಹಂತ ಎರಡನೇ ಹಂತವಾಗಿದೆ. ಈ ಸಂದರ್ಭದಲ್ಲಿ ಮುಖವಿವರದಲ್ಲಿಯ ವಿವಿಧ ಸ್ಥಾನ ಮತ್ತು ಕರಣಗಳಿಗೆ ಅಥವಾ ಧ್ವನ್ಯುತ್ಪಾದನಾ ಸ್ಥಾನಗಳಿಗೆ ಹವೆಯು ಸ್ಪರ್ಶಿಸಿಕೊಂಡು ವಿವಿಧ ಬಗೆಯ ಧ್ವನಿಗಳು ಶ್ರವಣಾನುಭಕ್ಕೆ ಕಾರಣವಾಗುತ್ತದೆ. ಮುಖವಿವರದಿಂದ ಹೊರಬಂದ ಧ್ವನಿಯು ಮುಕ್ತವಾಗಿ ಪರಿಸರದಲ್ಲಿ ಸಂಚಾರಗೊಳ್ಳುವ ಹಂತವೇ ಧ್ವನಿಪ್ರಸಾರದ ಮೂರನೇ ಹಂತವಾಗಿದೆ. ಈ ಸಂದರ್ಭದಲ್ಲಿ ಪ್ರಕೃತಿಯಲ್ಲಿನ ವಿವಿಧ ತೆರನಾದ ಅಡೆತಡೆಗಳು, ವಿವಿಧ ತೆರನಾದ ಶಬ್ದಗಳು, ವಾಸ್ತವಿಕಸಂಗತಿಗಳಿಗೆ ಒಳಗಾಗುತ್ತದೆ. ಧ್ವನಿ ಉಗಮದ ಉದ್ದೇಶ ವಿಚಾರವಿನಿಮಯ ಅಥವಾ ಬಿತ್ತರಿಸುವಿಕೆಯಾದ ಕಾರಣ ಇನ್ನೊಂದು ಶ್ರವಣೇಂದ್ರಿಯವನ್ನು ಸಂಪರ್ಕಿಸಬೇಕಾಗುತ್ತದೆ. ಇದು ನಾಲ್ಕನೆಯ ಹಂತವಾಗಿದೆ.

ಅನಂತರ ಆ ವ್ಯಕ್ತಿ ಆಧ್ವನಿಯನ್ನು ತನ್ನ ಅಂತಶ್ಶಕ್ತಿಮೂಲಕ ಅರ್ಥಮಾಡಿಕೊಳ್ಳುವ ಹಂತ ಧ್ವನಿ ಪ್ರಸಾರದ ಐದನೇ ಹಂತವಾಗಿದೆ. ಹೀಗೆ ಧ್ವನಿಪ್ರಸಾರವು ಈ ಮೇಲಿನ ಐದುಹಂತಗಳನ್ನು ಒಳಗೊಂಡಿದೆ.

**4.5 ಸರೂಪ–ವಿರೂಪ–ಅರೂಪ ಸಂಕೇತಗಳು.**

ಭಾಷೆಯು ಮೂರ್ತಸ್ವರೂಪ ಪಡೆಯುವುದು ಧ್ವನಿಗಳ ಮೂಲಕ. ಧ್ವನಿಗಳು ಸಂಕೇತಗಳ ಮೂಲಕ ವ್ಯಕ್ತವಾಗುತ್ತವೆ. ಸಂಕೇತಗಳೆಂದರೆ ಸೂಚಕಗಳು ಅಥವಾ ಅರ್ಥಬೋಧೆಯುಂಟುಮಾಡುವಂತವುಗಳಾಗಿವೆ. ಇವು ಮೂರುತೆರನಾಗಿರುತ್ತವೆ. ಅವುಗಳೆಂದರೆ ಸರೂಪಸಂಕೇತಗಳು, ವಿರೂಪಸಂಕೇತಗಳು ಮತ್ತು ಅರೂಪಸಂಕೇತಗಳಾಗಿವೆ. ಸರೂಪ ಮತ್ತು ವಿರೂಪ ಸಂಕೇತಗಳು ಗ್ರಾಂಥಿಕ ಮತ್ತು ಮೌಖಿಕ ಎರಡೂ ರೂಪದಲ್ಲಿ ಬಳಕೆಯಾದರೆ ಅರೂಪ ಸಂಕೇತಗಳು ಮೌಖಿಕಭಾಷೆಗೆ ಮಾತ್ರ ಸೀಮಿತವಾದವುಗಳಾಗಿವೆ.

**ಸರೂಪ ಸಂಕೇತಗಳು**

ಸಂಕೇತಗಳು ಶಾಸ್ತ್ರೀಯ ಚೌಕಟ್ಟಿನಡಿಯಲ್ಲಿ ರಚಿಸಲ್ಪಟ್ಟು ಸಮಾಜದ ವ್ಯವಹಾರದಲ್ಲಿ ರೂಢಿಯಾದ/ ರೂಢಿಗತವಾಗುತ್ತಿದ್ದರೆ ಅಂತಹ ಸಂಕೇತಗಳು ಸರೂಪ ಸಂಕೇತಗಳು. ಇವು ದೃಗ್ಗೋಚರ ಸಂಕೇತಗಳಾಗಿವೆ. ಇವುಗಳು ಉಳಿದ ಸಂಕೇತಗಳಾದ ವಿರೂಪ ಮತ್ತು ಅರೂಪ ಸಂಕೇತಗಳಿಗಿಂತ ಹೆಚ್ಚು ಮೌಲ್ಯಯುತವಾದವುಗಳಾಗಿವೆ. ಭಾಷೆಯಲ್ಲಿ ಹೇರಳವಾಗಿ ರೂಢಿಗತವಾಗಿರುವುದು ಸರೂಪ ಸಂಕೇತಗಳು. ಉದಾಹರಣೆಗೆ ವರ್ಣಮಾಲೆಯ ವಿವಿಧವರ್ಣಗಳು, ವಿವಿಧ ಕಲಾಕೃತಿಗಳು ಇತ್ಯಾದಿ.

ವಿರೂಪ ಸಂಕೇತಗಳು

ಕೆಲವು ಧ್ವನಿಗಳನ್ನು ವ್ಯಕ್ತಪಡಿಸುವಾಗ ವೈವಿಧ್ಯಮಯವಾದ ಮತ್ತು ಚಿತ್ರವಿಚಿತ್ರವಾದ ಸಂಕೇತಗಳನ್ನು ನೀಡುತ್ತೇವೆ. ಅದು ರೂಪವಿದ್ದರೂ ಶಾಸ್ತ್ರೀಯ ರೂಪವನ್ನು ಮತ್ತು ಸಮಾಜ ಒಪ್ಪಿರುವರೂಪ ಹೊಂದಿರುವುದಿಲ್ಲ. ಆದ್ದರಿಂದ ಇವುಗಳನ್ನು ವಿರೂಪ ಸಂಕೇತಗಳೆಂದು ಕರೆಯಬಹುದಾಗಿದೆ. ಉದಾಹರಣೆಗೆ ವರ್ಣಮಾಲೆಯು ಸರೂಪ

ಸಂಕೇಗಳಾದರೆ ವಿವಿಧಬಗೆಯ ನಮೂನೆಗಳು, ಸಹಿಗಳು, ಕ್ರೀಡಾ ಚಟುವಟಿಕೆಗಳಲ್ಲಿ ಬಳಸುವ ಸಂಕೇತಗಳು ವಿರೂಪ ಸಂಕೇತಗಳಾಗಿವೆ. ಇನ್ನೊಂದು ದೃಷ್ಟಿಯಿಂದ ಚಿಂತಿಸಿದರೆ ಸರೂಪ ಸಂಕೇತಗಳೇ ವಿರೂಪ ಸಂಕೇತಗಳಿಗೆ ಕಾರಣವಾಗುತ್ತವೆ. ಉದಾಹರಣೆಗೆ ನಮ್ಮ ಹೆಸರುಗಳು ಸರೂಪ ಸಂಕೇತಗಳು ಅದರಿಂದ ನಾವು ಕಲ್ಪಿಸಿಕೊಂಡು ಮಾಡುವ 'ಸಹಿ' ವಿರೂಪ ಸಂಕೇತವಾಗುತ್ತದೆ.

ಅರೂಪ ಸಂಕೇತಗಳು

ಭಾಷೆಯಲ್ಲಿ ನಾವು ಕೆಲವು ಸಂದರ್ಭದಲ್ಲಿ ಅರೂಪ ಸಂಕೇತಗಳನ್ನು ಬಳಸುತ್ತೇವೆ. ಇವು ಮೌಖಿಕ ಭಾಷೆಗೆ ಮತ್ರ ಸೀಮಿತವಾಗಿದೆ. ಅರೂಪ ಎನ್ನುವ ಪದವೇ ಹೇಳುವಂತೆ ಇವು ರೂಪರಹಿತವಾದ ಸಂಕೇತಗಳಾಗಿವೆ. ಉದಾಹರಣೆಗೆ ಸೀಟಿ ಊದುವುದು, ವಾದ್ಯಬಾರಿಸುವುದು, ವಿವಿಧ ಸಂಗಿತದ ಉಪಕರಣಗಳನ್ನು ನುಡಿಸುವುದು, ಪ್ರಾಣಿಗಳು ಕೂಗುವುದು ಇತ್ಯಾದಿ. ಅರೂಪ ಸಂಕೇತಗಳು ನೀಡುವ ವಿಚಾರಗಳನ್ನು ಸರೂಪ ಸಂಕೇತಗಳ ಮೂಲಕ ವ್ಯಕ್ತಪಡಿಸಬಹುದಾಗಿದೆ. ಉದಾಹರಣೆಗೆ "ಆಕಳು ಕೂಗುವುದನ್ನು ಕೇಳಿಸಿಕೊಂಡು" ನಾವು ಅದನ್ನು ಇನ್ನೊಬ್ಬರಿಗೆ ಹೇಳುವಾಗ "ಆಕಳು ಕೂಗುತ್ತದೆ" ಎನ್ನುತ್ತೇವೆ. ಇತ್ಯಾದಿ.

## 4.6 ಧ್ವನಿಗುಣ

ಭಾಷೆಯ ಆಧಾರಧ್ವನಿ. ಧ್ವನಿಗಳಿಂದ ಸ್ವರ ಮತ್ತು ವ್ಯಂಜನದ ಆಶಯಗಳು ಹುಟ್ಟುತ್ತವೆ. ಆದರೆ ಭಾಷೆಯು ಕೇವಲ ಸ್ವರ ಮತ್ತು ವ್ಯಂಜನದ ಕ್ರಿಯೆಗೆ ಮಾತ್ರ ಸೀಮಿತವಾಗಿಲ್ಲ. ಇವುಗಳ ಜೊತೆಗೆ ಮಾತ್ರೆಗಳು, ಶ್ರುತಿ, ಬಲಾಘಾತ ಇತ್ಯಾದಿ ಅಂಶಗಳು ಭಾಷೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಇವುಗಳಲ್ಲಿ ಬಲಾಘಾತ, ಶ್ರುತಿ ಮತ್ತು ಮಾತ್ರೆಗಳನ್ನು ಬಿಟ್ಟರೆ ಭಾಷೆಗೆ ಅಸ್ತಿತ್ವವೇ ಇರುವುದಿಲ್ಲ. ಅವು ಸ್ವರ ವ್ಯಂಜನಗಳನ್ನು ಆಧರಿಸಿರುತ್ತವೆ. ಈ ಕಾರಣದಿಂದ ಸ್ವರ ಮತ್ತು ವ್ಯಂಜನಗಳ ನಡುವೆ ಅಂತರ ಅಥವಾ ವ್ಯತ್ಯಾಸ ಕಂಡುಬರುತ್ತದೆ. ಆದ್ದರಿಂದ ಇವುಗಳನ್ನು ಧ್ವನಿಗುಣ ಎಂದು ಕರೆಯುತ್ತಾರೆ. ಶ್ರುತಿ ಮತ್ತು ಬಲಾಘಾತವನ್ನು ಒಂದೇ ಹೆಸರಿನಿಂದ ಆಘಾತ ಎಂದು ಕರೆಯಬಹುದು. ಧ್ವನಿಗುಣದಲ್ಲಿ ಅಂತರ್ಗತವಾಗಿರುವುದು ಮುಖ್ಯವಾಗಿ ಎರಡು ಮಾತ್ರ ಅವೆಂದರೆ ಮಾತ್ರೆ ಮತ್ತು ಆಘಾತ . ಧ್ವನಿ ಗುಣವನ್ನು ಧ್ವನಿಯ ಲಕ್ಷಣ ಎಂದೂ ಕರೆಯಬಹುದು.

### 4.7 ಧ್ವನಿ ಗ್ರಾಮ

ಸೂಕ್ಷ್ಮವಾಗಿ ಭಾಷಾ ವೈಜ್ಞಾನಿಕದೃಷ್ಟಿಯಿಂದ ಗಮನಿಸಿದಾಗ ಒಬ್ಬ ವ್ಯಕ್ತಿಯು ಒಂದು ಧ್ವನಿಯನ್ನು ಒಂದಕ್ಕಿಂತ ಹೆಚ್ಚುಬಾರಿ ಪ್ರಯೋಗಿಸಿದರೆ ಆ ಪ್ರತಿಯೊಂದು ಸಂದರ್ಭದಲ್ಲಿಯೂ ವಿಭಿನ್ನತೆರನಾದ ಉಚ್ಚಾರಣೆಯನ್ನು ಮಾಡಲು ಸಾಧ್ಯವಿಲ್ಲ. ಉದಾಹರಣೆಗೆ ರಾಮ ಎನ್ನುವ ಶಬ್ದವನ್ನು ಸುಮಾರು ಹತ್ತು ಬಾರಿ ಉಚ್ಚರಿಸುತ್ತೇವೆಂದು ಇಟ್ಟುಕೊಳ್ಳೋಣ ಪ್ರತಿಯೊಂದು ಉಚ್ಚಾರಣೆಯಲ್ಲಿ ಪ್ರತಿಯೊಂದು ಧ್ವನಿಯ ಉಚ್ಚಾರಣೆ ಭಿನ್ನವಾಗಿರುತ್ತದೆ ಒಂದರಂತೆ ಇನ್ನೊಂದು ಇರಲು ಸಾಧ್ಯವಿಲ್ಲ. ಇದು ಭಾಷಾಸೂಕ್ಷ್ಮತೆಯಾಗಿದೆ. ಇದನ್ನು ನಾವು ಸಾಮಾನ್ಯವಾಗಿ ಗಮನಿಸುವುದಿಲ್ಲ. ಅವುಗಳಿಗೆ ಮಹತ್ತ್ವವನ್ನೂ ನೀಡುವುದಿಲ್ಲ. ಆದರೆ ಭಾಷಾಧ್ವನಿಶಾಸ್ತ್ರವು ಇಂತಹ ಒಂದು ಶಬ್ದವನ್ನು ಗಂಭೀರವಾಗಿ ಲಕ್ಷಿಸುತ್ತದೆ. ಉದಾಹರಣೆಯನ್ನು ಗಮನಿಸೋಣ. "ಗಾಣಗಾಪುರದ ಗೌರೀಶನು ಗಂಗಾನದಿಯ ನೀರನಲ್ಲಿ ಗಾಳಿ,ಗೂಳಿ,ಗಿಳಿ,ಗೂರ್ಖರನ್ನು ಗಮನಿಸದೆ" ಸ್ನಾನಮಾಡಿದನು. ಈ ಒಂದು ವಾಕ್ಯದಲ್ಲಿ 10 'ಗ್' ಗಳು ಇವೆ. ಸಾಮಾನ್ಯ ದೃಷ್ಟಿಯಲ್ಲಿ ಈ ಎಲ್ಲಾ 'ಗ್' ಗಳು ಒಂದೇ ಎಂದು ಅರ್ಥೈಸುತ್ತಾರೆ. ಆದರೆ ಭಾಷಾ ವೈಜ್ಞಾನಿಕ ದೃಷ್ಟಿಯಿಂದ ನೋಡಿದಾಗ 10 ವಿಭಿನ್ನತೆರನಾದ ಉಚ್ಚಾರಣೆಯನ್ನು ಹೊಂದಿದೆ. ಮೊದಲ 'ಗ್' ಅನುನಾಸಿಕದ ಹಿಂದೆ 'ಅಘೋಷ' ಧ್ವನಿಯಾಗಿಯೂ, ಎರಡನೇ 'ಗ್' ದ್ವನಿಯು ಅಘೋಷ ಧ್ವನಿಯಾಗಿಯೂ, ಮೂರನೆಯ 'ಗೌ' ಎನ್ನುವಲ್ಲಿ ಹೆಚ್ಚು ಒತ್ತಡ ಪೂರ್ವಕವಾಗಯೂ, ನಾಲ್ಕನೆಯ 'ಗ್' ಧ್ವನಿಯು ಅನುಸ್ವಾರ ಸಹತವಾದ ಧ್ವನಿಯಾಗಿಯೂ, ಐದನೆಯದಾಗಿ ಬಳಕೆಯಾದ ಗ್ ಧ್ವನಿಯು ಸ್ಫೋಟಹೀನ ಅಘೋಷ ಧ್ವನಿಯಾಗಿ ಬಳಕೆಯಾಗಿದೆ. ಹೀಗೆ ಇಲ್ಲಿ ಬಳಕೆಯಾದ 10 ರೀತಿಯ 'ಗ್' ಗಳು 10 ವಿಭಿನ್ನತೆರನಾದ ಉಚ್ಚಾರಣೆಯನ್ನು ಹೊಂದಿವೆ. 10 ವಿಭಿನ್ನತೆರನಾದ ಉಚ್ಚಾರಣೆಯನ್ನು ಪ್ರಯತ್ನ ಮತ್ತು ಸ್ಥಾನಗಳ ದೃಷ್ಟಿಯಿಂದ ಗುರುತಿಸ ಬಹುದಾಗಿದೆ. ಆದರೆ ಈ ಎಲ್ಲಾ ಧ್ವನಿಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಧ್ವನಿ ಅಥವಾ ಧ್ವನಿಮಾ ಸ್ಥಾನವನ್ನು ಕಲ್ಪಿಸಿಕೊಡುವುದು ಅಸಾಧ್ಯವಾದ ವಿಚಾರವಾಗಿದೆ. ಇವುಗಳನ್ನು ಗ1,ಗ2,ಗ3,ಗ4,ಗ5,ಗ6,ಗ7,ಗ8,ಗ9,ಗ10. ಇತ್ಯಾದಿಯಾಗಿ ಹೇಳಬಹುದಾಗಿದೆ, ಭಾಷೆ ಯಲ್ಲಿ ಈ ರೀತಿಯ ಒಂದುಧ್ವನಿಯಲ್ಲಿ ಅಂತರ್ಗತವಾಗಿ ವಿಭಿನ್ನ ತೆರನಾದ ಧ್ವನ್ಯುಚ್ಚಾರಣೆಯನ್ನು ಗುರುತಿಸುವುದನ್ನು ಸಂಧ್ವನಿ

ಎಂದು ಕರೆಯುತ್ತರೆ. ಇದು ಕೇವಲ ಒಂದು ಭಾಷೆಗೆ ಮಾತ್ರ ಸೀಮಿತವಾಗಿಲ್ಲ. ಎಲ್ಲ ಭಾಷೆಗಳಲ್ಲಿಯೂ ಇಂತಹ ರಚನೆಗಳನ್ನು ಕಾಣಬಹುದಾಗಿದೆ. ಇವುಗಳನ್ನು ಸಾಮೂಹಿಕ ರೂಪದಿಂದ ಸ್ಪಷ್ಟೀಕರಣಕ್ಕೊಸ್ಕರ ಧ್ವನಿಗ್ರಾಮ ಎನ್ನುವುದು ರೂಢಿಯಾಗಿದೆ. ಇನ್ನಷ್ಟು ಸ್ಪಷ್ಟೀಕರಿಸಿ ಹೇಳಬೇಕೆಂದರೆ ಮೇಲೆ ನಿರೂಪಿಸಲಾದ 10 ರೀತಿಯ 'ಗ' ಧ್ವನಿಯ ವಿಭಿನ್ನ ರೂಪಗಳನ್ನು ಸಂವ್ಧ್ವನಿಗಳೆಂದು ಕರೆಯುತ್ತೆವೆ. 10 'ಗ್' ಧ್ವನಿಗಳಿಗೆ ಒಂದು ಪ್ರಧಾನ ಧ್ವನಿ ಗ್ ವನ್ನು ಗುರುತಿಸಿ ಅದಕ್ಕೆ ಧ್ವನಿಗ್ರಾಮ ಎಮದು ಕರೆಯುತ್ತಾರೆ. ಪರಿವಾರ ಎನ್ನುವಪದದ ಅರ್ಥ 'ಉತ್ತಮ' ಎನ್ನುವುದು ನನ್ನ ಅಭಿಪ್ರಾಯವಾಗಿದೆ ಗ್ ಒಂದು ಪರಿವಾರ. ಗ ಪರಿವಾರದಲ್ಲಿ 10 ವಿಭಿನ್ನ ತೆರನಾದ ಉಚ್ಚಾರಗಳಿವೆ ಎಂದರ್ಥ. 10 ವಿಭಿನ್ನ ತೆರನಾದ ಉಚ್ಚಾರಣೆಯಲ್ಲ ಇನ್ನೂ ಅನೇಕ ಇರಬಹುದು. ಸಾಂದರ್ಭಿಕವಾಗಿ ಒಂದೊಂದು ಉದಾಹರಣೆ ಮಾತ್ರ. ಹೀಗೆ ಧ್ವನಿಗ್ರಾಮ ಮತ್ತು ಸಂವ್ಧ್ವನಿಗಳು ಪರಸ್ಪರ ಸಂಬಂಧ ಹೊಂದಿವೆ. ಧ್ವನಿಗ್ರಾಮ ವನ್ನು ಧ್ವನಿಶ್ರೇಣಿ ಎಂದೂ ಕರೆಯುತ್ತಾರೆ. ಆದ್ದರಿಂದ ಧ್ವನಿಗ್ರಾಮವೆಂದರೆ ಸಮೂಹದ ಸಾಮೂಹಿಕ ನಾಮವಾಗಿದೆ.

ಧ್ವನಿಗ್ರಾಮ ಮತ್ತು ಸಂವ್ಧ್ವನಿಗಳ ಸಂಬಂಧದಿಂದ ಇನ್ನು ಮೂರು ಲಕ್ಷಣಗಳನ್ನು ಉಲ್ಲೇಖಿಸಬಹುದಾಗಿದೆ. ಒಂದು ಧ್ವನಿಗ್ರಾಮಕ್ಕೆ ಸಾಂದರ್ಭಿಕವಾಗಿ ಸಂವ್‌ಧ್ವನಿಗಳು ಇರ ಬಹುದಾದರೂ ಅವು ಎಲ್ಲಾಭಾಷೆಗಳಲ್ಲೂ ಒಂದೇರೀತಿಯಾಗಿರುವುದಿಲ್ಲ. ಭಾಷೆಯಿಂದ ಭಾಷೆಗೆ ವ್ಯತ್ಯಾಸ ಹೊಂದಿರುತ್ತವೆ, ಒಂದು ಧ್ವನಿಗ್ರಾಮಕ್ಕೆ ನಿಶ್ಚಿತವಾಗಿ ಇಷ್ಟೇ ಸಂವ್ಧ್ವನಿಗಳಿರಬೇಕೆಂಬ ನಿಯಮವಿಲ್ಲ. ಅಸಂಖ್ಯಾತವಿರಬಹುದು. ಆದ್ದರಿಂದ ಧ್ವನಿಗ್ರಾಮ ಮತ್ತು ಸಂಧ್ವನಿಗಳ ಸಂಬಂಧ ಭಾಷೆಯಿಂದ ಭಾಷೆ ಭಿನ್ನ ವಾಗಿರುತ್ತವೆ.

### 4.8 ಧ್ವನಿ ಗ್ರಾಮ ವಿಜ್ಞಾನ

ಧ್ವನಿವಿಜ್ಞಾನದ ಒಂದು ಶಾಖೆಯಾಗಿದೆ. ಇಲ್ಲಿ ಧ್ವನಿಗ್ರಾಮದ ಕುರಿತು ಅಧ್ಯಯನ ನಡೆಸಲಾಗುತ್ತದೆ. ಯಾವುದೇ ಒಂದು ಭಾಷೆಯ ಧ್ವನಿಗ್ರಾಮದ ಆಧಾರದ ಮೇಲೆ ಆ ಭಾಷೆಯ ಚಿತ್ರಣ ನಮಗಾಗುತ್ತದೆ. ವಾಸ್ತವದಲ್ಲಿ ಧ್ವನಿಗ್ರಾಮ ಎಂಬುದು ಯಾವುದೋ ಹೊಸಶಬ್ದವಲ್ಲ. ಪುರಾಣಕಾಲದಲ್ಲಿಯೇ ಇದರ ಉಲ್ಲೆಖಿಸಿಗುತ್ತದೆ. ಅಲ್ಫಾಬಿಟಿಕ್ ರೈಟಿಂಗ ಎಂದು ಕರೆಯುತ್ತಾರೆ. ಇವುಗಳ ಪ್ರಾರಂಭವು 12 ನೇ ಶತಮಾನದಿಂದ ಆರಂಭವಾಗುವ ಸಾಧ್ಯತೆಯಿದೆ. 'ಫೋನೀಮ್' ಎಂಬ ಶಬ್ದ ತೀರಾಪ್ರಾಚೀನ ಶಬ್ದವಲ್ಲ ಇತ್ತೀಚಿನ

ಬಳಕೆಯಾಗಿದೆ. ಇದನ್ನು ಪ್ರಸ್ತಾಪಿಸಿದವನು ಹ್ಯೆವೆಟ್ ಎನ್ನು ಪಾಶ್ಚಾತ್ಯಭಾಷಾ ವಿಜ್ಞಾನಿಯಾಗಿದ್ದಾನೆ. ಈತನು ಭಾಷಾಧ್ವನಿಯ ಅರ್ಥ ಕುರಿತು 1876 ರಲ್ಲಿ ಇದರ ಉಲ್ಲೇಖ ಮಾಡಿದ್ದಾನೆ. ಆದರೆ ಇಂದು ಬಳಸುತ್ತಿರುವ ಅರ್ಥದಲ್ಲಿ 1879ರ ಸುಮಾರಿಗೆ ಕುರ್ತೇಜಸ್ಕಿ (ಇಡಿಣದಜಕಿಇು) ತನ್ನ ಲೇಖನದಲ್ಲಿ ಹೇಳಿದ್ದಾನೆ. ನಂತರ ಸ್ವೀಟ್ ಮತ್ತು ಪಾಲಪಾಸಿ ಎನ್ನುವ ಪಾಶಿಮಾತ್ಯ ವಿದ್ವಾಂಸರು ಈ ವಿಚಾರವಾಗಿ ಆಳವಾಗಿ ಅಧ್ಯಯನ ನಡೆಸಿ ಸ್ಥೂಲ ಲೇಖನ ಮತ್ತು ಸೂಕ್ಷ್ಮ ಲೇಖನ ಎಂಬ ಸಿದ್ಧಾಂತಗಳನ್ನು ಮಂಡಿಸಿ ಸ್ಪಷ್ಟಪಡಿಸಿದ್ದಾರೆ. 20 ನೇ ಶತಮಾನದಲ್ಲಿ ಈ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸಿದ ಪ್ರಮುಖ ವ್ಯಕ್ತಿ ಸಸೂರ ಎಂಬ ಅಮೇರಿಕಾದ ಭಾಷಾವಿಜ್ಞಾನಿ. ಸುಮಾರು 1921 ರ ಆಸುಪಾಸಿನಲ್ಲಿ ಈತ ಕಾರ್ಯ ನಿರ್ವಹಿಸಿದ್ದಾನೆ. ನಂತರ ಧ್ವನಿಗ್ರಾಮವಿಜ್ಞಾನ ವಿಶ್ವದ ನಾಲ್ಕು ಪ್ರಮುಖ ಕೇಂದ್ರಗಳಲ್ಲಿ ವಿಕಸಿತವಾಯಿತು. ಪ್ರಾಗ್ 1928, ಲಂಡನ್ 1929, ಅಮೇರಿಕ ಮತ್ತು ಕೋಪನ್ ಹೇಗನ್ 1935 ರಲ್ಲಿ ವಿಕಸಿತವಾಯಿತು. ಬ್ಲೂಮ ಫೀಲ್ಡ್, ಡೇನಿಯಲ್ ಜೋನ್ಸ್,ರೋಮಿನ ಯಾಕೋಬಸನ್, ಪೈಕ್ ಇತ್ಯಾದಿಗಳು ಪ್ರಮುಖ ಕಾರ್ಯ ನಿರ್ವಹಿಸಿದರು. ಪೈಕ್ ನು ಈ ವಿಷಯದಲ್ಲಿ 'ಫೋನಿಮಿಕ್ಸ್' ಎಂಬ ಹೆಸರಿನ ಸ್ವತಂತ್ರಪುಸ್ತಕವನ್ನು ಬರೆದಿದ್ದಾನೆ. ಈ ಪುಸ್ತಕದ ಪ್ರಮುಖ ವಿಶೇಷವೆಂದರೆ ಪುಸ್ತಕದಲ್ಲಿ ಅಭ್ಯಾಸಕ್ಕೆ ಪ್ರತ್ಯೇಕ ವಾದ ಪುಟಗಳನ್ನು ನೀಡಿರುವುದು.

ಧ್ವನಿಗ್ರಾಮದ ವಿಜ್ಞಾನದ ಆಧಾರದ ಮೇಲೆ ಧ್ವನಿವಿಜ್ಞಾನ ನಿಂತಿದೆ. ಧ್ವನಿವಿಜ್ಞಾನಕ್ಕೆ ಬೇಕಾದ ಸಾಮಗ್ರಿಗಳನ್ನು ಮತ್ತು ಆವಶ್ಯಕ ಸಂಪನ್ಮೂಲಗಳನ್ನು ನೀಡುವುದರ ಜೊತೆಗೆ ಧ್ವನಿ ವಿಶ್ಲೇಷಣೆಕಾರ್ಯದಲ್ಲಿ ಸಮರ್ಪಕ ಆಧಾರಗಳನ್ನು ನೀಡುತ್ತದೆ. ಆದ್ದರಿಂದ ಧ್ವನಿ ವಿಜ್ಞಾನದ ಅಧ್ಯಯನದಲ್ಲಿ ಧ್ವನಿಗ್ರಾಮದ ಪೂರ್ಣಜ್ಞಾನ ಅತ್ಯಂತ ಅವಶ್ಯವಾದುದಾಗಿದೆ. ಇದರ ಅಧ್ಯಯನದಲ್ಲಿ ಮೊತ್ತಮೊದಲಿಗೆ ಕಾಣುವಂತದ್ದು ಒಂದು ಭಾಷೆಯಲ್ಲಿ ಬಳಕೆಯಲ್ಲಿರುವ ಶಬ್ದಗಳನ್ನು ಒಂದು ಕಡೆ ಸಂಗ್ರಹಿಸುವಂಥಾದ್ದು. ಅಲ್ಲಿ ಎರಡು ರೀತಿಯ ಪದ್ಧತಿಗಳನ್ನು ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಮೃತ ಭಾಷೆಗಳ ಶಬ್ದ ಸಾಮಗ್ರಿಗಳನ್ನು ಸಂಗ್ರಹಿಸುವುದು ಮತ್ತು ಜೀವಂತ ಭಾಷೆಗಳ ಶಬ್ದ ಸಾಮಗ್ರಿಯನ್ನು ಸಂಗ್ರಹಿಸುವುದು ಹೇಗೆ ಎಂಬುದು ನಮ್ಮನ್ನು ಕಾಡುವಪ್ರಶ್ನೆ. ಇದಕ್ಕೆ ಉತ್ತರರೂಪವಾಗಿ ಮೃತಭಾಷೆಗಳ ಶಬ್ದಗಳನ್ನು ಲಿಖಿತ ಗ್ರಂಥಗಳ ಆಧಾರದ ಮೇಲೆ ಅವುಗಳಲ್ಲಿ ಬಳಕೆಯಾದ ಶಬ್ದಗಳಮೂಲಕ ಸಂಗ್ರಹಿಸಲಾಗುತ್ತದೆ. ಅದೇರೀತಿ

ಜೀವಂತಭಾಷೆಯ ಶಬ್ದಗಳನ್ನು ಮೌಖಿಕವಾಗಿ ನಾವು ಬಳಸುತ್ತಿರುವ ಶಬ್ದಗಳನ್ನು ಆಧರಿಸಿ ಸಂಗ್ರಹಿಸಲಾಗುತ್ತದೆ. ಅವುಗಳಿಗೆ 'ಸೂಚಕ' ಎಂಬ ಹೆಸರಿನ ಪ್ರಯೋಗ ಕಂಡುಬರುತ್ತದೆ.

**4.9 ಧ್ವನಿ ನಿಯಮ**

ಧ್ವನಿಯ ಏಕರೂಪತೆ, ಬಹುರೂಪತೆ, ಪರಿವರ್ತನೆ ಇತ್ಯಾದಿಗಳ ಬಗ್ಗೆ ಕಾರಣ ಕಂಡುಕೊಳ್ಳುವಿಕೆಯೆ ಧ್ವನಿನಿಯಮವಾಗಿದೆ. ಧ್ವನಿಗಳು ಏಕರೂಪತೆ, ಬಹುರೂಪತೆಗೆ ಯಾಕೆ ಪರಿವರ್ತನೆಗೊಳ್ಳುತ್ತವೆ. ಅವುಗಳಿಗೆ ಯಾವುದು ಮಾನದಂಡವಾಗಿದೆ ಇತ್ಯಾದಿಗಳನ್ನು ಕಂಡುಕೊಳ್ಳುವ ಪ್ರಯತ್ನವಾಗಿದೆ. ಇವುಗಳನ್ನು ಪ್ರಾಕೃತಿಕ ನಿಯಮ ಮತ್ತು ಭಾಷಾ ಸಂಬಂಧಿಕ ನಿಯಮ ಎಂದು ವಿಂಗಡಿಸಲಾಗುತ್ತದೆ. ಪ್ರಾಕೃತಿಕ ನಿಯಮ ದಲ್ಲಿ ವಿಶೇಷವಾದ ಔಚಿತ್ಯವೇನೂ ಇಲ್ಲ. 4+4= 8 ಎಂಬ ವಿಷಯ ಭೂತ ವರ್ತಮಾನ ಭವಿಷ್ಯ ಎಲ್ಲಕಾಲಗಳಲ್ಲಿಯೂ ಸತ್ಯವಾದ ವಿಷಯ. ಆದರೆ ಭಾಷೆಯ ವಿಚಾರಗಳಿಗೆ ಬಂದಾಗ ಇದು ಎಲ್ಲ ಕಾಲದಲ್ಲಿಯೂ ಏಕರೂಪ ಎಂದು ಹೇಳಲಾಗುವುದಿಲ್ಲ. ಪ್ರಾಚೀನ ಭಾರತೀಯ ಆರ್ಯ ಭಾಷೆಯಾದ ಸಂಸ್ಕೃತದಲ್ಲಿ ಪ್ರಾಚೀನ ಕಾಲದಿಂದ ಮಧ್ಯಕಾಲದವರೆಗೆ ಅನೇಕ ಪರಿವರ್ತನೆಗಳಾದುದನ್ನು ಗಮನಿಸಬಹುದು. ಅದೇರೀತಿ ಕನ್ನಡಭಾಷೆಯಲ್ಲಿ ಪ್ರಾಚೀನ ಕಾಲದಿಂದ ಮಧ್ಯಕಾಲದವರೆಗೆ ಅನೇಕ ಪರಿವರ್ತನೆಗಳಾದುದನ್ನು ಗಮನಿಸಬಹುದು. ಆದರೆ ಮಧ್ಯ ಕಾಲದ ನಂತರ ಭಾಷಾಪರಿವರ್ತನೆ ಅಷ್ಟಾಗಿ ಕಂಡು ಬುರುವುದಿಲ್ಲ. ಇದನ್ನು ಭಾಷಾ ಸಂಬಂಧಿನಿಯಮ ಎಂದು ಕರೆಯುತ್ತಾರೆ. ಪ್ರಾಕೃತಿಕ ನಿಯಮ ಏಕರೂಪವಾಗಿದ್ದರೆ ಭಾಷಾ ಸಂಬಂಧಿನಿಯಮವು ನಿರಂತರ ಪರಿವರ್ತನಶೀಲ ಗುಣವನ್ನು ಹೊಂದಿದೆ. ಪ್ರಾಕೃತಿಕ ನಿಯಮವು ಎಲ್ಲಕಡೆ ಏಕಸ್ವರೂಪ ಮತ್ತು ಪರಿಣಾಮ ಬಿರುವುದಾದರೆ ಧ್ವನಿನಿಯಮವು ಏಕಸ್ವರೂಪವಾಗಿರಲು ಅಸಾಧ್ಯವಾಗಿದೆ. ಪ್ರಾಕೃತಿಕ ನಿಯಮವು ಸೀಮಿತ ಗಡಿರೇಖೆಯನ್ನು ಹೊಂದಿದ್ದರೆ ಭಾಷಾಸಂಬಂಧಿ ನಿಯಮವು ನಿಶ್ಚಿತ ಗಡಿರೇಖೆಯನ್ನು ಹೊಂದಿಲ್ಲ. ಧ್ವನಿನಿಯಮವನ್ನು ರೂಪಿಸಿದವರಲ್ಲಿ ಗ್ರಿಮ್ ನು ಅಗ್ರಗಣ್ಯನಾಗಿದ್ದಾನೆ. ಆತನ ನಿಯಮದ ಸ್ಥೂಲಪರಿಚಯ ಈ ಕೆಳಗಿನಂತಿದೆ.

## ಗ್ರಿಮ್‌ನ ನಿಯಮ

ಈ ನಿಯಮದ ಕುರಿತು ಪ್ರಸ್ತಾಪಿಸಿದವರಲ್ಲಿ ಪ್ರಮುಖವಾಗಿ ಎರಡು ವ್ಯಕ್ತಿಗಳನ್ನು ಹೆಸರಿಸಬಹುದಾಗಿದೆ. ಇಹರೆ ಮತ್ತು ಡ್ಯೆನಿಶ್ ವಿದ್ವಾಂಸ ರೈಸ್ಕ. ಇವರು ಸಂಕೇತ ಮಾತ್ರ ನೀಡಿದ್ದಾರೆ. ಆದರೆ ಈ ವಿಷಯದಲ್ಲಿ ಆಳವಾದ ಅಧ್ಯಯನ ಮಾಡಿದ ಕೀರ್ತಿ ಜರ್ಮನ್‌ಭಾಷೆಯ ಮಹಾನ್‌ಪಂಡಿತನಾದ ಯಾಕೋವಗ್ರಿಮ್‌ನಿಗೆ ಸಲ್ಲುತ್ತದೆ. ಆದ್ದರಿಂದ ಈ ನಿಯಮಕ್ಕೆ ಆತನ ಹೆಸರನ್ನೆ ಇಟ್ಟು 'ಗ್ರಿಮ ನಿಯಮ' ಎಂದು ಕರೆದಿದ್ದಾರೆ. ಈ ನಿಯಮದ ಸಂಬಂಧ ಭಾರತೀಯ ಭಾಷೆಗಳ ಸಹಯೋಗದೊಂದಿಗೆ ನಿರ್ಮಿಸಿದ್ದಾನೆ. ಜರ್ಮನ್‌ಭಾಷೆಯ ವರ್ಣ ಪರಿವರ್ತನೆಯನ್ನು ಸಂಸ್ಕೃತಭಾಷೆಯೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡಿದ್ದಾನೆ. ಪ್ರಥಮ ವರ್ಣ ಪರಿವರ್ತನೆಯನ್ನು ಈ ಕೆಳಗಿನ ವಿವರದಂತೆ ಮಾಡಿದ್ದಾನೆ.

| | |
|---|---|
| ಭಾರತೀಯ ಮೂಲ ಭಾಷೆಯ ಘೋಷ ಮಹಾಪ್ರಾಣ ಸ್ಪರ್ಶ | ಜರ್ಮನ್ ಭಾಷೆಯಲ್ಲಿ ಘೋಷ ಅಲ್ಪಪ್ರಾಣ |
| ಘ್,ಧ್,ಭ್ | ಗ್,ದ್,ಬ್ |
| ಭಾರತೀಯ ಮೂಲ ಭಾಷೆಯಲ್ಲಿ ಘೋಷ ಅಲ್ಪಪ್ರಾಣ | ಜರ್ಮನ್ ಮೂಲ ಭಾಷೆಯ ಅಘೋಷ ಅಲ್ಪಪ್ರಾಣ ಸ್ಪರ್ಶ |
| ಗ್,ದ್,ಬ್ | ಕ್,ತ್,ಪ್, |
| ಭಾರತೀಯ ಮೂಲ ಭಾಷೆಯಲ್ಲಿ ಅಘೋಷ ಅಲ್ಪಪ್ರಾಣ | ಜರ್ಮನ್ ಮೂಲ ಭಾಷೆಯ ಸಂಘರ್ಷಿ ಅಘೋಷ ಮಹಾಪ್ರಾಣ |
| ಕ್,ತ್,ಪ್, | ಖ್,ಥ್,ಫ್, |

ಮೂಲ ಭಾರತೀಯ ಭಾಷೆಯಲ್ಲಿಯ ವ್ಯಂಜನವು ಸಂಸ್ಕೃತ ಮತ್ತು ಗ್ರೀಕ್ ಮತ್ತಿತರ ಭಾಷೆಯಲ್ಲಿ ಸುರಕ್ಷಿತವಾಗಿತ್ತು.ಆದ್ದರಿಂದ ಮೂಲವನ್ನು ಹುಡುಕಿಹೊರಟಾಗ ಜರ್ಮನ್

ಮತ್ತು ಸಂಸ್ಕೃತ ಎನ್ನುವುದು ಗೊತ್ತಾಗುತ್ತದೆ. ಪರಿವರ್ತನೆಗೊಂಡ ಸ್ಪರ್ಶ ವ್ಯಂಜನ ಧ್ವನಿಗಳನ್ನು ಉದಾಹರಿಸುವುದಾದರೆ,

| ಸಂಸ್ಕೃತ | ಇಂಗ್ಲೀಷ್ |
|---|---|
| ಘ್ ದಿಂದ ಗ್= ಹಂಸ, ದುಹಿತಾ | ಗೂಜ್,ಡಾಟರ್ |
| ಧ್ ದಿಂದ ದ =ವಿಧವಾ, ಧೂಮ | ವಿಡೋ,ಡಸ್ಟ್ |
| ಭ್ ದಿಂದ ಬ್=ಭ್ರಾತೃ | ಬಿ,ಬ್ರದರ್ |
| ಗ್ ದಿಂದ ಕ್= ಗೋ, ಯೋಗ | ಕಾಉ,ಕೌ,ಯೋಕ |
| ದ್ ದಿಂದ ತ್=ದಶನ್,ದ್ವಾ | ಟು,ಟೆನ್ |
| ಕ್ ದಿಂದ ಖ್=ಕದ್,ಕಃ | ಹೂ,ಹ್ವಾಟ್ |
| ತ್ ದಿಂದ ಥ್=ದಂತ,ತನು ತ್ರಿ. | ಥಿನ್,ಥ್ರಿ |

## 4.10 ಧ್ವನಿ ಪರಿವರ್ತನ ಸ್ವರೂಪ

ಧ್ವನಿ ಪರಿವರ್ತನೆಗೆ ಅನೇಕ ರೀತಿಯ ಕಾರಣಗಳಿವೆ. ಸಾಂದರ್ಭಿಕವಾಗಿ ಇವುಗಳು ನಿತ್ಯ ಪರಿವರ್ತನೆಯಾಗುತ್ತಿರುತ್ತವೆ. ಕೆಲವು ಸಂದರ್ಭಗಳಲ್ಲಿ ಧ್ವನಿಗಳು ಲುಪ್ತಗೊಳ್ಳುತ್ತವೆ. ಉದಾಹರಣೆಗೆ 'ಇಟಿಂತಿ' ಇದರ ಉಚ್ಚಾರಣೆ 'ನೋ' ಎಂದಾಗುತ್ತದೆ. ಬರಹದಲ್ಲಿ ನಾಲ್ಕು ಸ್ವತಂತ್ರ ಧ್ವನಿಗಳು ಕಂಡು ಬಂದರೆ ಉಚ್ಚಾರದಲ್ಲಿ ಒದು ಧ್ವನಿಗೆ ಸೀಮೀತವಾಗಲ್ಪಟ್ಟಿದೆ. ಪ್ರಮುಖ ಧ್ವನಿಪರಿವರ್ತನೆಗಳನ್ನು ಈಕೆಳಗಿನಂತೆ ಸಂಗ್ರಹಿಸ ಬಹುದಾಗಿದೆ.

1 ಧ್ವನಿಲೋಪ 2 ಧ್ವನಿ ಆಗಮ

3 ಧ್ವನಿ ವಿಪರ್ಯಯ 4 ಸಮೀಕರಣ

5 ವಿಷಮೀಕರಣ 6 ಸಂಧಿ

7 ಊಷ್ಮೀಕರಣ 8 ಅನುನಾಸಿಕೀಕರಣ

9 ಮಾತ್ರಾ ಭೇದೀಕರಣ 10 ಘೋಷೀಕರಣ

11 ಅಘೋಷೀಕರಣ 12 ಮಹಾಪ್ರಾಣೀ ಕರಣ

13 ಅಲ್ಪಪ್ರಾಣೀಕರಣ 14 ಅಭಿಶ್ರುತಿ

15 ಅಪ ಶ್ರುತಿ.

ಈ ಮೇಲಿನ 15 ವಿಭಿನ್ನ ತೆರನಾದ ಧ್ವನಿ ಪರಿವರ್ತನೆಗಳನ್ನು 3 ಪ್ರಮುಖ ವಿಭಾಗಗಳಲ್ಲಿ ಅಂತರ್ಗತಮಾಡಬಹುದು. ಅವುಗಳನ್ನು ಧ್ವನಿ ಲೋಪ, ಧ್ವನಿ ಆಗಮ ಮತ್ತು ಧ್ವನಿ ಪರಿವರ್ತನ ಎಂಬುದಾಗಿ ವಿವರಿಸಬಹುದು. ಧ್ವನಿಲೋಪ ವೆಂದರೆ ಇರುವ ಧ್ವನಿ ಲುಪ್ತವಾಗುವುದು ಉದಾಹರಣೆಗೆ ಸಂಸ್ಕೃತದ 'ನಿಯಮ' ಇದು ಕನ್ನಡಕ್ಕೆ ಬಂದಾಗ 'ನೇಮ' ಎಂದು ಪರಿವರ್ತನೆಗೊಳ್ಳುವುದು, ಹೊಸದೊಂದು ಧ್ವನಿಯು ಬಂದು ಸೇರುವುದನ್ನು ಇನ್ನೊಂದು ಧ್ವನಿಯ ಲೋಪವಾಗಲೀ ಆಗಮವಾಗಲಿ ಸಂಭವಿಸುವುದಿಲ್ಲ. ಮೊದಲಿಗೆ ಉಪಸ್ಥಿತವಿರುವ ಧ್ವನಿಯ ಬದಲಿಗೆ ಇನ್ನೊಂದು ಧ್ವನಿ ಬಂದು ಸೇರುವುದು. ಸಂಸ್ಕೃತ ಭಾಷೆಯಲ್ಲಿ ಕಂಕಣ ಎನ್ನುವುದು ಹಿಂದಿ ಭಾಷೆಯಲ್ಲಿ 'ಕಂಗನ' ಎಂದಾಗುತ್ತದೆ. ಇಲ್ಲಿ ಲೋಪ, ಆಗಮಗಳು ಸಂಭವಿಸುವುದಿಲ್ಲ. ಮೊದಲೇ ಇದ್ದಂತಹ ಕ ಬದಲಿಗೆ ಗ ವೂ ಣ ದ ಬದಲಿಗೆ ನ ವೂ ಪರಿವರ್ತನೆ ರೂಪದಲ್ಲಿ ಬಂದಿದೆ.

## ಧ್ವನಿ ಪರಿವರ್ತನೆಗೆ ಕಾರಣಗಳು

ಭಾಷೆಯ ಧ್ವನಿಗಳು ಪರಿವರ್ತನೆಯನ್ನು ಹೊಂದಲು ಪ್ರಮುಖವಾಗಿ ಎರಡು ಕಾರಣಗಳನ್ನು ನೀಡಬಹುದಾಗಿದೆ. ಒಂದನೆಯದು ಆಂತರಿಕ ಕಾರಣ ಇನ್ನೊಂದು ಬಾಹ್ಯಕಾರಣ. ಭಾಷಾತೀತವಾದ ವಾತಾವರಣ ಭಾಷೆಯ ಅಂದರೆ ಭಾಷೆಯ ಹೊರತಾದ ಕಾರಣ ಇದನ್ನು ಬಾಹ್ಯಕಾರಣ ಎಂದೂ ಕರೆಯಬಹುದು ಸಮಾಜದಲ್ಲಿ ರಾಜಕೀಯ, ಆರ್ಥಿಕ, ಧಾರ್ಮಿಕ,ಸಾಂಸ್ಕೃತಿಕ ಅವಸ್ಥೆ ಮತ್ತು ಭೌಗೋಳಿಕ ವಾತಾವರಣ ಭಾಷೆಯ ಮೇಲೆ ಪ್ರಭಾವ ಬಿರುತ್ತದೆ. ಉದಾಹರಣೆಗೆ ಭಾರತದ ಇತಿಹಾಸವನ್ನು ಒಮ್ಮೆ ಇಣುಕಿದಾಗ ಸ್ಪಷ್ಟಗೊಳ್ಳುತ್ತದೆ. ಭಾರತಕ್ಕೆ ಅರಬ್ಬರ ದಾಳಿಯಿಂದ ಅರಬ್ ಭಾಷೆಯೂ

ಆಂಗ್ಲಭಾಷೆಯೂ ಆಗಮಿಸಲು ಸಾಧ್ಯವಾಗಿದೆ. ಇನ್ನು ಧ್ವನಿ ಪರಿವರ್ತನೆಗೆ ಎರಡನೇ ಕಾರಣ ವೆಂದರೆ ಆಂತರಿಕ ಕಾರಣ ಭಾಷೆಯ ಒಳಭಾಗದ ರಚನೆಯಲ್ಲಿ ಸಂಭವಿಸುವ ವಿವಿಧ ಬಗೆಯ ವಿಕಸನ ಅವಸನಗಳು. ಇವುಗಳನ್ನು ಇನ್ನಷ್ಟು ವಿವರವಾಗಿ ಈ ಕೆಳಗಿನಂತೆ ವಿವರಿಸಬಹುದು.

**ವಾಕ್‌ಯಂತ್ರದ ವಿಭಿನ್ನತೆ.**

ವ್ಯಕ್ತಿಯಿಂದ ವ್ಯಕ್ತಿಗೆ ರೂಪಗುಣಗಳಲ್ಲಿ ವ್ಯತ್ಯಾಸವಿರುವಂತೆ ವಾಗ್ಯಂತ್ರದಲ್ಲಿಯೂ ವ್ಯತ್ಯಾಸವಿರುತ್ತದೆ. ಹಾಗೆಯೆ ಒಬ್ಬ ವ್ಯಕ್ತಿಯು ವಿವಿಧ ಸಂದರ್ಭದಲ್ಲಿ ಹೊರಡಿಸಬಲ್ಲ ಒಂದು ಧ್ವನಿಯ ಉಚ್ಚಾರಗಳು ಏಕರೀತಿಯಲ್ಲಿ ಇರಲು ಅಸಾಧ್ಯವಾಗಿದೆ. ವಾಗ್ಯಂತ್ರಕ್ಕೆ ಸಂಬಂಧಪಟ್ಟಂತೆ ವ್ಯಕ್ತಿಯಿಂದವ್ಯಕ್ತಿಗೆ ಭಿನ್ನವಾಗಿರುವ ಕಾರಣ ಉಚ್ಚಾರಣೆಯಲ್ಲಿ ವ್ಯತ್ಯಾಸವಿರುತ್ತದೆ. ಉದಾಹರಣೆಗೆ 'ರಾಮ' ಎನ್ನುವ ಶಬ್ದವನ್ನು 10 ವ್ಯಕ್ತಿಗಳು 10 ತೆರನಾಗಿ ಉಚ್ಚರಿಸುತ್ತಾರೆ. ಅದು ವ್ಯಕ್ತಿಯಿಂದ ವ್ಯಕ್ತಿಯ ವಾಗ್ಯಂತ್ರಕ್ಕೆ ಇರುವ ಭಿನ್ನತೆಯಾದರೆ, ಒಬ್ಬ ವ್ಯಕ್ತಿಯು 'ರಾಮ' ಎನ್ನುವ ಶಬ್ದವನ್ನು ಅನೇಕಬಾರಿ ಉಚ್ಚರಿಸಿದರೆ ಪ್ರತಿಯೊಂದು ಸಂದರ್ಭದಲ್ಲಿಯ ಉಚ್ಚಾರವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಭಿನ್ನವಾಗಿರುವುದು ಸ್ಪಷ್ಟವಾಗುತ್ತದೆ. ಆದ್ದರಿಂದ ವಾಗ್ಯಂತ್ರದ ವಿಭಿನ್ನತೆಯು ಧ್ವನಿಪರಿವರ್ತನೆಯಲ್ಲಿ ಪ್ರಮುಖಪಾತ್ರವಹಿಸುತ್ತದೆ.

**ಶ್ರವಣೇಂದ್ರಿಯಗಳ ವಿಭಿನ್ನತೆ.**

ವ್ಯಕ್ತಿಯು ವಾಕ್‌ಯಂತ್ರವನ್ನು ಬಳಸಬಲ್ಲ ಸಾಮರ್ಥ್ಯವನ್ನು ಹೇಗೆ ಹೊಂದಿರುತ್ತಾನೆಯೋ ಅದೇರೀತಿ ಶ್ರವಣೇಂದ್ರಿಯವನ್ನು ಬಳಸಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಶ್ರವಣೇಂದ್ರಿಯ ಸಾಮರ್ಥ್ಯವೂ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ವೈಯಕ್ತಿಕ ಭಿನ್ನತೆಗಳಲ್ಲಿ ಇದು ಒಂದಾಗಿದೆ. ಉದಾಹರಣೆಗೆ ಯಾವುದೇ ಒಂದು ಭಾಷೆಯ ವಾಕ್ಯವನ್ನು ಆ ಭಾಷೆಯನ್ನು ಮಾತನಾಡುವವರು 100 ಜನರಿದ್ದರೆ ಅವರು ಅದನ್ನು ನೂರುರೀತಿಯಲ್ಲಿ ಅರ್ಥೈಸಿಕೊಳ್ಳಬಲ್ಲವರಾಗಿದ್ದಾರೆ. 'ದ್ರೋಣಸುತನು ತೀರಿಕೊಂಡನು' ವಾಕ್ಯವನ್ನು ಎರಡು ರೀತಿಯಲ್ಲಿ ಅರ್ಥೈಸ ಬಹುದಾಗಿದೆ. ಒಂದರ್ಥದಲ್ಲಿ ದ್ರೋಣಸುತ ಎನ್ನುವುದನ್ನು ದ್ರೋಣನ ಮಗ ಎಂದು ಅರ್ಥೈಸುವುದು ಇನ್ನೊಂದು ಅರ್ಥದಲ್ಲಿ

ದ್ರೋಣಸುತ ಎನ್ನುವುದನ್ನು ಸಮಗ್ರ ಪದವಗಿ ಪರಿಗಣಿಸಿ ಅರ್ಥೈಸುವುದು. ಇದಕ್ಕೆ ಮುಖ್ಯಕಾರಣ ಶ್ರವಣೇಂದ್ರಿಯದ ವಿಭಿನ್ನತೆಯಾಗಿದೆ.

**ಅನುಕರಣದ ಅಪೂರ್ಣತೆ.**

ಭಾಷೆ 'ಅನುಕರಣಶೀಲವಾದದ್ದು' ಎಂಬುದು ಎಲ್ಲರಿಗೂಗೊತ್ತಿರುವ ಸಂಗತಿಯಾಗಿದೆ ಆದರೆ ಈ ಅನುಕರಣ ಕಾರ್ಯ ಭಾಷೆಗೆಮಾತ್ರ ಸೀಮಿತವಾದದ್ದಲ್ಲ. ಎಲ್ಲ ಪ್ರಾಣಿಗಳು ತಮ್ಮೆಲ್ಲ ನಿತ್ಯಕರ್ಮ ಮತ್ತು ಜೀವಿತಾವಧಿಯ ಕಾರ್ಯಗಳನ್ನು ಅನುಕರಿಸಿಯೇ ನೆರವೇರಿಸಿಕೊಳ್ಳುತ್ತವೆ. ಅದೇರೀತಿ ಧ್ವನಿಗಳನ್ನು ಅನುಕರಿಸುತ್ತದೆ. ಆದರೆ ಅನುಕರಣೆಯ ಪ್ರಕ್ರಿಯೆಯಲ್ಲಿ ಭಾಗಶ:ವಾಗಿಯೋ, ಅಪೂರ್ಣವಾಗಿಯೋ ಅನುಕರಿಸಿದರೆ ಅದು ಅನರ್ಥಕ್ಕೆ ಮತ್ತು ಧ್ವನಿಪರಿವರ್ತನೆಗೆ ಕಾರಣವಾಗುತ್ತೆ. ಉದಾಹರಣೆಗೆ ರೋಟಿ ಎನ್ನುವುದನ್ನು ಲೋಟಿ ಎಂದೂ, ಫಲಾಹರ ಎನ್ನುವುದನ್ನು ಪಲಾಹಾರ ಎಂದು ಪರಿವರ್ತನೆಗೊಳಿಸಿ ಬಳಸಿರುವುದು. ಇಲ್ಲಿ ಮೂಲ ಅರ್ಥಕ್ಕೆ ಚ್ಯುತಿ ಉಂಟಾಗಿದೆ. ಕೆಲವು ಸಲ ಒಂದುಭಾಷೆಯ ವ್ಯಾಕರಣ ಪರಂಪರೆಯನ್ನು ಅನ್ಯಭಾಷಾಪದಗಳು ಅನುಕರಿಸುತ್ತಿರುತ್ತವೆ. 'ಪೋಸ್ಟ್' ಎನ್ನುವ ಆಂಗ್ಲಭಾಷಾ ಪದಕ್ಕೆ ಕನ್ನಡವಿಭಕ್ತಿಪ್ರತ್ಯಗಳು ಸೇರಿಬಳಕೆಯಾಗುತ್ತಿವೆ, ಇದಕ್ಕೆ ಕಾರಣ ಕನ್ನಡವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಕನ್ನಡ ಪದಗಳೆಂಬಂತೆ ಬಳಸುತ್ತೇವೆ. ಅದೇ ರೀತಿಯ ಅನುಕರಣವನ್ನು ನಾವು ಇತರ ಭಾಷಾ ಪದಗಳನ್ನು ಬಳಸುವಾಗಲೂ ಕಾಣುತ್ತೇವೆ, ಅದೇರೀತಿ ಆಂಗ್ಲಭಾಷೆಯ 'ಆಪೀಸ್' ಎನ್ನುವುದನ್ನು'ಆಫೀಸಿನಿಂದ', 'ಆಫೀಸಿಗೆ', 'ಆಫೀಸಿನಲ್ಲಿ' ಇತ್ಯಾದಿಯಾಗಿ ಬಳಸುತ್ತೇವೆ. ಇದೇರೀತಿ ಮುಂದುವರಿದು 'ಆಫಿಸ್' ಎನ್ನುವ ಪದ ಮುಂದಿನ ತಲೆಮಾರಿನಲ್ಲಿ ಕನ್ನಡ ಪದವಾಗಿ ಪರಿಣಮಿಸುತ್ತದೆ.

**ಅಜ್ಞಾನ**

ಭಾಷೆಯ ಬಳಕೆಯ ಮೇಲೆ ಆತನು ಹೊಂದಿರುವ ಜ್ಞಾನ ಬಹುಮುಖ್ಯ ಪರಿಣಾಮ ಬೀರುತ್ತದೆ. ಇನ್ನೊಂದು ಸ್ವಾರಸ್ಯಕರ ವಿಷಯವೆಂದರೆ ಧ್ವನಿಯನ್ನು ಪರಿವರ್ತನೆ ಮಾಡಬಲ್ಲ ಸಾಮರ್ಥ್ಯ ಜ್ಞಾನಿಯಾದವನಲ್ಲಿ ಹೇಗೆ ಇದೇಯೋ ಅದೇರೀತಿ

ಅಜ್ಞಾನಿಯಾದವನಲ್ಲಿಯೂ ಇದೆ. ಜ್ಞಾನಿಯಾದವನನು ತನ್ನ ಬುದ್ಧಿವಂತಿಕೆಯಿಂದ ಧ್ವನಿಪರಿವರ್ತನೆಗೆ ಕಾರಣನಾದರೆ ಅಜ್ಞಾನಿಯು ಭಾಷೆಯನ್ನು ಅರ್ಥಮಾಡಿಕೊಳ್ಳಲಾರದೆ ತಪ್ಪುತಪ್ಪಾಗಿ ಬಳಸಿ ಧ್ವನಿಪರಿವರ್ತನೆಗೆ ಕಾರಣೀಭೂತ ನಾಗುತ್ತಾನೆ. ಇಲ್ಲಿ ಪ್ರಮುಖವಾಗಿ ಜ್ಞಾನಿಯಿಂದ ಭಾಷೆಯ ಸುಧಾರಣೆಯ ಪ್ರಯತ್ನ ನಡೆದರೆ ಅಜ್ಞಾನಿಯಿಂದ ಭಾಷೆ ಅವನತಿಯತ್ತ ಸಾಗುತ್ತದೆ. ಅದಕ್ಕೆ ಕಾರಣಗಳು ಹಲವು. ಅದನ್ನೆ ಪ್ರತ್ಯೇಕವಾಗಿ ಅಧ್ಯಯನಮಾಡಬಹುದೇನೋ. ಅದರ ವಿವರ ಇಲ್ಲಿ ಅನಗತ್ಯ. ಅಜ್ಞಾನದಿಂದ ಧ್ವನಿ ಪರಿವರ್ತನೆಗೊಳ್ಳುತ್ತೆ ಎಂದುದಕ್ಕೆ ಉದಾಹರಣೆ ಇಂಗ್ಲಿಷಿನ ಕಂಪೌಡ್ ಎನ್ನುವ ಪದಕ್ಕೆ ಕನ್ನಡದಲ್ಲಿ ಉಚ್ಚಾರಮಾಡುವ ಕೆಲವರು 'ಕಂಪೌಂಡು' ಎಂದೂ ಕರೆಯುತ್ತಾರೆ. ಇನ್ನು ಕೆಲವರು'ಕಂಬೈಂಡು' ಎಂದೂ ಕರೆಯುತ್ತಾರೆ 'ಇಂಜಿನಿಯರ' ಎನ್ನುವ ಪದವನ್ನು 'ಇಂಜಿಯರ' ಎಂದೂ, 'ಎಕ್ಸಪ್ರೆಸ್' ಎನ್ನುವುದನ್ನು 'ಇಸ್ಪ್ರೆಸ್' ಎಂದೂ ಅನುಕರಿಸುತ್ತಾರೆ. ಈ ರೀತಿಯ ಪರಿವರ್ತನೆಗಳಿಂದ ಕಾಲಾಂತರದಲ್ಲಿ ಹೊಸಧ್ವನಿಗೆ ಕಾರಣವಾಗಿ ಹಳೆಯ ಧ್ವನಿಯು ನಾಪತ್ತೆಯಾಗುತ್ತದೆ.

**ಮಾತನಾಡುವಿಕೆಯಲ್ಲಿನ ಶೀಘ್ರತೆ**

ನಾವು ಮಾತನಾಡುತ್ತಿರುವಾಗ ಯಾವ ವೇಗದಲ್ಲಿ ಅಥವಾ ಯಾವ ಲಯದಲ್ಲಿ ಮಾತನಾಡುತ್ತೇವೆ ಎನ್ನುವುದು ಧ್ವನಿಪರಿವರ್ತನೆಗೆ ಕಾರಣವಾಗುತ್ತದೆ. ಮುಖ್ಯವಾಗಿ ಇಲ್ಲಿ ವೇಗವಾಗಿ ಮಾತನಾಡುವಿಕೆಯಿಂದ ಧ್ವನಿಪರಿವರ್ತನೆ ಹೇರಳವಾಗಿ ನಡೆಯುತ್ತಿರುತ್ತದೆ. ನಿಧಾನವಾಗಿ ಮಾತನಾಡಿದಾಗ ಸಾಮಾನ್ಯವಾಗಿ ಎಲ್ಲಧ್ವನಿಗಳು ಸ್ಪಷ್ಟಉಚ್ಚಾರಗೊಳ್ಳುವ ಸಾಧ್ಯತೆಯಿದೆ. ಆದರೆ ವೇಗವಾಗಿ ಉಚ್ಚಾರಮಾಡಿದರೆ ಕೆಲವು ಧ್ವನಿಗಳು ಲೋಪವಾಗಿಯೂ, ಆಗಮವಾಗಿಯೂ, ಪರಿವರ್ತನೆಗೊಳ್ಳುತ್ತದೆ. ಉದಾಹರಣೆಗೆ 'ಗುರುಗಳನ್ನು' ಎನ್ನುವ ಪದವನ್ನು ನಾವು ಮಾತನಾಡುವಾಗ ಗುರುಗ್ಳನ್ನು ಎಂದು ಉಚ್ಚರಿಸುತ್ತೇವೆ. 'ಪ್ರಕರ' ಎಂಬ ಶಬ್ದವನ್ನು 'ಪಕರ' ಎಂದೂ, 'ಪ್ರಾಕೃತಿಕ' ಎನ್ನುವುದನ್ನು 'ಪಾಕತಿಕ' ಎಂದೂ, 'ಸೊಮವಾರ' ಎಂಬುದನ್ನು 'ಸೋಮಾರ' ಎಂದೂ ಉಚ್ಚಾರಮಾಡುತ್ತೇವೆ. 'ಮೆಲೋಗರ' ಎನ್ನುವುದನ್ನು 'ಮೇಲಾರ' ಎಂದೂ ಉಚ್ಚರಿಸುತ್ತೇವೆ.

**ಮುಖ ಮತ್ತು ಸುಖ**

ಧ್ವನಿಗಳನ್ನು ಉಚ್ಚಾರ ಮಾಡುತ್ತಿರುವಾಗ ನಾವು ನಮ್ಮ ಸೌಲಭ್ಯಕ್ಕೋಸ್ಕರ ಧ್ವನಿಗಳನ್ನು ಪರಿವರ್ತನೆಮಾಡಿ ಅವುಗಳಿಗೆ ಮುಖ-ಸುಖ ಧ್ವನಿಗಳಿಂದ ವಿಭಿನ್ನ ಅರ್ಥವನ್ನು ನೀಡುತ್ತೇವೆ. ಅಂದರೆ ನಮಗೆ ದೈಹಿಕವಾಗಿ ಯಾವುದೇ ರೀತಿಯ ತೊಂದರೆ, ಆಯಾಸಗಳು ಆಗದೇ ಸುಲಲಿತವಾಗಿ ನಾವು ಭಾಷೆಯನ್ನು ಪ್ರಯೊಗಿಸುವುದು. ಉದಾಹರಣೆಗೆ 'ಸ್ಕೂಲ್' ಎಂಬ ಆಂಗ್ಲಭಾಷೆಯ ಪದವನ್ನು 'ಇಸ್ಕೂಲು' ಎಂದು, 'ಸ್ಟೇಶನ್' ಎನ್ನುವ ಪದವನ್ನು 'ಇಸ್ಟೇಶನ' ಎಂದೂ ಬಳಸುತ್ತಾರೆ. ಇನ್ನು ಕೆಲವರು 'ಸಕೂಲ', ಮತ್ತು 'ಸಟೇಶನ' ಎಂದೂ ಬಳಸುತ್ತಾರೆ. ಅದೇರೀತಿ ಕೆಲವು ಧ್ವನಿಗಳನ್ನು ಬಳಸುವುದು ಕಷ್ಟ ಎಂದು ತಿಳಿದು ಅವುಗಳನ್ನು ಪರಿವರ್ತನೆಗೊಳಿಸಿ ಬಳಸುತ್ತಾರೆ. ಉದಾ 'ಧರ್ಮ' ಎಂಬ ಪದವನ್ನು 'ದಮ್ಮ' ಎಂದು ಉಚ್ಚರಿಸುತ್ತಾರೆ.

**ಭಾವುಕತೆ**

ಮನುಷ್ಯ ಭಾವನಾಜೀವಿಯಾಗಿದ್ದಾನೆ. ಸಾಂದರ್ಭಿಕವಾಗಿ ನಾನಾ ಭಾವನೆಯನ್ನು ಅಭಿವ್ಯಕ್ತಿಸಿರುತ್ತಾನೆ. ಅದು ಸಂತೋಷ,ದುಃಖ, ಕೋಪ,ತಾಪ ಇತ್ಯಾದಿಗಳಾಗಿರಬಹುದು. ಇಂತಹ ಸಂದರ್ಭದಲ್ಲಿ ತಾನು ಬಳಸುತ್ತಿರುವ ಭಾಷೆಯನ್ನು ತನಗೆ ಮನಸ್ಸಿಗೆ ಗೊತ್ತಾಗದೇ ಬಳಸುವಸಾಧ್ಯತೆಯಿದೆ. ಹೀಗೆ ಭಾಷೆಯನ್ನು ಭಾವತೀವ್ರತೆಯ ಸನ್ನಿವೇಶದಲ್ಲಿ ಪರಿವರ್ತನೆಗೊಳಿಸಿ ಧ್ವನಿಪರಿವರ್ತನೆಗೆ ಕಾರಣವಾಗುವಿಕೆಯನ್ನು ಭಾವುಕ ಧ್ವನಿಪರಿವರ್ತನೆ ಎಂದು ಕರೆಯಬಹುದು. ಉದಾಹರಣೆಗೆ 'ಚಿನ್ಮಯ' ಎಂಬ ಪದವನ್ನು ಒಂದು ಮಗುವಿಗೆ ಸಂಬೋಧಿಸುವಾಗ ಪ್ರಿತಿಯಿಂದ ಮುದ್ದಾಗಿ 'ಚಿನ್ನು' ಎಂದು ಸಂಬೋಧಿಸುತ್ತಾರೆ, ಅಪ್ಪಿ,ಪುಟ್ಟ ಎಂದೇಲ್ಲ ಕರೆಯುತ್ತಾರೆ. 'ಅಮ್ಮ' ಎಂಬುದನ್ನು ಅಮ್ಮಿ ಎಂದೂ ಕರೆಯುತ್ತಾರೆ. ಕೋಪ ಬಂದಾಗ 'ಸುರ' ಎಂಬವನನ್ನು 'ಬಕಾಸುರ' ಎಂದು ಕರೆಯುತ್ತಾರೆ. ಹೀಗೆ ಭಾವ ತೀವ್ರತೆಯ ಸನ್ನಿವೇಶದಲ್ಲಿ ನಾವು ಧ್ವನಿಯನ್ನು ಪರಿವರ್ತಿಸಿ ಬಳಸುತ್ತಿರುತ್ತೇವೆ. ಕೆಲವು ಸಲ ಭಾವತೀವ್ರತೆ ಮರೆಯಾದ ತತ್‌ಕ್ಷಣ ನಮ್ಮಬಗ್ಗೆ ನಮಗೆ ಒಂದು ರೀತಿಯ ಮುಜುಗರ ಉಂಟಾಗುತ್ತದೆ.

## ವಿದೇಶೀ ಧ್ವನಿಯ ಪ್ರಭಾವ ದಿಂದ ಸ್ವಭಾಷಾ ಧ್ವನಿಯ ಪರಿವರ್ತನೆ.

ಒಂದು ರಾಷ್ಟ್ರವೆಂದಮೇಲೆ ಅಲ್ಲಿ ಅನೇಕ ಜಾತಿ,ಮತ,ಪಂಥಗಳಿರುತ್ತವೆ, ತನ್ನದೇ ಆದ ವಿಶಿಷ್ಟ ಸಂಸ್ಕೃತಿಗಳಿರುತ್ತವೆ. ಪ್ರತಿಯೊಂದು ಪಂಥ,ಜಾತಿ,ಮತಗಳಿಗೂ ಕೂಡ ತಮ್ಮ ಜಾತಿ,ಮತ,ಪಂಥವೇ ಶ್ರೇಷ್ಠ ಎಂಬ ಭಾವನೆಗಳಿರುತ್ತವೆ. ಅಂತಹ ವಿಭಿನ್ನ ತೆರನಾದ ಭಾಷಾ ಸಂಸ್ಕೃತಿಗಳಿದ್ದಾಗ ಪರಸ್ಪರ ಒಂದು ಭಾಷೆಯ ಪ್ರಭಾವ ಇನ್ನೊಂದು ಭಾಷೆಯ ಮೇಲೆ ಸಹಜವಾದುದಾಗಿದೆ. ಉದಾಹರಣೆಗೆ ಸಂಸ್ಕೃತ ಮತ್ತು ಕನ್ನಡ ಮೂಲತಃ ಬೇರೆ ಬೇರೆ ಪರಿವಾರದ ಭಾಷೆಗಳಾಗಿವೆ. 'ಸಂಸ್ಕೃತ' ಇಂಡೋಯುರೋಪಿಯನ್ ಪರಿವಾರದ ಭಾಷೆಯಾದರೆ 'ಕನ್ನಡ' ದ್ರಾವಿಡಭಾಷಾಪರಿವಾರದ ಭಾಷೆಯಾಗಿದೆ. ಆದರೆ ಸಂಸ್ಕೃತದ ಅಸಂಖ್ಯಾತ ಪದಗಳನ್ನು ಕನ್ನಡ ಅನುಕರಿಸಿದೆ. ಕೇವಲ ಪದಗಳಿಗೆ ಮಾತ್ರ ಸೀಮಿತ ಗೊಂಡಿಲ್ಲ ವ್ಯಾಕರಣ,ಛಂದಸ್ಸು,ಸಾಹಿತ್ಯಗಳನ್ನೆಲ್ಲ ಕನ್ನಡ ಅನುಕರಿಸಿದೆ. ಹೀಗೆ ಅನ್ಯಭಾಷೆಯ ಪ್ರಭಾವದಿಂದಾಗಿ ಒಂದು ಭಾಷೆಯ ಧ್ವನಿಗಳು ಪರಿವರ್ತನೆಯಾಗುತ್ತದೆ.

## ರಾಜನೀತಿಕ ಪ್ರಭಾವ

ಆಧುನಿಕ ಸಮಾಜದಲ್ಲಿ ದೇಶ ಅಥವಾ ರಾಜ್ಯದ ಸರ್ವಾಂಗೀಣ ಅಭಿವೃದ್ಧಿಯ ಹೊಣೆಯನ್ನು ಆಯಾ ದೇಶದ ಅಥವಾ ರಾಜ್ಯದ ಚುನಾಯಿತ ಸರಕಾರಗಳು ಹೊಂದಿರುತ್ತವೆ. ಪ್ರತಿಯೊಂದು ಕ್ಷೇತ್ರಗಳ ಮೇಲೆ ಒಂದು ಸರಕಾರ ಕೈಗೊಳ್ಳುವ ತಿರ್ಮಾನಗಳಿಂದ ಉನ್ನತಿ ಅವನತಿಗಳು ಸಂಭವಿಸುತ್ತಿರುತ್ತವೆ. ಅದೇರೀತಿ ಭಾಷಾ ಕ್ಷೇತ್ರದ ಮೇಲೂ ಪರಿಣಾಮ ಬೀರುತ್ತಿರುತ್ತದೆ. ಉದಾಹರಣೆಗೆ ಕನ್ನಡಭಾಷೆಯ ಮೇಲೆ ಸಂಸ್ಕೃತದ ಪ್ರಭಾವವಾಗಲೀ, ಆಂಗ್ಲಭಾಷೆಯ ಪ್ರಭಾವವಾಗಲೀ ಅಥವಾ ಇನ್ನಿತರ ಯಾವುದೇ ಭಾಷೆಯ ಪ್ರಭಾವದಲ್ಲಿ ರಾಜನೀತಿಯ ಪ್ರಭಾವವೇ ಬಹುಮುಖ್ಯ ಕಾರಣವಾಗಿದೆ.

## ಸಾದೃಶ್ಯ ಮತ್ತು ಪ್ರಾಸ

ಧ್ವನಿಗಳು ಏಕರೀತಿಯಲ್ಲಿ ಶ್ರವಣ ಮತ್ತು ದೃಶ್ಯವಾಗುವಿಕೆಯು ಧ್ವನಿಪರಿವರ್ತನೆಗೆ ಕಾರಣವಾಗುತ್ತದೆ. ಅದೇರೀತಿ ಮೌಖಿಕವಾಗಿ ಭಾಷೆಯನ್ನು ಅಭಿವ್ಯಕ್ತಿಸುವಾಗ ನಾವು ಅನೇಕ ಪ್ರಮಾದಗಳನ್ನು ಮಾಡುತ್ತೇವೆ. ಉದಾಹರಣೆಗೆ ದ್ವಿರುಕ್ತಿಗಳು,ಅನುಕರಣವಾಚಕ ಪದಗಳು, ಜೋಡುನುಡಿಗಳು ಇತ್ಯಾದಿ. 'ಮರಗಿರ' ಎನ್ನುವ ಜೋಡುನುಡಿ ಇದೆ

ಎಂದಿಟ್ಟುಕೊಳ್ಳೋಣ ಈ ಜೋಡಿ ಪದದಲ್ಲಿ 'ಮರ' ಎನ್ನುವುದಕ್ಕೆ ಅರ್ಥವಿದೆ ಆದರೆ ಗಿರ ಎನ್ನುವುದಕ್ಕೆ? ಅರ್ಥವಿಲ್ಲ. ಅದು ಪ್ರಾಸ ಬದ್ಧತೆಯಿಂದ ರೂಢಿಯಲ್ಲಿದೆಯಷ್ಟೆ. 'ಢಣಢಣ' ಎಂದು ಅನುಕರಣವಾಚಕಗಳನ್ನು ಬಳಸುತ್ತೇವೆ. ಇಲ್ಲಿ ಎರಡುಸಲ ಬಳಸುವುದರ ಅಗತ್ಯವೇನಿದೆ? ಏಕೆಂದರೆ 'ಢಣ' ಎಂದು ಒಮ್ಮೆ ಉಚ್ಚರಿಸಿದರೆ ಸಾಕು. ಏಕೆಂದರೆ ನಾವು 'ಢಣ' ಎಂದು ಎಷ್ಟುಸಲ ಬಾರಿಸುತ್ತಾರೆ ಅಷ್ಟುಸಲ ಉಚ್ಚರಿಸಲು ಸಾಧ್ಯವಿಲ್ಲ. 'ವಸತಿ' ಎನ್ನುವ ಸಂಸ್ಕೃತಪದವನ್ನು ನಾವು 'ಬಸದಿ' ಎಂದು ಬಳಸುತ್ತೇವೆ. ತತ್ಸಮ ತದ್ಭವ ಪದಗಳು ಕೂಡ ಇವುಗಳಿಗೆ ಉದಾಹರಣೆಗಳಾಗಿ ನೀಡಬಹುದಾಗಿದೆ.

**ಬಲಾಘಾತ**

ನಾವು ಕೆಲವುಧ್ವನಿಗಳನ್ನು ಉಚ್ಚರಿಸುವಾಗ ಬಳಸಿಕೊಳ್ಳುವ ಶ್ವಾಸತೀವ್ರತೆಯ ಶಕ್ತಿಯನ್ನು 'ಬಲಾಘಾತ' ಎಂದು ಕರೆಯಬಹುದು. 'ಬಲಾಘಾತ'ದ ಮೂಲಕ ಧ್ವನಿವ್ಯತ್ಯಾಸಗೋಳ್ಳುತ್ತದೆ. ಉದಾಹರಣೆಗೆ ಆಂಗ್ಲಭಾಷೆಯ 'ಡೈರೆಕ್ಟರ್' ಎನ್ನುವ ಪದವನ್ನು 'ಡಿರೆಕ್ಟರ್' ಎಂದೂ 'ಫಾಯಿನಾನ್ಸ' ಎನ್ನುವ ಪದವನ್ನು 'ಫಿನಾನ್ಸ್' ಎಂದೂ ಉಚ್ಚಾರಮಾಡುತ್ತೇವೆ.

**4.11 ಧ್ವನಿ ಮೂಲಕ ಲಿಪಿ– ಚಿತ್ರ ಲಿಪಿ.**

ಮನಸ್ಸಿನಲ್ಲಿರುವ ಭಾವನೆಯನ್ನು ಚಿತ್ರದಮೂಲಕ ಪ್ರಕಟಪಡಿಸುವುದನ್ನು ಚಿತ್ರಲಿಪಿ ಎಂದುಕರೆಯುತ್ತಾರೆ. ಚಿತ್ರವು ಲೇಖನದ ಇತಿಹಾಸದ ಆರಂಭಿಕ ಪ್ರತಿನಿಧಿಯಲ್ಲ. ಚಿತ್ರದಿಂದ ಚಿತ್ರಕಲೆಯ ಇತಿಹಾಸ ಅರಂಭವಾಗಿದೆ ಎನ್ನಬಹುದು. ಆ ಕಾಲದಲ್ಲಿ ಮಾನವನು ಸಾಧನಸಲಕರಣೆಗಳಿಂದ ಪಶು,ಜಂತು, ಮಾನವ ಶರೀರದ ಬಿಡಿಭಾಗಗಳು,ವನಸ್ಪತಿ ಮತ್ತಿತರ ಚಿತ್ರಗಳನ್ನು ಬಿಡಿಸುತ್ತಿದ್ದನು, ಇದನ್ನು ಸಾಕ್ಷೀಕರಿಸಬೇಕೆಂದರೆ ಧಾರ್ಮಿಕ ಆಚರಣೆಗಳಲ್ಲಿ ಇದಕ್ಕೆ ಸಾಕಷ್ಟು ಪುರಾವೆಗಳು ಸಿಗುತ್ತವೆ. ಇಂದಿಗೂ ವೈದಿಕಧರ್ಮದಲ್ಲಿ ನಾನಾರೀತಿಯ ಮಂಗಳಕಾರ್ಯಗಳನ್ನು ಮಾಡುವಾಗ ಅನೇಕರೀತಿಯ ರೇಖಾಕೃತಿಗಳನ್ನು ಬಿಡಿಸುತ್ತಾರೆ, ಅನೇಕ ವರ್ಣರಂಜಿತ ಆಕೃತಿಗಳನ್ನು ಸುಂದರ, ಆಕರ್ಷಕವಾಗಿ ರಚಿಸುತ್ತಾರೆ. ಇದು ಇಂದು ನಿನ್ನೆಯ

ವಿಚಾರವಲ್ಲ. ವೇದಗಳ ಕಾಲದಲ್ಲಿಯೇ ಇದು ಆರಂಭವಾಗುತ್ತದೆ. ಇಂತಹ ಚಿತ್ರಗಳನ್ನು ಬಿಡಿಸಲು ಸಾಕಷ್ಟು ಮಾರ್ಗದರ್ಶನಗಳು ಶ್ಲೋಕರೂಪದಲ್ಲಿ ದೊರಕುತ್ತದೆ. ಇದು ಕೇವಲ ಭಾರತೀಯ ಪುರಾಣಚರಿತ್ರೆಯಲ್ಲಿ ಮಾತ್ರವಲ್ಲ. ಫ್ರಾನ್ಸ್, ಆಸ್ಟ್ರೇಲಿಯಾ,ಸ್ಪೇನ್,ಕ್ಯಾಲಿಫೋರ್ನಿಯಾ,ಬ್ರೆಜಿಲ್ ಮತ್ತಿತರ ದೇಶಗಳ ಚಾರಿತ್ರಿಕ ಇತಿಹಾಸದಲ್ಲಿ ಕಂಡುಬರುತ್ತದೆ. ಚಿತ್ರಲಿಪಿಯಲ್ಲಿ ಯಾವುದೇ ವಸ್ತುಗಳ ಬಗ್ಗೆ ಭಾವನೆಯನ್ನು ಅಭಿವ್ಯಕ್ತಮಾಡಲು ಅವುಗಳ ಚಿತ್ರಬಿಡಿಸಲಾಗುತ್ತದೆ. ಉದಾಹರಣೆಗೆ ಸೂರ್ಯನ ಕುರಿತು ಅಭಿವ್ಯಕ್ತಿಮಾಡಲು ಗೋಲಾಕಾರದಚಿತ್ರ ಬಿಡಿಸಲಾಗುತ್ತದೆ. ಹಾಗೆಯೆ ವಿವಿಧಪ್ರಾಣಿಗಳ ಬಗ್ಗೆ ಆಯಾಪ್ರಾಣಿಯನ್ನುಹೋಲುವ ಚಿತ್ರಬಿಡಿಸಲಾಗುತ್ತದೆ ಭೌಗೋಳಿಕ ನಕ್ಷೆಗಳಲ್ಲಿ ಚಿತ್ರಗಳನ್ನು ಕಾಣಬಹುದಾಗಿದೆ, ಪ್ರಾಚೀನ ಮಂದಿರ, ಮಸೀದಿ,ಚರ್ಚಗಳಲ್ಲಿ ಪಂಚಾಂಗಗಳಲ್ಲಿ ಗೃಹಗಳ, ಪಶುಗಳಚಿತ್ರಗಳನ್ನು ಕಾಣಬಹುದು. ವಿಶ್ವದ ಎಲ್ಲಕಡೆ ವ್ಯಾಪಿಸಿರುವ ಚಿತ್ರಲಿಪಿಯನ್ನು ಅಂತರಾಷ್ಟ್ರೀಯ ಲಿಪಿ ಎಂದೂ ಕರೆಯುತ್ತಾರೆ. ಏಕೆಂದರೆ ಚಿತ್ರಲಿಪಿಯು ಚಿತ್ರಮೂಲಕ ಅಥವಾ ವಸ್ತುವನ್ನು ನೋಡಿ ಬಿಡಿಸುವ ಬರೆಯುವ ಲಿಪಿಯಾದದ್ದರಿಂದ ಪ್ರಪಂಚದ ಎಲ್ಲ ಕಡೆಗಳಲ್ಲಿ ಏಕರೀತಿಯಲ್ಲಿ ಅರ್ಥವಾಗುವಂತಹದ್ದಾಗಿದೆ. ಏಕರೂಪವನ್ನು ಹೊಂದಿರುತ್ತದೆ. ವಿಶ್ವದ ಯಾವುದೇ ವ್ಯಕ್ತಿಕೂಡ ಪ್ರತಿಕ್ರಿಯಿಸುವ ಬಗೆ ಒಂದೆ ತೆರನಾಗಿರುತ್ತದೆ. ಉದಾಹರಣೆಗೆ ಒಂದು ನಾಯಿಯ ಚಿತ್ರವಿದೆ ಎಂದಿಟ್ಟುಕೊಳ್ಳೋಣ. ಈ ಚಿತ್ರವನ್ನು ನೋಡಿಕೊಂಡು ಪ್ರಪಂಚದ ಯವುದೇ ಭಾಷಿಗನಾದರೂ ಅರ್ಥಮಾಡಿಕೊಳ್ಳುವ ಪರಿ ಒಂದೇರೀತಿಯಾದುದು. ಆದ್ದರಿಂದ ಚಿತ್ರಲಿಪಿಯನ್ನು ಅಂತರಾಷ್ಟ್ರೀಯ ಲಿಪಿ ಎಂದು ಕರೆಯಲಾಗಿದೆ.

**ಚಿತ್ರಲಿಪಿಯ ಕೆಲವುವಿಶಿಷ್ಟಾಂಶಗಳು / ತೊಡಕುಗಳು.**

1 ವ್ಯಕ್ತಿವಾಚಕ ಶಬ್ದಗಳನ್ನು ಪ್ರಕಟಪಡಿಸಲು ಇಲ್ಲಿ ಸಾಮಗ್ರಿಗಳಿಲ್ಲ. ಈಗ ಸುಮಾರು 120ಕೋಟಿ ಜನಸಂಖ್ಯೆಯಿದ್ದರೆ ಅವುಗಳನ್ನೆಲ್ಲ ಚಿತ್ರಲಿಪಿಯಿಂದ ತೋರಿಸಲು ಸಾಧ್ಯವಿಲ್ಲ.

2 ವಸ್ತುಗಳ ಸ್ಥೂಲರೂಪದ ಪರಿಚಯಗಳನ್ನು ಮಡಬಹುದೇ ಹೊರತು ಅವುಗಳ ಹಾವಭಾವಗಳನ್ನು ಪರಿಚಯಮಾಡಿಕೊಡಲು ಅಸಾಧ್ಯವಾಗಿದೆ. ಉದಾಹರಣೆಗೆ ಮಾನವನು ವಿಭಿನ್ನತೆರನಾದ ಭಾವನೆಗಳನ್ನು ಹೊಂದಿರುತ್ತಾನೆ ಅವುಗಳನ್ನು ವ್ಯಕ್ತಪಡಿಸಲು ಚಿತ್ರಲಿಪಿಯಿಂದ ಸಾಧ್ಯವಿಲ್ಲ.

3 ಒಂದು ವಿಚಾರವನ್ನು ಶೀಘ್ರಗತಿಯಲ್ಲಿ ಇನ್ನೊಬ್ಬರಿಗೆ ಹೇಳಬೇಕೆಂದಿದ್ದಲ್ಲಿ ಅದನ್ನು ತ್ವರಿತವಾಗಿ ಪ್ರಕಟಿಸಲು ಸಾಧ್ಯವಿಲ್ಲ.

3 ಎಲ್ಲರೂ ಏಕರೀತಿಯಲ್ಲಿ ಚಿತ್ರಬಿಡಿಸುವ ಕೌಶಲವನ್ನು ಹೊಂದಿರುವುದಿಲ್ಲ. ಸರಿಯಾಗಿ ಅವುಗಳನ್ನು ಬಿಡಿಸಲು ಬಾರದಿದ್ದಾಗ ಅವುಗಳಿಂದ ನಮಗೆ ಅರ್ಥವಾಗುವುದಾದರೂ ಏನು? ಅದೊಂದು ವ್ಯರ್ಥಚಿತ್ರವಾಗುತ್ತದೆ. ಇತ್ಯಾದಿ. ಚಿತ್ರಲಿಪಿಯಲ್ಲಿ ಬಳಸುತ್ತಿದ್ದ ಕೆಲವು ಚಿತ್ರಗಳ ಕ್ರೋಡೀಕರಣ ಈ ಕೆಳಗಿನ ಚಿತ್ರದಮೂಲಕ ಗಮನಿಸಬಹುದು.

66



### 4.12 ಬ್ರಾಹ್ಮೀ ಲಿಪಿ.

ಪ್ರಾಚೀನ ಭಾರತದಲ್ಲಿ ಮೂರು ಲಿಪಿಗಳು ಚಾಲ್ತಿಯಲ್ಲಿದ್ದವು. ಅವುಗಳೆಂದರೆ ಸಿಂಧೂ ಲಿಪಿ ಬ್ರಾಹ್ಮಿಲಿಪಿ ಇನ್ನೊಂದು ಖರೋಷ್ಠೀ ಲಿಪಿ. ಸಿಂಧುಲಿಪಿಯನ್ನು ಈತನಕ ಓದಲು

---

[66] ,ಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಪ್ರಾಚೀನ ಸಂಸ್ಕೃತದ ಅರ್ಥವಿವರಣೆಯ ಭಾಗ,ಪುಟ ಸಂಖ್ಯೆ 208 ಚಿತ್ರ1.

ಸಾಧ್ಯವಾಗಿಲ್ಲ.[67] ಖರೋಷ್ಠೀ ಲಿಪಿಯು ಅರಮೇಯಿಕ್‌ಲಿಪಿಯಿಂದ ಉಟ್ಟಿದೆ ಎಂಬುದು ಬಹುವಿದ್ವಾಂಸರ ಅಭಿಪ್ರಾಯ[68]. ಖರೋಷ್ಠೀಲಿಪಿಯ ಲಕ್ಷಣವೆಂದರೆ ಬಲಗಡೆಯಿಂದ ಎಡಗಡೆಗೆ ಬರೆಯುವುದು. ಬ್ರಾಹ್ಮೀ ಲಿಪಿಯ ಉದ್ಗಮದಬಗ್ಗೆ ಅನೇಕ ವಾದವಿವಾದಗಳಿವೆ. ಬ್ರಾಹ್ಮೀಲಿಪಿಯ ಮುಖ್ಯಲಕ್ಷಣವೆಂದರೆ ಎಡಗಡೆಯಿಂದ ಬಲಗಡೆಗೆ ಬರೆಯುವುದು. ಪ್ರಾಚೀನ ಭಾರತದಲ್ಲಿ ಬ್ರಾಹ್ಮೀಲಿಪಿಯು ಬಹುತೇಕ ಎಲ್ಲಪ್ರಾಂತ್ಯಗಳನ್ನು ವ್ಯಾಪಿಸಿಕೊಂಡಿತ್ತು. ಇಂದಿನ ಆಧುನಿಕ ಭಾರತೀಯ ಭಾಷೆಗಳು ಬ್ರಾಹ್ಮಿಲಿಯಿಂದಲೇ ವಿಕಸನವಾವುಗಳಾಗಿವೆ. ಆದರೆ ಇಂದು ಅವು ಸಂಪೂರ್ಣ ವಿಭಿನ್ನ ಮೂಲದಿಂದ ಬಂದೆವೆಂಬಂತೆ ವ್ಯತ್ಯಾಸ ಹೊಂದಿವೆ. ಉದಾಹರಣೆಗೆ ಕನ್ನಡ, ತಮಿಳು, ಸಂಸ್ಕೃತ, ಮರಾಠಿ, ಗುಜರಾತಿ, ಬಂಗಾಳಿ, ಪಂಜಾಬಿ ಮತ್ತಿತರ ಭಾಷೆಗಳ ಲಿಪಿಗಳು ಬ್ರಾಹ್ಮೀ ಲಿಪಿಯಿಂದಲೇ ವಿಕಸಿತವಾದವುಗಳು. ಬ್ರಾಹ್ಮೀಲಿಪಿಯನ್ನು ಕ್ರಿ.ಶ. 1836ರಲ್ಲಿ ಲ್ಯಾಸೆನ್ ಎಂಬ ವಿದ್ವಾಂಸ ಮೊಟ್ಟಮೊದಲು ಓದಿದನು.[69] ಆದರೆ ಅವುಗಳ ಲಿಪಿಯನ್ನು ಕಂಡರೆ ವಿಭಿನ್ನ ಸ್ವರೂಪವನ್ನು ತಿಳಿಯಬಹುದಾಗಿದೆ. ಈ ಕೆಳಗಿನ ಚಿತ್ರದಲ್ಲಿ ಬ್ರಾಹ್ಮೀಲಿಪಿ ಚಿತ್ರಪಟವನ್ನು ವೀಕ್ಷಿಸಬಹುದಾಗಿದೆ. ಬ್ರಾಹ್ಮಿ ಲಿಪಿಯ ವರ್ಣಗಳ ಕುರಿತು ಮುಂದೆ ವರ್ಣಗಳ ವಿಕಾಸ ಮತ್ತು ಚರಿತ್ರೆ ಶೀರ್ಷಿಕೆಯಲ್ಲಿ ವಿವರವಾಗಿ ಚರ್ಚಿಸಲಾಗಿದೆ.

---

[67] ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ ಮೈಸೂರು,ಪುಟ 16 ಎರಡನೇ ಪ್ಯಾರಾ ಮೊದಲಸಾಲಿನಲ್ಲಿ.

[68] "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಡಾ. ಎಂ. ಚಿದಾನಂದ ಮೂರ್ತಿ, ಪ್ರಕಾಶಕರು : ನಿರ್ದೇಶಕರು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು. 1979, ಎರಡನೇ ಮುದ್ರಣ, ಪುಟ ಸಂಖ್ಯೆ 16, ಐದು ಮತ್ತು ಆರನೇ ಸಾಲು.

[69] ಅದೇ.



[70]

### 4.13 ಧ್ವನಿಗಳ ಸಂಖ್ಯೆ

ಪ್ರಾಚೀನ ವೈದಿಕಸಂಸ್ಕೃತ ಭಾಷೆಯಲ್ಲಿ ಮುಖವಿವರದಲ್ಲಿ ತಾಲುವಿನಸ್ಥಾನದ ದೃಷ್ಟಿಯಿಂದ ಧ್ವನಿಗಳಸ್ಥಾನವು ನಿರ್ದೇಶಿಸಲ್ಪಟ್ಟಿದೆ. ತಾಲು ಎಂದರೆ ವಿಸ್ತೃತವಾದ ಅರ್ಥದಲ್ಲಿ ಮುಖವಿವರದಲ್ಲಿಯ ಧ್ವನ್ಯುತ್ಪಾದನಾ ಅಂಗಗಳೆಂದು ಅರ್ಥ. ಪ್ರಮುಖವಾದ ಧ್ವನ್ಯುತ್ಪಾದನಾಸ್ಥಾನಗಳನ್ನು ಹೆಸರಿಸಿದ್ದಾರೆ. ಕಂಠ, ತಾಲು,ಮೂರ್ಧನ್ಯ, ದಂತ್ಯ, ಓಷ್ಠ ಗಳು ಪ್ರಧಾನಧ್ವನ್ಯುತ್ಪಾದನಾ ಸ್ಥಾನಗಳಾಗಿವೆ. ಆಯಾ ಸ್ಥಾನಗಳಲ್ಲಿ ಹುಟ್ಟುವ ಧ್ವನಿಗಳನ್ನು ಅದರ ಹೆಸರಿನಿಂದಲೇ ಕರೆಯುತ್ತಾರೆ. ಕಂಠಸ್ಥಾನದಲ್ಲಿ ಹುಟ್ಟುವ ಧ್ವನಿಗಳನ್ನು ಕಂಠ್ಯಧ್ವನಿಗಳು, ತಾಲವ್ಯಸ್ಥಾನದಲ್ಲಿ ಹುಟ್ಟುವ ಧ್ವನಿಗಳನ್ನು ತಾಲವ್ಯ ಧ್ವನಿಗಳು, ಮೂರ್ಧನ್ಯ ಸ್ಥಾನದಲ್ಲಿ ಹುಟ್ಟುವ ಧ್ವನಿಗಳನ್ನು ಮೂರ್ಧನ್ಯ ಧ್ವನಿಗಳು, ದಂತ್ಯಸ್ಥಾನದಲ್ಲಿ ಹುಟ್ಟುವ ಧ್ವನಿಗಳನ್ನು ದಂತ್ಯ ಧ್ವನಿಗಳು, ಮತ್ತು ಓಷ್ಠಸ್ಥಾನದಲ್ಲಿ ಹುಟ್ಟುವ ಧ್ವನಿಗಳನ್ನು

[70] ಅಂತರ್ಜಾಲ.ಗೂಗಲ್ ಹುಡುಕಾಟ 'ಬ್ರಾಹ್ಮಿಲಿಪಿ'

ಓಷ್ಠ್ಯಧ್ವನಿಗಳು ಇತ್ಯಾದಿಯಾಗಿ ಕರೆಯುತ್ತಾರೆ. ಪ್ರಾಚೀನ ವೈದಿಕಸಂಸ್ಕೃತದಲ್ಲಿ ವರ್ಗೀಯವ್ಯಂಜನಗಳನ್ನು ವರ್ಣಸಮಾಮ್ನಾಯದಲ್ಲಿ ಸೇರಿಸಲಾಗಿತ್ತು. ಕವರ್ಗ,ಚವರ್ಗ, ಟವರ್ಗ,ತವರ್ಗ,ಪವರ್ಗ ಒಟ್ಟಿಗೆ 25 ವರ್ಣಗಳನ್ನು ವರ್ಣಮಾಲೆಯಲ್ಲಿ ಬಳಸಲಾಗಿತ್ತು. ಈ ನಾಲ್ಕು ವರ್ಗಗಳಲ್ಲಿಯ ವಿಶೇಷತೆಯೆಂದರೆ ಕವರ್ಗ,ಚವರ್ಗ, ಟವರ್ಗ,ತವರ್ಗಗಳನ್ನು ಉಚ್ಚಾರಮಾಡುವಾಗ ಜಿಹ್ವೆಯುಪ್ರಧಾನ ಪಾತ್ರವಹಿಸಿದರೆ ಪವರ್ಗ ಉಚ್ಚಾರಣೆಯಲ್ಲಿ ಇದರ ಪಾತ್ರಗೌಣವಾದುದು. ಕನ್ನಡ ಭಾಷೆಯು ಸಂಸ್ಕೃತದ ಮೂಲ ಅಥವಾ ಪರಿವಾರವನ್ನು ಹೊಂದಿಲ್ಲದಿದ್ದರೂ ಸಂಸ್ಕೃತದ ಪ್ರಭಾವಕ್ಕೆ ಒಳಗಾಗಿ ಪ್ರಾಚೀನಕಾಲದ ಕನ್ನಡಭಾಷೆಯು ವರ್ಗೀಯವ್ಯಂಜನಗಳ ಬಳಕೆಯನ್ನು ರೂಢಿಸಿಕೊಂಡೇ ಬಂದಿದೆ. ಎಲ್ಲ ವರ್ಗೀಯ ವ್ಯಂಜನಗಳನ್ನು ಇಂದು ಕನ್ನಡಭಾಷೆಯಲ್ಲಿ ಬಳಸುತ್ತಿಲ್ಲ ಅದು ಗ್ರಾಂಥಿಕಭಾಷೆಗೆ ಮಾತ್ರ ಸೀಮಿತವಾದುದು. ವರ್ಗೀಯವ್ಯಂಜನಗಳಲ್ಲಿಯ ಮಹಾಪ್ರಾಣಾಕ್ಷರಗಳು ಕನ್ನಡ ಭಾಷೆಯಲ್ಲಿ ಅದರಲ್ಲೂ ಮೌಖಿಕವಾಗಿ ನಾವು ಬಳಸುವಾಗ ಅಲ್ಪಪ್ರಾಣದಂತೆ ಬಳಸುತ್ತಿದ್ದೇವೆ. ವರ್ಗೀಯ ವ್ಯಂಜನಗಳಲ್ಲಿಯ ಅನುನಾಸಿಕ ಅಕ್ಷರಗಳಲ್ಲಿ ಙ,ಞ ಗಳನ್ನು ಬಹುತೇಕವಾಗಿ ಬಳಸುವುದನ್ನು ನಿಲ್ಲಿಸಿದ್ದೇವೆ. ಕೆಲವುಕಡೆಯಲ್ಲಿ ಇವುಗಳಬಳಕೆಯಿದ್ದರೂ ತುಂಬ ವಿರಳವಾದುದು. ಕೇವಲ ಗ್ರಾಂಥಿಕಭಾಷೆಗೆ ಮಾತ್ರ ಸೀಮಿತವಾಗಿದೆ. ಮೇಲಿನ ವರ್ಗಗಳನ್ನು(ಕವರ್ಗ ಮತ್ತಿತರ ವರ್ಗಗಳು) ಸ್ಪರ್ಶವ್ಯಂಜನಗಳೆಂದು ಕರೆಯುತ್ತಾರೆ. ಇವುಗಳ ವಿವರವಾದ ಅಧ್ಯಯನವನ್ನು ಮುಂದಿನ ಅಧ್ಯಾಯದಲ್ಲಿ ಮಾಡಲಾಗಿದೆ. ಪ್ರತಿಯೊಂದು ಸ್ಪರ್ಶವರ್ಗಕ್ಕೆ ಒಂದೊಂದು ಅಂತಃಸ್ಥ ವರ್ಣಗಳನ್ನು ಹೇಳುವ ಪರಂಪರೆ ಪ್ರಾಚೀನ ಸಂಸ್ಕೃತದಲ್ಲಿ ಕಂಡುಬರುತ್ತದೆ. ಸ್ಪರ್ಶವರ್ಣಗಳನ್ನು ಉಚ್ಚಾರ ಮಾಡುವಾಗ ಬಳಸುವ ಕರಣ ಮತ್ತು ಸ್ಥಾನಗಳ ರೀತಿಗಿಂತ ಭಿನ್ನವಾಗಿ ಕರಣ ಮತ್ತು ಸ್ಥಾನಗಳು ಬಳಕೆಯಾಗುತ್ತವೆ. ಇವುಗಳನ್ನು ಈಷತ್ಸ್ಪರ್ಶಗಳೆಂದು ಕರೆಯುತ್ತಾರೆ. ಚವರ್ಗದ ಅಂತಃಸ್ಥ 'ಯ' ವರ್ಣ, ಟವರ್ಗದ ಅಂತಃಸ್ಥ 'ರ' ವರ್ಣ, ತವರ್ಗದ ಅಂತಃಸ್ಥ 'ಲ' ವರ್ಣ, ಪವರ್ಗದ ಅಂತಃಸ್ಥ 'ವ' ವರ್ಣ, ಹೀಗೆ ಯ,ರ,ಲ, ಮತ್ತು ವ ವರ್ಣಗಳನ್ನು ಅಂತಃಸ್ಥವರ್ಣಗಳನ್ನಾಗಿ ಹೇಳಿದ್ದಾರೆ, ಕವರ್ಗದ ಅಂತಃಸ್ಥವರ್ಣ ಯಾವುದು ಎನ್ನುವುದು ಪ್ರಶ್ನೆ. ಬಹುಶಃ ಈ ವಿಷಯದ ಕುರಿತು ಚರ್ಚೆಗಳು ನಡೆದಿರುವುದು ಕಂಡುಬರುತ್ತದೆ. ಊಷ್ಮ ವರ್ಣವಾದ 'ಹ' ವರ್ಣವನ್ನು 'ಕ'ವರ್ಗದ

ಅಂತಃಸ್ಥವರ್ಣವನ್ನಾಗಿ ವಿಶ್ಲೇಷಿಸಿರುವುದು ಕಂಡುಬರುತ್ತದೆ. ಉಚ್ಚಾರಣೆಯ ಸ್ಥಾನದದೃಷ್ಟಿಯಿಂದ ಇದನ್ನು ಹೇಳಿದ್ದಾರೆ. ಪಾಣಿನಿಯು 'ಅಕುಹ ವಿಸರ್ಜನೀಯಾನಾಂಕಂಠಃ'[71] ಇತ್ಯಾದಿಯಾಗಿ ವರ್ಣಗಳ ಧ್ವನ್ಯುತ್ಪಾದನಾ ಸ್ಥಾನಗಳನ್ನು ಹೇಳಿದ್ದಾನೆ. ಅದರ ಆಧಾರದ ಮೇಲೆ ಕವರ್ಗದ ಜೊತೆಗೆ ಹ ವರ್ಣದ ಧ್ವನ್ಯುತ್ಪಾದನಾ ಸಾದೃಶ್ಯವನ್ನು ಹೇಳಿರುವುದಿಂದ 'ಹ' ವರ್ಣವನ್ನು 'ಕ' ವರ್ಗದ ಅಂತಃಸ್ಥವರ್ಣವನ್ನಾಗಿ ಸಾದರಪಡಿಸಿದ್ದಾರೆ. ಹೀಗೆ ಹ,ಯ,ರ,ಲ,ವ ಐದು ಅಂತಸ್ಥವರ್ಣಗಳನ್ನು ಪ್ರಾಚೀನ ಸಂಸ್ಕೃತವಾಙ್ಮಯದಲ್ಲಿ ಹೇಳಿದ್ದಾರೆ. ಪ್ರತಿಯೊಂದು ಅಂತಃಸ್ಥವರ್ಣ ವರ್ಣಗಳಿಗೆ ಮೂಲದಲ್ಲಿ ಒಂದೊಂದು ಸ್ವರಗಳ ಉತ್ಪತ್ತಿಪ್ರಕ್ರಿಯೆ ಕುರಿತು ಹೇಳಲಾಗಿದೆ. 'ಹ' ವರ್ಣವು 'ಅ' ವರ್ಣದಿಂದ, 'ಯ' ವರ್ಣವು 'ಇ' ವರ್ಣದಿಂದ, 'ವ' ವರ್ಣವು 'ಉ' ವರ್ಣದಿಂದ, 'ರ' ವರ್ಣವು 'ಋ' ವರ್ಣದಿಂದ, 'ಲ' ವರ್ಣವು 'ಲೃ' ವರ್ಣದಿಂದ ವಿಕಸಿತವಾಗಿವೆ. ಐದು ಅಂತಃಸ್ಥವರ್ಣಗಳ ಮತ್ತು ಐದು ಸ್ವರಗಳ ಉಚ್ಚಾರಣೆಯಲ್ಲಿ ಪರಸ್ಪರ ಸಾದೃಶ್ಯವನ್ನು ಕಾಣಬಹುದಾಗಿದೆ. ಕನ್ನಡದ ಪ್ರಾಚೀನ ವ್ಯಾಕರಣದಲ್ಲಿ ಅಂತಸ್ಥವರ್ಣಗಳಲ್ಲಿ ಯ ರ ಲ ವ ವರ್ಣಗಳಿಗೆ ಮಾತ್ರ ಸ್ಥಾನ ಕಲ್ಪಿಸಲಾಗಿದೆ. ಕೇಶಿರಾಜನು ಕನ್ನಡ ಶುದ್ದಗೆ ಬಗ್ಗೆ ವಿವರಿಸುವಾಗ ಈ ಮೇಲಿನ ಎಲ್ಲ ಅಂತಃಸ್ಥವರ್ಣಗಳನ್ನು ಪ್ರಸ್ತಾಪಿಸಿದ್ದಾನೆ. ಸಂಸ್ಕೃತ ಭಾಷೆಯಂತೆ ಪರಸ್ಪರ ಇವುಗಳನ್ನು ಮೂಲಸ್ವರದ ಜೊತೆಗೆ ಹೋಲಿಸಿ, ವಿಮರ್ಶಿಸಿದ ವಿವರಣೆಗಳು ಕಂಡುಬರದಿದ್ದರೂ ಅಂತಃಸ್ಥವರ್ಣಗಳಿಂದ ಮೂಲಸ್ವರದ ಉತ್ಪತ್ತಿವಿಚಾರಕ್ಕೆ ಸಂಬಂಧಿಸಿದಂತೆ ಲೃ, ಋ ವರ್ಣಗಳು ಕನ್ನಡ ಶುದ್ಧಗೆಯಲ್ಲಿ ಸ್ಥಾನ ಪಡೆಯುವುದಿಲ್ಲ ಎಂಬುದನ್ನು ಕೇಶಿರಾಜ ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ.ಅಂತಃಸ್ಥ ವರ್ಣಗಳ ತರುವಾಯ ಅಂತಃಸ್ಥವರ್ಗಸ್ವರೂಪವನ್ನು ಹೋಲುವ ಇನ್ನೊಂದು ಗುಂಪನ್ನು ಪ್ರಾಚೀನ ಸಂಸ್ಕೃತವಾಙ್ಮಯದಲ್ಲಿ ಕಾಣಬಹುದಾಗಿದೆ. ಅವುಗಳನ್ನು ಸಹ ವರ್ಗೀಯವ್ಯಂಜನಗಳ ಗುಂಪಿಗೆ ಪರಸ್ಪರ ಹೋಲಿಸಿರುವುದನ್ನು ಕಾಣಬಹುದಾಗಿದೆ. 'ಕ' ವರ್ಗಕ್ಕೆ 'ಹ' ಕಾರವೂ,

---

[71] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 24. ನಾಲ್ಕನೇ ಸಾಲು.

'ಚ' ವರ್ಗಕ್ಕೆ 'ಶ' ಕಾರವೂ, 'ಟ' ವರ್ಗಕ್ಕೆ 'ಷ' ಕಾರವೂ, 'ತ' ವರ್ಗಕ್ಕೆ ಸ ಕಾರವೂ, ವಿವರಿಸಲ್ಪಟ್ಟಿದೆ. ಊಷ್ಮ ವರ್ಣಗಳ ಉಚ್ಚಾರಣೆಯಲ್ಲಿ ಅಂತಃಸ್ಥ ವರ್ಣಗಳಿಗಿಂತ ಕಾರಣ ಮತ್ತು ಸ್ಥಾನಗಳ ನಡುವಿನ ವಿವೃತತೆಯು ಅಧಿಕವಾಗಿ ಕಂಡುಬರುತ್ತದೆ. ಹವೆಯು ತೀವ್ರಗತಿಯಲ್ಲಿ ಪ್ರಸಾರವಾಗುವುದು ಕಂಡುಬರುತ್ತದೆ. ವೈಷ್ಣವ ಮತ್ತು ಶೈವ ಶಾಕ್ತ ತಂತ್ರದಲ್ಲಿ ಶ,ಷ,ಸ,ಹ ಜೊತೆಗೆ ಕ್ಷ[72] ವರ್ಣವನ್ನು ಸೇರಿಸಿ 5 ಊಷ್ಮ ವರ್ಣಗಳನ್ನು ಹೇಳಲಾಗಿದೆ. ವಾಸ್ತವಿಕವಾಗಿ 'ಕ್ಷ' ವರ್ಣವು 'ಕ' ಮತ್ತು 'ಷ'ವರ್ಣಗಳ ಸಂಯೋಗಜನ್ಯವಾದುದಲ್ಲ. ಸಂಯೋಗವರ್ಣವಾಗಿದೆ. ಸಂಯೋಗಜನ್ಯವೆಂದರೆ ಒಂದು ಪ್ರತ್ಯೇಕವರ್ಣದ ಸ್ಥಾನವನ್ನು ಹೊಂದುವ ಸಾಮರ್ಥ್ಯ ಇರುವಂತಹ ವರ್ಣವಾಗಿದೆ. ಸಂಯೋಗವರ್ಣವೆಂದರೆ ಪ್ರಾಯೋಗಿಕವಾಗಿ ಭಾಷೆಯಲ್ಲಿ ಬಳಕೆಯಾಗುವಾಗ ಎರಡು ಅಥವಾ ಎರಡಕ್ಕಿಂತ ಹೆಚ್ಚು ಅಕ್ಷರಗಳು ಪರಸ್ಪರವಾಗಿ ಸೇರುವಿಕೆ ಮಾತ್ರ ಇನ್ನಷ್ಟು ಸ್ಪಷ್ಟಪಡಿಸಬೇಕೆಂದರೆ ಸಂಯೋಗ ಜನ್ಯವೆಂದರೆ ಸ್ವತಂತ್ರವರ್ಣಗಳಾದರೆ ಅಥವಾ ಅಸಂಯುಕ್ತಾಕ್ಷರಗಳಾದರೆ, ಸಂಯೋಗವರ್ಣಗಳೆಂದರೆ ಸಂಯುಕ್ತಾಕ್ಷರಗಳೆಂದು ಹೇಳಬಹುದಾಗಿದೆ. ಒಂದುವೇಳೆ 'ಕ್ಷ' ವರ್ಣವನ್ನು ಸಂಯೋಗಜನ್ಯ ಎಂದು ಪರಿಗಣಿಸಿದರೆ ವರ್ಣಮಾಲೆಯಲ್ಲಿ ಒಂದು ಪ್ರತ್ಯೇಕಸ್ಥಾನವನ್ನು ಕೊಡಬೇಕಾಗುತ್ತದೆ, ಸಂಯೋಗವರ್ಣವಾಗಿ ಪರಿಗಣಿಸಿದಾಗ ಅದನ್ನು ವರ್ಣಮಾಲೆಯಲ್ಲಿ ಸೇರಿಸುವ ಅಗತ್ಯತೆಯಿರುವುದಿಲ್ಲ. ಆದ್ದರಿಂದ 'ಕ್ಷ' ವರ್ಣವನ್ನು ಊಷ್ಮ ವರ್ಣಗಳ ಸಾಲಿಗೆ ಸೇರಿಸಿರುವುದು ಸಮಂಜಸವಾದುದಲ್ಲ, ಆಶ್ಚರ್ಯಕರ ಸಂಗತಿಯೆಂದರೆ ಆಂಗ್ಲಭಾಷೆಯ ವರ್ಣಮಾಲೆಯಲ್ಲಿ ಇದರ ಉಚ್ಚಾರಣೆಯನ್ನು ಹೋಲುವ ಒಂದು ವರ್ಣಮಾಲೆಯನ್ನು ಕಾಣಬಹುದಾಗಿದೆ. 'ಛಿ' ವರ್ಣವನ್ನು ಇದಕ್ಕೆ ಸಾಕ್ಷೀಕರಿಸಬಹುದಾಗಿದೆ. ಕನ್ನಡ ಭಾಷೆಯ ಪರಂಪರೆಯಲ್ಲಿ 'ಕ್ಷ' ವನ್ನು ಒಂದು ಸಂಯುಕ್ತವರ್ಣವನ್ನಾಗಿ ಪರಿಗಣಿಸಿರು ವುದು ಕಂಡುಬರತ್ತದೆ.

---

[72] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮೀಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 277 ರಲ್ಲಿ ಒಂದನೇ ಪ್ಯಾರಾ ಆರನೇ ಸಾಲು.

ವೈದಿಕ ಸಾಹಿತ್ಯದಕಾಲದಲ್ಲಿ 'ಳ' ಕಾರವನ್ನು ಒಂದು ವರ್ಣವನ್ನಾಗಿ ಪರಿಗಣಿಸಿರುವುದು ಕಂಡುಬರುತ್ತದೆ. ಕಠಿಣವಾದ ಉಚ್ಚಾರಣೆಯನ್ನು ಹೊಂದಿತ್ತು ಎನ್ನುವುದು ಕಂಡುಬರುತ್ತದೆ. ಇದರ ಉಚ್ಚಾರಣೆಯು ದಂತ್ಯ ಮತ್ತು ಮೂರ್ಧನ್ಯ ಎಂಬ ದ್ವಂದ್ವ ಅಭಿಪ್ರಾಯವಿದೆ. ಉದಾಹರಣೆಗೆ ಋಗ್ವೇದದ ಆರಂಭದ ಮಂತ್ರವನ್ನು ಉದಾಹರಣೆನೀಡಬಹುದಾಗಿದೆ. ಅಗ್ನಿಮೀಳೇ ಪುರೋಹಿತಂ ಎಂದು ಕೆಲವರೂ, ಅಗ್ನಿಮೀಡೇ ಪುರೋಹಿತಂ ಎಂದು ಇನ್ನು ಕೆಲವರೂ ಉಚ್ಚಾರ ಮಡುತ್ತಾರೆ. ಕನ್ನಡ ಪ್ರಾಚೀನ ವ್ಯಾಕರಣಗ್ರಂಥ ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಈ ಕುರಿತು ವ್ಯಾಪಕವಾಗಿ ಚರ್ಚಿಸಿರುವುದು ಕಂಡುಬರುತ್ತದೆ. ಕೇಶಿರಾಜನ ರಳ.ಕುಳ, ಕ್ಷಳ ಕುರಿತಾದವಿವರಣೆಯಿಂದ ಇದರ ಬಗ್ಗೆ ಇನ್ನಷ್ಟು ಮಾಹಿತಿಗಳು ವಿವರಿಸಬಹುದಾಗಿದೆ

ಸಂಸ್ಕೃತವಾಙ್ಮಯದಲ್ಲಿ 'ಯಮ' ವರ್ಣಗಳೆಂದು ಇನ್ನೊಂದು ವರ್ಗವಿರುವುದನ್ನು ಕಾಣಬಹುದಾಗಿದೆ, ಕುಂ,ಖುಂ,ಗುಂ,ಘುಂ ವರ್ಣಗಳನ್ನು 'ಯಮ' ಗಳೆಂದು ಕರೆದಿದ್ದಾರೆ. ವರ್ಗೀಯವ್ಯಂಜನಗಳ ಪ್ರತಿಯೊಂದುವರ್ಗದ ಮೊದಲಿರುವ ನಾಲ್ಕುವರ್ಣಗಳು ಆಯಾವರ್ಗದ ಕೊನೆಯ ವರ್ಣವಾದ ಅನುನಾಸಿಕದೊಂದಿಗೆ ಅಥವಾ ಅದರ ಸಾಮೀಪ್ಯದೊಂದಿಗೆ ಉಚ್ಚರಿತವಾಗುತ್ತದೆ. ಪ್ರತ್ಯೇಕವಾದ ಅನುನಾಸಿಕಕ್ಕಿಂತ ಭಿನ್ನವಾಗಿ ಇದು ಉಚ್ಚಾರವಾಗಲ್ಪಡುತ್ತದೆ. ಭಾಗಶಃ ಅನುನಾಸಿಕ್ಯವು ಈ ವರ್ಣಗಳಲ್ಲಿ ಇರುತ್ತದೆ. ಹಾಗೆ ಲೆಕ್ಕಹಾಕಿದರೆ ವರ್ಗೀಯವ್ಯಂಜನಗಳಲ್ಲಿ ಅನುನಾಸಿಕಗಳನ್ನು ಹೊರತುಪಡಿಸಿ ಉಳಿದ 20ವರ್ಣಗಳಿಗೆ ಒಂದೊಂದು 'ಯಮ' ಗಳನ್ನು ಹೆಸರಿಸಬಹುದಾಗಿದೆ. ಅದರೆ ವ್ಯಾವಹಾರಿಕ ದೃಷ್ಟಿಯಿಂದ ಸಂಕೇತರೂಪವಾಗಿ ನಾಲ್ಕು 'ಯಮ'ಗಳನ್ನು ಹೆಸರಿಸಲಾಗಿದೆ. 'ಕುಂ' ಎಂದರೆ ವರ್ಗೀಯ ವ್ಯಂಜನಗಳ ಪ್ರತಿಯೊಂದು ವರ್ಗದ ಮೊದಲ ವರ್ಣದ 'ಯಮ' ರೂಪದ ವರ್ಣವನ್ನಾಗಿ ವಿವಕ್ಷಿಸಿದ್ದಾರೆ. ಅಂದರೆ ಕ,ಚ,ಟ,ತ,ಪ ಗಳಿಗೆ 'ಕುಂ' ವರ್ಣವನ್ನೂ, 'ಖುಂ' ಎಂದರೆ ಪ್ರತಿಯೊಂದು ವರ್ಗದ ಎರಡನೆ ವರ್ಣದ ಯಮ ರೂಪದ ವರ್ಣವನ್ನಾಗಿ ವಿವಕ್ಷಿಸಿದ್ದಾರೆ. ಅಂದರೆ ಖ,ಛ,ಠ,ಥ,ಫ ಗಳಿಗೆ ಖುಂ ವರ್ಣವನ್ನೂ, ಗುಂ ಎಂದರೆ ಪ್ರತಿಯೊಂದು ವರ್ಗದ ಮೂರನೆ ವರ್ಣದ 'ಯಮ' ರೂಪದ ವರ್ಣವನ್ನಾಗಿ ವಿವಕ್ಷಿಸಿದ್ದಾರೆ. ಅಂದರೆ ಗ.ಜ.ಡ.ದ.ಬ ಗಳಿಗೆ ಗುಂ ವರ್ಣವನ್ನು, ಅದೇರೀತಿ 'ಘುಂ' ಎಂದರೆ ಪ್ರತಿಯೊಂದು ವರ್ಗದ ನಾಲ್ಕನೆ ವರ್ಣದ

'ಯಮ' ರೂಪದ ವರ್ಣವನ್ನಾಗಿ ವಿವಕ್ಷಿಸಿದ್ದಾರೆ. ಅಂದರೆ ಘ,ಝ,ಢ,ಧ,ಭ ಗಳಿಗೆ 'ಘುಂ' ವರ್ಣವನ್ನು ಯಮಗಳನ್ನಾಗಿ ವಿವಕ್ಷೆಮಾಡಿದ್ದಾರೆ. ವರ್ಗೀಯ ವ್ಯಂಜನಗಳ ಅಂತಿಮ ಅಕ್ಷರವು ಸಂಪೂರ್ಣ ಅನುನಾಸಿಕವಾಗಿದ್ದರೆ ಯಮಗಳು ಭಾಗಶಃ ಅನುನಾಸಿಕದ ಕೆಲಸವನ್ನು ಮಾಡುತ್ತದೆ. ಯಮಗಳು ಪ್ರತ್ಯೇಕ ವಾದ ಸ್ವತಂತ್ರ ಅಸ್ತಿತ್ವವನ್ನು ಹೊಂದಿರದ ಕಾರಣ ಇವುಗಳನ್ನು ವರ್ಣಮಾಲೆಯ ಸಂಖ್ಯಾ ಲೆಕ್ಕಾಚಾರದಲ್ಲಿ ಸೇರಿಸಿರುವುದಿಲ್ಲ.

ಕೊನೆಯದಾಗಿ ಅಯೋಗವಾಹಗಳನ್ನು ಒಂದು ವರ್ಗವಾಗಿ ವಿಂಗಡಿಸಲಾಗಿದೆ. 'ಕ' ವರ್ಗಕ್ಕೆ ವಿಸರ್ಗ ಮತ್ತು ಜಿಹ್ವಾಮೂಲೀಯವನ್ನು ಅಯೋಗವಾಹವನ್ನಾಗಿಯೂ, ಪ ವರ್ಗಕ್ಕೆ ಉಪಧ್ಮಾನೀಯವನ್ನು ಮತ್ತು ಅನುಸ್ವಾರವನ್ನು ಅಯೋಗವಾಹವನ್ನಾಗಿಯೂ ಹೇಳಿರುವುದು ಕಂಡು ಬರುತ್ತದೆ.

ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಕನ್ನಡಭಾಷೆಯಲ್ಲಿರುವ ಐದು ರೀತಿಯ ವರ್ಣಗಳನ್ನು ಹೆಸರಿಸಿದ್ದಾನೆ. ಈ ಕೆಳಗಿನ ಪದ್ಯದ ಮೂಲಕಸ್ಪಷ್ಟೀಕರಿಸಬಹುದಾಗಿದೆ.

ಕವಿಗಳ್ ಸ್ವರದಿಂ ವರ್ಗದಿಂ
ನವರ್ಗದಿಂ ಯೋಗವಾಹದಿಂ ದೇಶಿಯೊಳು
ದ್ಭವಮಪ್ಪ ವರ್ಣದಿಂ ಪಂ
ಚವಿಧಂ ತಾನೆಂದು ತಿಳಿಪುವರ್ ಶುದ್ಧಗೆಯಂ[73]

ಸ್ವರಗಳು, ವರ್ಗೀಯವ್ಯಂಜನಗಳು,ಅವರ್ಗೀಯವ್ಯಂಜನಗಳು, ದೇಶೀಯವರ್ಣಗಳು ಹಾಗು ಯೋಗವಾಹಗಳು ಎಂದು ಐದುತೆರನಾಗಿ ವರ್ಣಗಳನ್ನು ವಿಭಾಗಿಸಿದ್ದಾನೆ.

ಈ ಮೇಲಿನ ಎರಡೂ ರೀತಿಯ ಅಂದರೆ ಸಂಸ್ಕೃತ ಮತ್ತು ಕನ್ನಡ ಪರಂಪರೆಯನ್ನು ಗಮನಿಸಿದಾಗ ಕನ್ನಡದಲ್ಲಿ ದೇಶೀಯತೆಯ ಆಧಾರದ ಮೇಲೆ ವರ್ಣಗಳನ್ನು ವರ್ಣಮಾಲೆಗೆ ಸೇರಿಸಿರುವುದು ಕಂಡುಬರುತ್ತದೆ. ಸಂಸ್ಕೃತದಲ್ಲಿ ಹೇಳಿಲ್ಲದ

---

[73] ಕೇಶಿರಾಜದರ್ಪಣ', ವ್ಯಾಖ್ಯಾನ: ಪ್ರೊ। ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಸಂ. ಡಾ. ಪಾದೇಕಲ್ಲು ವಿಷ್ಣುಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ 1999 ಉಡುಪಿ, ಪೀಠಿಕಾ ಭಾಗ ಸೂತ್ರ 41 ಪುಟ ಸಂಖ್ಯೆ : 82

ವರ್ಣಗಳನ್ನು ಮತ್ತು ಕನ್ನಡ ಭಾಷೆಯಲ್ಲಿ ಮಾತ್ರ ವಿಶಿಷ್ಟವಾಗಿರುವ ವರ್ಣಗಳನ್ನು ಕೇಶಿರಾಜನು ಪ್ರಸ್ತಾಪಿಸಿದ್ದಾನೆ.

# ಅಧ್ಯಾಯ 5 : ವರ್ಣ

## 5.1 ಅರ್ಥ

ಯಾವುದೇ ಭಾಷೆಯಿರಬಹುದು ಅದರಮೂಲ ಅಥವಾ ಆಯಾಭಾಷೆಯ ದ್ಯೋತಕ ಚಿಹ್ನೆಗಳನ್ನು 'ವರ್ಣ' ಎಂದು ಕರೆಯಲಾಗುತ್ತದೆ. ಇದೊಂದು ಸಂಕ್ಷಿಪ್ತ ಧ್ವನಿಸ್ವರೂಪ ವಾಗಿದೆ. ಇದನ್ನು ವಿಭಜಿಸಲು ಸಾಧ್ಯವಿಲ್ಲ ಆದ್ದರಿಂದ ಅದನ್ನು ಆಖಂಡ ಅಥವಾ ಅಕ್ಷರ ಎಂದೂ ಸಂಬೋಧಿಸುವುದುಂಟು. ವರ್ಣದಮೂಲ ಅಥವಾ 'ರಂಗ' ಎಂದು. 'ರಂಗ'ದಿಂದ ಪರಿವರ್ತನವಾಗಿ ಇದು 'ಅಕ್ಷರ' ಎಂಬ ಸಂಜ್ಞೆಯನ್ನು ಪಡೆಯುತ್ತದೆ, ರಂಗದಿಂದ ಹೇಗೆ ಪರಿವರ್ತನೆಯಾಯಿತು ಎಂಬುದು ತಿಳಿಯಲಾರದ ವಿಷಯ ಅದರ ಪರಿಣಾಮ ಮಾತ್ರ ಗೋಚರವಾಗುತ್ತದೆ, ತಂತ್ರ ಸಾಹಿತ್ಯದಲ್ಲಿ ವರ್ಣದ ಬದಲಿಗೆ 'ಅರ್ಣ'[74] ಎಂಬ ಪ್ರಯೋಗವಾಗಿದೆ. ಅಕ್ಷರ ಸಿದ್ಧಾಂತವಾಗಿರುವುದು ಕಂಡುಬರುತ್ತದೆ, ಪತಂಜಲಿಯು ತನ್ನ ಮಹಾಭಾಷ್ಯದಲ್ಲಿ ಇದರ ವ್ಯುತ್ಪತ್ತಿಯನ್ನು ಕುರಿತು ಸ್ಪಷ್ಟಪಡಿಸಿದ್ದಾನೆ. ನ ಕ್ಷರತೀತಿ ಅಕ್ಷರ[75] ಅಂದರೆ ಯಾವುದು ವಿನಾಶವಿಲ್ಲದ್ದೋ ಅದು ಅಕ್ಷರವಾಗಿದೆ. ಈ ಆಧಾರದಲ್ಲಿ ಪ್ರಣವ, ಬ್ರಹ್ಮ, ಇತ್ಯಾದಿ ವಿವಿಧ ರೂಪಗಳಲ್ಲಿ ಈ ಶಬ್ದದ ರೂಪಗಳುಸಿಗುತ್ತವೆ. ಮೂಲದಲ್ಲಿ ಅಕ್ಷರ ಶಬ್ದದ ಅರ್ಥವು ವಿಕಸಿತವಾಗಿದೆ. ಆದ್ದರಿಂದ ಅಕ್ಷರವೆನ್ನುವುದುದು ಮೊದಲು 'ಅಖಂಡ್ಯ' ಎನ್ನುವ ಅರ್ಥಹೊಂದಿತ್ತು. 'ಅಕ್ಷರ' ಎಂಬುದು ಶಬ್ದಎಂಬ ಅರ್ಥದಿಂದಲೂ ಪ್ರಯೋಗದಲ್ಲಿದೆ. ಋಗ್ವೇದದ ಮೊದಲ ಮಂಡಲದಲ್ಲಿ "ಋಚೋ ಅಕ್ಷರೇಪರಮೇವ್ಯೋಮನ್"[76] ಎನ್ನುವುದನ್ನು ಇದಕ್ಕೆ ಸಾಕ್ಷೀಕರಿಸಬಹುದು. ಆನಂತರ ಈ ಶಬ್ದವನ್ನು ವಿಭಜನೆ ಮಾಡುವುದರ ಮೂಲಕ 'ಸಿಲೆಬಲ್' ಎನ್ನುವ ಹೆಸರಿನ ಅಡಿಯಲ್ಲಿ ಸಂಕೇತಿಸಲಾಯಿತು. ಆದರೆ

---

[74] ಭಾಷಾವಿಜ್ಞಾನಕೋಶ 'ವರ್ಣ ಎಂಬುದರ ಅರ್ಥವಿವರಣೆ'ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ವರ್ಣ ಪದದ ಅರ್ಥವಿವರಣೆಯ ಭಾಗ.

[75] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಅಕ್ಷರ ಪದದ ಅರ್ಥವಿವರಣೆಯ ಭಾಗ, ಪುಟ 4.

[76] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಧ್ವನಿ ಪದದ ಅರ್ಥವಿವರಣೆಯ ಭಾಗ.

ಶಬ್ದವನ್ನು ಖಂಡ್ಯವೆಂದೂ ಅಕ್ಷರವನ್ನು ಅಖಂಡ್ಯವೆಂದೂ ಕರೆಯಲಾಗಿದೆ. 'ಸಿಲೆಬಲ್' ಎನ್ನುವುದನ್ನು ವಿಭಜಿಸುವ ಅಂದರೆ ಸ್ವರ ಮತ್ತು ವ್ಯಂಜನಗಳನ್ನಾಗಿ ವಿಂಗಡಿಸುವ ಕಾರ್ಯನಡೆಯಿತು. ಇಲ್ಲಿ ( ಕ್+ಅ=ಕ ) ಎಂದು ವಿಂಗಡಿಸುವಾಗ ಇಲ್ಲಿ ಬರುವ ಸಂದೇಹವೆಂದರೆ ಅಕ್ಷರವು ಖಂಡ್ಯ / ಅಖಂಡ್ಯವೂ ಆಗಿರಬಹುದಾಗಿದೆ ಎನ್ನುವುದು. ಅಕ್ಷರವನ್ನು 'ಖಂಡ್ಯವೆಂದೂ' ವರ್ಣವನ್ನು 'ಅಖಂಡ್ಯವೆಂದೂ' ಕರೆಯಲಾಗುತ್ತದೆ. ಯಾವುದೇ ಒಂದು ಅಕ್ಷರವನ್ನು ಈ ಮುಂದಿನ ಅವಸ್ಥೆಗಳಡಿಯಲ್ಲಿ ವಿಶ್ಲೇಷಿಸಲಾಗುತ್ತದೆ. ಸ್ವರ ,ಕಾಲ, ಸ್ಥಾನ, ಆಭ್ಯಂತರ, ಪ್ರಯತ್ನ ,ಬಾಹ್ಯ ಪ್ರಯತ್ನ. ಇವು ವರ್ಣಗಳ ಐದು ಪ್ರಕಾರಗಳೆಂದು ಕರೆಯುತ್ತಾರೆ.

## ಸ್ವರ

ಉದಾತ್ತಶ್ಚಾನುದಾತ್ತಶ್ಚ ಸ್ವರಿತಶ್ಚ ಸ್ವರಾಸ್ತ್ರಯಃ
ಹ್ರಸ್ವೋದೀರ್ಘಃ ಪ್ಲುತ ಇತಿ ಕಾಲತೋ ನಿಯಮಾ ಅಚಿ[77]

ಉದಾತ್ತ , ಅನುದಾತ್ತ, ಸ್ವರಿತ ಇವು ಮೂರು ಸ್ವರಗಳು ಹ್ರಸ್ವ ದೀರ್ಘ ಮತ್ತು ಪ್ಲುತ ಎಂಬ ಮೂರು ಕಾಲಗಳಲ್ಲಿ ಬಳಕೆಯಾಗುತ್ತದೆ.

**ಉದಾತ್ತ ಸ್ವರದ ಸೂತ್ರ 'ಉಚ್ಚೈರುದಾತ್ತ:' ಅಂದರೆ** ಯಾವ ಸ್ವರವನ್ನು ನಾವು ಧ್ವನಿ ಏರಿಸಿ ಉಚ್ಚಾರಮಾಡುತ್ತೇವೆಯೋ ಅದನ್ನೇ 'ಉದಾತ್ತಸ್ವರ' ಎಂದು ಕರೆಯುತ್ತಾರೆ. ಪಾಣಿನಿಯ ಅಷ್ಟಾಧ್ಯಾಯಿಯಲ್ಲಿಯೇ ಇದನ್ನು ಉಲ್ಲೇಖಿಸಲಾಗಿದೆ. ಇವು ವೇದಗಳ ಉಚ್ಚಾರಣೆಯಲ್ಲಿ ಕಂಡುಬರುತ್ತದೆ.

ಉದಾಹರಣೆಗೆ ಜಾತವೇದಸೇ ಸುನವಾಮ[78]

ಇಲ್ಲಿ ವೇ ಎಂಬ ಅಕ್ಷರದ ಮೇಲಿನ ಏ ಸ್ವರಕ್ಕೆ ತೋರಿಸಿರುವ ಕಂಬಾಕೃತಿಯ ಗುರುತನ್ನು ಉದಾತ್ತಸ್ವರ ಎಂದು ಅರ್ಥಮಾಡಿಕೊಳ್ಳಬೇಕು.

---

[77] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 17. ಶ್ಲೋಕ 11.

[78] 'ಸಸ್ವರ ವೇದಮಂತ್ರಾಃ' ಶ್ರೀ ರಾಮಕೃಷ್ಣಾಶ್ರಮ.ಮೈಸೂರು.ಪರಿಷ್ಕರ್ತರು ಸ್ವಾಮಿ ಚಿದಾನಂದ. ಎಂಟನೇಯ ಪ್ರಕಾಶನ,1995. ಎರಡನೇ ಪ್ಯಾರಾ.

## ನೀಚ್ಚೈರನುದಾತ್ತಃ

ಉದಾತ್ತ ಸ್ವರಕ್ಕೆ ತದ್ವಿರುದ್ಧ ವಾದಸ್ವರ ಅನುದಾತ್ತವಾಗಿದೆ. ಯಾವ ಸ್ವರವನ್ನು ಉಚ್ಚಾರಮಾಡುವಾಗ ಧ್ವನಿಯನ್ನು 'ಇಳಿಸಿ' ಉಚ್ಚಾರ ಮಾಡಲಾಗುತ್ತದೋ ಅಂತಹ ಸ್ವರಗಳನ್ನು 'ಅನುದಾತ್ತ'ಸ್ವರ ವೆಂದು ಕರೆಯುತ್ತಾರೆ. ಇವು ವೇದಮಂತ್ರಗಳ ಉಚ್ಚಾರಣೆಯಲ್ಲಿ ಕಂಡುಬರುತ್ತದೆ. ಉದಾಹರಣೆಗೆ "ಜಾತವೇದಸೇ ಸುನವಾಮ" ಇಲ್ಲಿ ಜಾ ಎಂಬ ಅಕ್ಷರದ ಮೇಲಿನ ವರ್ಣಕ್ಕೆ ತೋರಿಸಿರುವ ಅಡಿಗೆರೆ ಗುರುತನ್ನು ಅನುದಾತ್ತಸ್ವರ ಎಂದು ಭಾವಿಸಿಕೊಳ್ಳಬೇಕು.

## ಸಮಾಹಾರಃ ಸ್ವರಿತಃ

ಅಕ್ಷರ ಅಥವಾ ಸ್ವರವನ್ನು ಏರಿಸದೆಯೂ ಇಳಿಸದೆಯೂ ಉಚ್ಚಾರ ಮಾಡದೆ ಸಮಾನಾಂತರವಾಗಿ ಉಚ್ಚಾರಮಾಡಿದರೆ ಅದು ಸ್ವರಿತಸ್ವರ ಎಂದು ಕರೆಯಿಸಿಕೊಳ್ಳುತ್ತದೆ. ಉದಾಹರಣೆಗೆ "ಜಾತವೇದಸೇ ಸುನವಾಮ" ಮೇಲಿನಗೆರೆ ಅಥವಾ ಅಡಿಗೆರೆಯನ್ನು ಹೊಂದಿರದ ಉಳಿದ ಅಕ್ಷರಗಳೆಲ್ಲ ಸ್ವರಿತಗಳೆಂದು ಕರೆಯಿಸಿಕೊಳ್ಳುತ್ತವೆ. ತ, ದ,ಸೇ, ಸು,ನ,ವಾ ಇವು ಸ್ವರಿತ ಸ್ವರಗಳು.

ಈ ಮೇಲಿನ ಉದಾತ್ತ, ಅನುದಾತ್ತ, ಸ್ವರಿತಸ್ವರಗಳನ್ನು ಸಂಗೀತದ ಏಳು ಸ್ವರಗಳೊಂದಿಗೆ ಹೋಲಿಸಲಾಗಿದೆ.

ಉದಾತ್ತೇ ನಿಷಾದ ಗಾಂಧಾರಾ ಅನುದಾತ್ತ ವೃಷಭ ದೈವತೌ
ಸ್ವರಿತ ಪ್ರಭವಾ ಹ್ಯೇತೇ ಷಡ್ಜಮಧ್ಯಮ ಪಂಚಮಾಃ[79]

---

[79] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 18. ಶ್ಲೋಕ 12.

ಉದಾತ್ತದಿಂದ ನಿಷಾದ, ಗಾಂಧಾರ ಸ್ವರಗಳೂ, ಅನುದಾತ್ತದಿಂದ ಋಷಭ, ಮತ್ತು ಧೈವತ ಸ್ವರಗಳೂ, ಸ್ವರಿತದಪ್ರಭಾವದಿಂದ ಷಡ್ಜ, ಮಧ್ಯಮ ಹಾಗು ಪಂಚಮಸ್ವರಗಳು ಹುಟ್ಟುತ್ತವೆ.

**5.2 ವರ್ಣಗಳಪ್ರಕಾರಗಳು**

ವರ್ಣಗಳ ಪ್ರಕಾರಗಳನ್ನು ನಾವು ಅರಿತುಕೊಳ್ಳುವುದು ಅತ್ಯಂತ ಅಗತ್ಯವಾಗಿದೆ. 'ಅ'ಕಾರಾದಿ ಸ್ವರಗಳನ್ನು ಮತ್ತು 'ಕ'ಕಾರಾದಿ ವ್ಯಂಜನಗಳನ್ನು ಕ್ರಮಬದ್ಧವಾಗಿ ಒಂದು ಸರಣಿಯಲ್ಲಿ ಹೇಳಿರುವುದಕ್ಕೆ ಯಾವ ಮಾನದಂಡವನ್ನು ಬಳಸಿರಬಹುದು ಎಂಬುದನ್ನು ಅರಿಯಬೇಕಾಗಿದೆ. ನಾವು ಮೇಲ್ನೋಟಕ್ಕೆ ವರ್ಣಗಳ ಕ್ರಮವಿಭಜನೆಗೆ ಧ್ವನಿಉಚ್ಚಾರಣಾ ಸ್ಥಾನವೇ ಪ್ರಮುಖಕಾರಣ ಎಂದು ತಿಳಿದಿದ್ದೇವೆ. ಧ್ವನ್ಯುಚ್ಚಾರಣಾಸ್ಥಾನದ ಆಧಾರದ ಮೇಲೆ ಮುಖ್ಯವಾದ ಕೆಲವು ವರ್ಣಗಳಪ್ರಕಾರಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಅಘೋಷವರ್ಣಗಳು**

ಧ್ವನಿಯ ಒಂದುಭೇದವಾಗಿದೆ. ಈ ಧ್ವನಿಗಳನ್ನು ಉಚ್ಚಾರಮಾಡುವಾಗ ಮುಖವಿವರದಲ್ಲಿ ಹವೆಯು ಪ್ರಸಾರವಾಗುವಾಗ ಯಾವುದೇ ರೀತಿಯ ಕಂಪನ ವುಂಟಾಗುವುದಿಲ್ಲ. ಸ್ಥಾನ ಮತ್ತು ಕರಣಗಳ ನಡುವೆ ಸ್ಪರ್ಶ ಸಂಭವಿಸುತ್ತದಾದರೂ ಅವು ಘರ್ಷಣೆಗೆ ಒಳಗಾಗುವುದಿಲ್ಲ. ಕವರ್ಗ,ಚವರ್ಗ,ಟವರ್ಗ, ತವರ್ಗ ಮತ್ತು ಪವರ್ಗಗಳ ಮೊದಲ ಎರಡು ವ್ಯಂಜನಗಳನ್ನು ಅಘೋಷವರ್ಣಗಳೆಂದು ಕರೆಯುತ್ತಾರೆ, ಸ್ವರಗಳು ಅಘೋಷಗಳಾಗಲಾರವು ಕೆಲವು ಸ್ವರಗಳು ಸಾಂದರ್ಭಿಕವಾಗಿ ಸಂಸ್ಕೃತ, ಹಿಂದಿ ಭಾಷೆಗಳಲ್ಲಿ ಬರುತ್ತದಾದರೂ ಅವುಗಳನ್ನು ಇತರ ಸ್ವರಗಳಿಂದ ಪ್ರತ್ಯೇಕವಾಗಿ ತೋರಿಸಲು ಆಯಾ ಸ್ವರಗಳ ಅಡಿಯಲ್ಲಿ ವೃತ್ತಾಕಾರದ ಒಂದು ಚಿಹ್ನೆಯನ್ನು ಬಳಸಲಾಗುತ್ತದೆ.

**ಅನುನಾಸಿಕ**

ಯಾವಧ್ವನಿಯನ್ನು ಉಚ್ಚಾರಮಾಡುವಾಗ ಹವೆಯನ್ನು ಮುಖವಿವರದಲ್ಲಿಯ ಬಾಯಿಯ ಜೊತೆಗೆ ನಾಸಿಕ(ಮೂಗು) ಮಾರ್ಗವನ್ನು ಏಕಕಾಲದಲ್ಲಿ ತೆರೆದು ಉಚ್ಚಾರಮಾಡುತ್ತೇವೆಯೋ ಅಂತಹ ವರ್ಣಗಳನ್ನು ಅನುನಾಸಿಕವರ್ಣಗಳೆಂದು

ಕರೆದಿದ್ದಾರೆ. ಪಾಣಿನಿಯು 'ಮುಖನಾಸಿಕಾವಚನೋಽನುನಾಸಿಕಃ'[80] ಎಂದುಸೂತ್ರ ರೂಪದಲ್ಲಿ ಹೇಳಿದ್ದಾನೆ. ಙ,ಮ,ನ,ಣ,ಞ ಇವುಗಳನ್ನು ನಾಸಿಕ್ಯವ್ಯಂಜನಗಳು ಅಥವಾ ಅನುನಾಸಿಕಗಳೆಂದು ಕರೆಯಲಾಗಿದೆ. ಇವುಗಳನ್ನು ಉಚ್ಚಾರಮಾಡುವಾಗ ಸ್ಪರ್ಶವರ್ಣಗಳನ್ನು ಉಚ್ಚಾರಮಾಡಿದಂತೆ ಕೇವಲ ಬಾಯಿಯ ಮೂಲಕ ನಿಃಶ್ವಾಸ ಮಾಡದೇ ನಾಸಿಕದ ಮೂಲಕವೂ ಶ್ವಾಸವನ್ನು ಹೊರಹಾಕಬೇಕಾಗುತ್ತದೆ. ಆಯಾ ವ್ಯಂಜನಗಳಿಗನುಸಾರವಾಗಿ ನಾಲಗೆಯು ಓಷ್ಠ, ತಾಲು, ಕಂಠ, ಮೂರ್ಧನ್ಯ, ದಂತ್ಯ ಗಳೊಂದಿಗೆ ಸ್ಪರ್ಶಿಸಿ ಹವೆಯನ್ನು ಹೊರದೂಡುವಾಗ ನಾಸಿಕ ದ್ವಾರವೂ ಕೂಡ ತೆರೆದಿರಬೇಕಾಗುತ್ತದೆ.

**ಅನುಸ್ವಾರ**

ಸ್ವತಂತ್ರ ಉಚ್ಚಾರ / ಬಳಕೆಯ ಸಾಮರ್ಥ್ಯ ಹೊಂದಿರದ ಧ್ವನಿಯಾಗಿದೆ. ಇದರ ಶಾಬ್ದಿಕ ಅರ್ಥ ಸ್ವರ ಅಥವಾ ಧ್ವನಿಯ ನಂತರ ಎಂದಾಗಿದೆ. ಕೆಲವು ಸಂಸ್ಕೃತ ವೈಯಾಕರಣಿಗಳು ಅ,ಲವ,ಮು, ವಿಷ್ಣುಚಕ್ರ ಮತ್ತು ಬಿಂದು[81] ಇತ್ಯಾದಿಯಾಗಿ ಸಂಕೇತಿಸಿದ್ದಾರೆ. ಸ್ವತಂತ್ರವಾಗಿ ರೂಢಿಯಲ್ಲಿ ಇಲ್ಲದಿರುವುದಿಂದ ಇವುಗಳು ವ್ಯಂಜನಗಳಿಗೆ ಸೇರಿದ್ದೋ ಅಥವಾ ಸ್ವರಗಳ ಗುಂಪಿಗೆ ಸೇರಿದ್ದೋ ಎನ್ನುವುದರಲ್ಲಿ ಅನೇಕ ವಾದ ವಿವಾದಗಳಿವೆ. ಋಗ್ವೇದ ಪ್ರಾತಿಶಾಖ್ಯದಲ್ಲಿ 'ಅನುಸ್ವಾರಃ ಸ್ವರೋ ವಾ ವ್ಯಂಜನೋ ವಾ'[82]

---

[80] ಪಾಣಿನಿಯ ಅಷ್ಟಾಧ್ಯಾಯಿ ಸೂತ್ರ 1-1-8, ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ ಪುಟ ಸಂಖ್ಯೆ :12 ಕೊನೆಯ ಸಾಲು..

[81] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಅನುಸ್ವಾರ ಪದದ ಅರ್ಥವಿವರಣೆಯ ಭಾಗ.

[82] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ :122 ರಲ್ಲಿ ಅಡಿ ಟಿಪ್ಪಣಿ 1.

ಎಂದು ಉಲ್ಲೇಖವಾಗಿದೆ. ಚತುರಾಧ್ಯಾಯಿಕಾ[83] ಗ್ರಂಥದಲ್ಲಿ ಸ್ವರಗಳ ಗುಂಪಿನಲ್ಲಿ ಸೇರಿಸಿದ್ದಾರೆ. ಅನುಸ್ವಾರದ ಆಧುನಿಕಪ್ರಯೋಗ ವ್ಯಂಜನರೂಪದಲ್ಲಿ ಕಂಡುಬರುತ್ತದೆ. ಐದು ಅನುನಾಸಿಕಗಳ ಸ್ಥಾನದಲ್ಲಿ ಇದರ ಪ್ರಯೋಗವನ್ನು ಗಮನಿಸಬಹುದಾಗಿದೆ. ಉದಾ ಗಂಗಾ, ಚಂಚಲ,ಪಂಥ, ಬಂಧ,ಟಂಕ ಇತ್ಯಾದಿ, ಇದನ್ನು ಗಮನಿಸಿದರೆ ಅನುಸ್ವಾರಗಳನ್ನು ಸ್ವತಂತ್ರವಾಗಿ ಅಥವಾ ಶಬ್ದಾರಂಭದಲ್ಲಿ ಬಳಸಲ್ಪಡದಿರುವುದು ಕಂಡುಬರುತ್ತದೆ. ಸಂಸ್ಕೃತ ಭಾಷೆಯಲ್ಲಿ ಅನುಸ್ವಾರಗಳ ಪ್ರಯೋಗವು ಶಬ್ದಾಂತ್ಯದಲ್ಲಿ ವಿಭಕ್ತಿರೂಪ (ಅಂಶಸಂಹಾರ ರೂಪ) ದಲ್ಲಿ ಕಂಡುಬರುತ್ತದೆ. ಉದಾ 'ರಾಮಂ', ಲಕ್ಷ್ಮಣಂ, ಶ್ಯಾಮಂ ಇತ್ಯಾದಿ.

**ಅಯೋಗವಾಹ**

ಅಯೋಗವಾಹಗಳೆಂದರೆ ಯಾವ ಧ್ವನಿಯನ್ನು ಸ್ವಂತಂತ್ರವಾಗಿ ಉಚ್ಚಾರಮಾಡಲು ಸಾಧ್ಯವಿಲ್ಲವೋ ಅಂತಹ ಧ್ವನಿಗಳು.ಅಂದರೆ ಕೇವಲ ಅನ್ಯಧ್ವನಿಗಳ ಸಹಾಯದಿಂದ ಉಚ್ಚಾರ ಮಾಡಲ್ಪಡುವಂತವುಗಳು. ಕೆಲವು ವಿದ್ವಾಂಸರ ಪ್ರಕಾರ ಇವು ಪರಾಶ್ರಿತವಾದವುಗಳಾದ ಕಾರಣ ಇವುಗಳನ್ನು ಅಯೋಗವಾಹಗಳೆಂದು ಕರೆಯಲಾಗಿದೆ. ಅನುಸ್ವಾರ, ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ ಇವು ನಾಲ್ಕು ಅಯೋಗವಾಹಗಳಾಗಿವೆ. "ಅಕಾರಾದಿನಾ ವರ್ಣಸಮಾಮ್ನಾಯೇನ ಸಂಹಿತಾಃ ಸಂತಃ ಯೇ ವಹಂತಿ ಆತ್ಮಲಾಭಂ ತೇ ಅಯೋಗವಾಹಾಃ"[84] ಅಂದರೇ ಕೇವಲ ಅ ವರ್ಣದ ಸಹಯೋಗದೊಂದಿಗೆ ಉಚ್ಚರಿಸಲ್ಪಡುವಂತಹವುಗಳು ಎಂದು ಕರೆಯಲಾಗಿದೆ. ಪಾಣಿನಿ ಮತ್ತು ಇತರ ಪ್ರಾತಿಶಾಖ್ಯ ಗ್ರಂಥಗಳಲಿ ಅಯೋಗವಾಹದ ಉಲ್ಲೇಖ ಕಂಡುಬರುವುದಿಲ್ಲ.

---

[83] ಅದೇ ಪುಟ ಸಂಖ್ಯೆ :242 ರಲ್ಲಿ ಎರಡನೇ ಪ್ಯಾರಾ.

[84] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಅಯೋಗವಾಹಗಳು ಪದದ ಅರ್ಥವಿವವರಣೆಯ ಭಾಗ.

## ಉಪಧ್ಮಾನೀಯ

ಇದೊಂದು ಅಯೋಗವಾಹ ,ಸಾಮಾನ್ಯ ವಿಸರ್ಗಕ್ಕಿಂತ ಭಿನ್ನ ಉಚ್ಚಾರಣೆಯನ್ನು ಹೊಂದಿರುವುದರಿಂದ ಇದೊಂದು ವಿಶೇಷ ಪ್ರಕಾರದ ವಿಸರ್ಗ ಎಂದು ಹೇಳ ಬಹುದು. ವಿಸರ್ಗ ಮತ್ತು ಪ ಅಥವಾ ಫ ಇವೆರಡನ್ನು ಸೇರಿಸಿ ಉಚ್ಚರಿಸುವಾಗ ಧ್ವನಿತವಾಗುವ ವಿಶೇಷರೀತಿಯ ವಿಸರ್ಗವನ್ನೇ ಉಪಧ್ಮಾನೀಯ ಎಂದು ಕರೆಯಬಹುದು. ವಿಶೇಷವಾಗಿ ವೇದಮಂತ್ರಗಳನ್ನು ಉಚ್ಚಾರಮಾಡುವಾಗ ಇದರ ಸ್ಪಷ್ಟ ಕಲ್ಪನೆಯನ್ನು ಕಾಣಬಹುದು. ಸಾಮಾನ್ಯ ವಿಸರ್ಗಕ್ಕೂ ಉಪಧ್ಮಾನೀಯಕ್ಕೂ ವ್ಯತ್ಯಾಸವಿದೆ. ಉಪಧ್ಮಾನೀಯದಲ್ಲಿ ವಿಶೇಷರೀತಿಯ ಉಚ್ಚಾ ರ ಹೋರಬೀಳುವುದರಿಂದ ಇದನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಇದರ ಉಚ್ಚಾರವನ್ನು ಪಾಣಿನಿ ತನ್ನ ಶಿಕ್ಷಾ ಗ್ರಂಥದಲ್ಲಿ 'ಉಪೂಪಧ್ಮಾನೀಯಾನಾಮೋಷ್ಠೌ'[85] ಎಂದು ಹೇಳಿರುವದರಿಂದ ಇದರ ಉಚ್ಚಾರ ಓಷ್ಠ ವಾಗಿದೆ, ಪ್ರಾಚೀನ ವ್ಯಾಕರಣ ಪಂಡಿತರು ಶುದ್ಧ ವಿಸರ್ಗವನ್ನು ಸ್ವರದ ಗುಂಪಿಗೆ ಸೇರಿಸಿದರೆ ವಿಶೇಷ ಉಪಸರ್ಗವಾದ ಉಪಧ್ಮಾನೀಯವನ್ನು ವ್ಯಂಜನಗಳ ಗುಂಪಿಗೆ ಸೇರಿಸಿದ್ದಾರೆ. ಕನ್ನಡ ಭಾಷೆಯಲ್ಲಿ ಕೇಶಿರಾಜನೂ ಸಂಸ್ಕೃತ ಭಾಷಾ ಪ್ರಭಾವದಿಂದ ಧ್ವನಿಗಳ ಸಂಖ್ಯೆಗಳನ್ನು ಹೇಳುವಲ್ಲಿ ಪ್ರಸ್ತಾವಿಸುತ್ತಾನಾದರೂ ಅಂತಿಮ ವಾಗಿ ಕನ್ನ ಡ ಶುದ್ದಗೆಯನ್ನು ಕುರಿತು ಹೇಳುವಾಗ ಅವುಗಳನ್ನು ಕೈಬಿಟ್ಟಿದ್ದಾನೆ. ಕನ್ನಡದಲ್ಲಿ ಅವುಗಳ ಬಳಕೆ ಕಂಡುಬರುವುದಿಲ್ಲ.

## ಊಷ್ಮಗಳು

ಯಾವ ಧ್ವನಿಗಳನ್ನು ಉಚ್ಚಾರಮಾಡುವಾಗ ಮುಖವಿವರದಲ್ಲಿ ಹೆಚ್ಚು ಹವೆಯನ್ನು ಹೊರದೂಡಿ ಉಚ್ಚಾರಮಾಡುತ್ತೇವೆಯೋ ಅಂತಹ ವರ್ಣಗಳನ್ನು ಊಷ್ಮ ವಣಗಳೆಂದು ಕರೆಯುತ್ತಾರೆ. ಋಕ್‌ಪ್ರಾತಿಶಾಖ್ಯದಲ್ಲಿ 'ವಾಯುಸ್ತತ್ಪ್ರಧಾನವರ್ಣಾಊಷ್ಮಾಣಃ'[86] ಎಂದು

---

[85] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 24.

[86] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಊಷ್ಮ ಪದದ ಅರ್ಥವಿವವರಣೆಯ ಭಾಗ.

ಬಂದಿರುವುದರಿಂದ ಇದು ಸ್ಪಷ್ಟವಾಗುತ್ತದೆ. ಸ,ಶ,ಷ,ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ, ಅನುಸ್ವಾರಗಳನ್ನು ಊಷ್ಮಗಳಗುಂಪಿಗೆ ಸೇರಿಸಲಾಗಿದೆ. ಪತಂಜಲಿಯು ಮಹಾಭಾಷ್ಯದಲ್ಲಿ ಊಷ್ಮಗಳನ್ನು 'ವಿವೃತಮೂಷ್ಮಣಾಮ್' ಎಂದು ಕರೆದಿದ್ದಾನೆ. ವಿವೃತಗಳನ್ನೆಲ್ಲ ಊಷ್ಮಗಳೆಂದು ಕರೆದಿದ್ದಾನೆ. ಇದನ್ನು ಶೀತ್ಕಾರಿ ಧ್ವನಿ[87] ಎಂದು ಕರೆಯುತ್ತಿರುವುದು ಕಂಡುಬರುತ್ತದೆ. ಊಷ್ಮ ಅಂದರೆ ಶ್ವಾಸವನ್ನು ಬಿಡುವಾಗ ಹೆಚ್ಚು ಒತ್ತಡದಿಂದ ಶೀತ್ಕಾರಿಯಾಗಿ ಬಿಡುವಾಗ ಉಚ್ಚರಿಸಲ್ಪಡುವ ಧ್ವನಿಗಳಾಗಿರುವದರಿಂದ ಇವುಗಳನ್ನು ಶೀತ್ಕಾರಿಎಂದು ಕರೆಯುತ್ತಾರೆ. 'ಶೀತ್ಲಕಾರಿ'[88] ಎಂಬ ಹೆಸರಿನಿಂದಲೂ ಈ ಹಿಂದೆ ಕರೆಯುತ್ತಿದ್ದರು.

**ಜಿಹ್ವಾಮೂಲೀಯ**

ಸ್ವರ ಹಾಗು 'ಕ' ಅಥವಾ 'ಖ' ಇವುಗಳ ನಡುವೆ ಅಂದರೆ ಇವುಗಳ ಮೊದಲಿಗೆ ಸ್ವ ನಂತರ ಕ ಅಥವಾ ಖ ಸಂಯೋಗವಾದರೆ ಅಂತಹ ಸಂದರ್ಭದಲ್ಲಿ ಉಚ್ಚರಿತವಾಗುವ ಧ್ವನಿಯೇ ಜಿಹ್ವಾಮೂಲೀಯವಾಗಿದೆ. ವಿಷ್ಣು ---- ಕರೋತಿ ಇವುಗಳ ನಡುವೆ ಇರುವ ವ್ಯಂಜನವನ್ನೇ ಜಿಹ್ವಾಮೂಲೀಯ ವೆಂದು ಕರೆಯಲಾಗಿದೆ. ಇವುಗಳು ವ್ಯಂಜನಗಳ ಗುಂಪಿಗೆ ಸೇರುತ್ತವೆ. ಜಿಹ್ವಾಮೂಲೀಯ ಸಂಸ್ಕೃತ ಭಾಷೆಯಲ್ಲಿ ಕಂಡುಬರುತ್ತದೆ. ಕ ಅಥವಾ ಖ ಗಳ ಸಹಾಯದಿಂದ ಉಚ್ಚರಿಸಲ್ಪಡುವ ವಿಸರ್ಗವನ್ನು ಜಿಹ್ವಾಮೂಲೀಯ ಎಂದು ಕರೆಯಲಾಇದೆ. ಪ್ರಾಚೀನ ಸಂಸ್ಕೃತದಲ್ಲಿ ಋೂ,ಲೃ, ವಿಸರ್ಗ , ಊಷ್ಮ, ಕವರ್ಗಗಳನ್ನು ಜಿಹ್ವಾಮೂಲೀಯ ಗುಂಪಿಗೆ ಸೇರಿಸಲಾಗಿತ್ತು. ಇವುಗಳೂ ಕೂಡ ಸ್ವತಂತ್ರ ಪ್ರಯೋಗ ಸಾಮರ್ಥ್ಯಹೊಂದಿಲ್ಲದೇ ಇರುವುದರಿಂದ ಅಯೋಗವಾಹಗಳೆಂದು ಕರೆಯಿಸಿಕೊಳ್ಳುತ್ತವೆ.

ಅಂತಃಸ್ಥಗಳು

ಸ್ಪರ್ಶವ್ಯಂಜನಗಳು ಮತ್ತು ಸಂಘರ್ಷ ವ್ಯಂಜನಗಳ ಸಂಯೋಗದಿಂದ ಉದ್ಭವವಾಗುವ ಧ್ವನಿಯಾಗಿದೆ. ಇನ್ನೊಂದು ಅರ್ಥದಲ್ಲಿ ಸ್ವರ ಮತ್ತು ವ್ಯಂಜನಗಳ ನಡುವೆ ಸ್ಥಿರವಾಗಿರುವ

---

[87] ಅದೇ.

[88] ಅದೇ.

ಅಂದರೆ ಉಂಟಾಗುವ ಧ್ವನಿಗಳು. ಸ್ವರಗಳನ್ನು ಉಚ್ಚಾರ ಮಾಡುವಾಗ ಸ್ಥಾನ ಮತ್ತು ಕರಣಗಳು ಪರಸ್ಪರ ತಾಡನ ಅಥವಾ ಸ್ಪರ್ಶಿಸಿಕೊಳ್ಳುವುದಿಲ್ಲ. ಅದೇರೀತಿ ವ್ಯಂಜನಗಳನ್ನು ಉಚ್ಚಾರಮಾಡುವಾಗ ಪರಸ್ಪರ ಆಕರ್ಷಣವಾಗುತ್ತದೆ ಆದರೆ ಅಂತಸ್ಥಗಳನ್ನು ಉಚ್ಚಾರಮಾಡುವಾಗ ಸ್ವರ ಉಚ್ಚಾರಣಾಗುಣ ಮತ್ತು ವ್ಯಂಜನಗಳ ಉಚ್ಚಾರಣಾಗುಣವನ್ನು ಹೊಂದಿರುತ್ತದೆ. ಪಾಣಿನಿಯು ಇದನ್ನು 'ಯಣ್'[89] ವರ್ಣಗಳೆಂದು ಕರೆದಿದ್ದಾನೆ.

### 5.3 ಧ್ವನಿ ಪ್ರಸಾರ ಮತ್ತು ವರ್ಗೀಕರಣ

ಧ್ವನಿಗಳಪ್ರಸಾರವನ್ನು ಪ್ರಮುಖವಾಗಿ ಮೂರುಸ್ಥಿತಿಗಳಲ್ಲಿ ವರ್ಗೀಕರಿಸಲಾಗಿದೆ. ಮೊದಲನೆಯದು ಧ್ವನಿ ಮುಖವಿವರದಲ್ಲಿ ಉಚ್ಚಾರವಾಗುವಂತಹ, ಎರಡನೇಯದು ಉಚ್ಚಾರಗೊಂಡ ಧ್ವನಿ ವಾತಾವರಣದಲ್ಲಿ ಚಲಿಸುವಂತಹ, ಮೂರನೇಯದು ವಾತಾರಣದಲ್ಲಿ ಚಲಿಸಿ ಇನ್ನೊಂದು ವ್ಯಕ್ತಿಯ ಶ್ರವಣೇಂದ್ರಿಯವನ್ನು ತಲುಪಿ ಶ್ರವಣಜ್ಞಾನ ವಾಗುವಂತಹ ಹೀಗೆ ಮೂರು ಹಂತಗಳಲ್ಲಿ ಧ್ವನಿಪ್ರಸಾರಗೊಳ್ಳುತ್ತದೆ. ಇವುಗಳನ್ನೆ ಇನ್ನೊಂದು ಪರಿಭಾಷೆಯಲ್ಲಿ ಧ್ವನಿಗಳ 'ಉತ್ಪತ್ತಿ', 'ಗಮನ' ಮತ್ತು 'ಶ್ರವಣ' ಎಂದು ಕರೆಯಬಹುದು. ಉತ್ಪತ್ತಿಯ ಹಂತದಲ್ಲಿ ಮುಖವಿವರದಲ್ಲಿ ಕರಣ(ಚಿಡಿಣುಛಿಣಟಚಿಣಂಡಿ)ಗಳ ಮತ್ತು ಸ್ಥಾನಗಳ ಸಹಾಯದಿಂದ ವಿಶೇಷ ಪ್ರಯತ್ನದಮೂಲಕ ಧ್ವನ್ಯುತ್ಪಾದನೆಯನ್ನು ಮಾಡುತ್ತೇವೆ. ಧ್ವನಿಪ್ರಸಾರವನ್ನು ಇನ್ನಷ್ಟು ವಿಶದವಾಗಿ ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಈ ರೀತಿಯಾಗಿ ಧ್ವನಿಗಳ ಉತ್ಪತ್ತಿಸ್ಥಾನಗಳನ್ನು ಆಧರಿಸಿ ಧ್ವನಿಗಳನ್ನು ವರ್ಗೀಕರಣಮಾಡುವದು ಒಂದುರೀತಿಯಾದರೆ, ಇನ್ನೊಂದು ರೀತಿಯಲ್ಲಿ ಉತ್ಪತ್ತಿಗೊಂಡ ಧ್ವನಿಯು ತರಂಗಾಂತರಗಳ ಮೂಲಕ ವಾತಾವರಣದಲ್ಲಿ ಚಲನೆಯನ್ನು ಹೊಂದುವಾಗ ಪಡೆಯುವ ತೀವ್ರತೆ,ಗತಿ,ಲಯ,ಸ್ವರೂಪಗಳ ಆಧಾರದ ಮೇಲೆ ಧ್ವನಿಗಳನ್ನು

---

[89] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :56, ಎರಡನೇ ಪ್ಯಾರಾದ ಉಪ ಶೀರ್ಷಿಕೆ.

ವರ್ಗೀಕರಿಸುವದು. ಧ್ವನಿಗಳನ್ನು ಶ್ರವಣಮಾಡುವವನ ಅಂದರೆ ಆತ ಯಾವರೀತಿಯಾಗಿ ಧ್ವನಿಗಳನ್ನು ಶ್ರವಣ ಮಾಡಿದ್ದಾನೆ, ಅದರ ಬಗ್ಗೆ ಪ್ರತಿಕ್ರಿಯಿಸುತ್ತಾನೆ ಎಂಬುದರ ಆಧಾರದ ಮೇಲೆ ಧ್ವನಿಗಳನ್ನು ವರ್ಗೀಕರಣ ಮಾಡುವುದು ಮೂರನೇ ಬಗೆಯಾಗಿದೆ. ಈ ಮೇಲಿನ ಮೂರುವರ್ಗೀಕರಣಗಳಲ್ಲಿ ಮೂರನೇ ರೀತಿಯ ವರ್ಗೀಕರಣದ ಸಂಬಂಧ ವಸ್ತುಗತವಾಗದೇ ಆತ್ಮಗತವಾಗಿದೆ. ಅಂದರೆ ಅದರ ಪ್ರಭಾವ ಶ್ರವಣ ಮಾಡುವವನ ಮೇಲೆ ಅವಲಂಬಿತವಾಗಿರುತ್ತದೆ. ಧ್ವನಿಯನ್ನು ಉತ್ಪತ್ತಿ ಮಾಡುವದು ಮತ್ತು ಪರಿಸರದಲ್ಲಿ ಸ್ಪಷ್ಟವಾಗಿ ಪ್ರಸಾರವಾಗುವಂತೆ ಉಚ್ಚಾರಮಾಡಿದಾಗ ಮಾತ್ರ ಅವುಗಳನ್ನು ಆತ ಅಂದರೆ ಕೇಳುಗನು(ಶ್ರವಣ ಮಾಡುವವ) ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ಅದು ಅಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಶ್ರವಣಮಾಡುವವನನ್ನು ಆಧರಿಸಿ ವರ್ಗೀಕರಣ ಮಾಡುವಾಗ ಇನ್ನುಳಿದ ಎರಡು ವರ್ಗಿಕರಣಗಳ ಪ್ರಭಾವ ಅತ್ಯಂತ ಮಹತ್ವದ್ದಾಗಿದೆ. ಆದ್ದರಿಂದ ಶ್ರವಣಮಾಡುವವನ ಆಧಾರದ ಮೇಲೆ ಧ್ವನಿಗಳನ್ನು ವರ್ಗೀಕರಿಸುವ ಪದ್ಧತಿ ಹಾಸ್ಯಾಸ್ಪದವಾಗಿದೆ. ಅದೇರೀತಿ ಎರಡನೇ ಆಧಾರವಾದ ಧ್ವನಿಪ್ರಸಾರವನ್ನು ಗಣನೆಗೆ ತೆಗೆದುಕೊಂಡು ವರ್ಗೀಕರಣ ಮಾಡುವ ಪದ್ಧತಿಯೂ ಸಮರ್ಪಕವಾದುದಲ್ಲ ಏಕೆಂದರೆ ಇಲ್ಲಿ ಧ್ವನಿ ಪ್ರಸಾರವಾಗುವಾಗ ಅನೇಕ ಅವಸ್ಥಾಂತರಗಳನ್ನು ಎದುರಿಸುತ್ತದೆ. ಆದ್ದರಿಂದ ಈ ಆಧಾರವಿಟ್ಟುಕೊಂಡು ಧ್ವನಿಗಳನ್ನು ವರ್ಗೀಕರಿಸುವುದೂ ಹಾಸ್ಯಾಸ್ಪದವೇಸರಿ.ಇನ್ನುಳಿದ ಆಧಾರವೆಂದರೆ ಮೊದಲನೆಯದಾದ ಧ್ವನ್ಯುತ್ಪಾದನಾಸ್ಥಾನವನ್ನು ಕೇಂದ್ರೀಕರಿಸಿ ಧ್ವನಿಗಳನ್ನು ವರ್ಗೀಕರಿಸುವುದು. ಧ್ವನಿ ಹುಟ್ಟುವ ಸ್ಥಾನಗಳನ್ನು ಕರಣಗಳನ್ನು ಆಧರಿಸಿ ಧ್ವನಿಗಳನ್ನು ವರ್ಗೀಕರಿಸುವಿಕೆ ಸೂಕ್ತವಾದುದು. ಉದಾಹರಣೆಗೆ ಪಾಣಿನಿಯ ಶಿಕ್ಷಾ ಗ್ರಂಥದಲ್ಲಿ ಅಕುಹ ವಿಸರ್ಜನೀಯಾನಾಂ ಕಂಠಃ, ಇಚುಯಶಾನಾಂತಾಲು ಇತ್ಯಾದಿಯಾಗಿ ಧ್ವನಿಗಳನ್ನು ಗುಂಪುಮಾಡಿದ್ದಾನೆ. ಈ ಕ್ರಮವೇ ಅ,ಕವರ್ಗ ಹ ವರ್ಣಗಳನ್ನು ಕಂಠ್ಯ ವರ್ಣಗಳೆಂದು ಕರೆಯಲು ರೂಢಿಯಾಯಿತು ಇತ್ಯಾದಿ.

ಈ ಮೇಲಿನ ಮೂರು ಧ್ವನಿವರ್ಗೀಕರಣಕ್ಕೆ ಭಿನ್ನವಾಗಿ ಇನ್ನೊಂದು ರಿತಿಯಲ್ಲಿ ಧ್ವನಿಗಳನ್ನು ವರ್ಗೀಕರಣಮಾಡಿರುವದು ಕಂಡುಬರುತ್ತದೆ. ಧ್ವನಿಗಳ ಪ್ರಯೋಗವನ್ನು ಗಮನಿಸಿ ಧ್ವನಿಗಳನ್ನು ವರ್ಗೀಕರಣ ಮಡುವುದು. ಅವುಗಳನ್ನು ಈ ಕೆಳಗಿನ ರೀತಿಯಲ್ಲಿ ವಿವರಿಸಬಹುದಾಗಿದೆ.

## ಸ್ವರ ಮತ್ತು ವ್ಯಂಜನಗಳು

ಧ್ವನಿಗಳ ಅತ್ಯಂತ ಪ್ರಾಚೀನ ಮತ್ತು ಎಲ್ಲಕ್ಕಿಂತ ಹೆಚ್ಚು ಪ್ರಚಲಿತ ವರ್ಗೀಕರಣ ಸ್ವರ ಮತ್ತು ವ್ಯಂಜನಗಳ ರೂಪದಲ್ಲಿ ಕಂಡುಬರುತ್ತದೆ. ಯುರೋಪ ದೇಶದಲ್ಲಿ ಈ ವಿಷಯದಲ್ಲಿ ಪ್ರಪ್ರಥಮವಾಗಿ ಚಿಂತನೆ ಮಾಡಿದ ಕೀರ್ತಿ ಯೂನಾನಿ ವೈಯಾಕರಣಿ ಡಾಯೋನಿಶಸ್ ಥ್ರೈಕ್ಸಿಗೆ[90] ಸಲ್ಲುತ್ತದೆ. ಈತನ ಪ್ರಕಾರ

"ಯಾವ ಧ್ವನಿಗಳನ್ನು ಇನ್ನೊಂದು ಧ್ವನಿಯ ಸಹಾಯವಿಲ್ಲದೆ ಸ್ವತಂತ್ರವಾಗಿ ಪ್ರಯೋಗಿಸಬಹುದೋ ಅಂತಹ ಧ್ವನಿಗಳು ಸ್ವರಗಳು. ಇನ್ನು ಸ್ವರಗಳ ಸಹಯೋಗದೊಂದಿಗೆ ಉಚ್ಚರಿತವಾಗುವ ಧ್ವನಿಗಳು ವ್ಯಂಜನಗಳು. ಹೀಗೆ ಸ್ವತಂತ್ರ ಮತ್ತು ಪರತಂತ್ರದ ಆಧಾರದ ಮೇಲೆ ಈ ವರ್ಗೀಕರಣ ಮಾಡಿರುವುದನ್ನು ಅತನು ಸ್ಪಷ್ಟಪಡಿಸುತ್ತಾನೆ. ಅಂಟಿಂಟಚಿಟಣ[91] (ವ್ಯಂಜನ) ಎನ್ನುವ ಆಂಗ್ಲಭಾಷೆಯ ಪದವು ಲ್ಯಾಟಿನ್ ಭಾಷೆಯ ಛಿಂಟಿಂಟಚಿಟಣಜಟ[92] ಪದದೊಂದಿಗೆ ಪರಸ್ಪರ ಸಂಬಂಧಹೊಂದಿದೆ. ಇದರ ಅರ್ಥ ಇನ್ನೊಂದು ಧ್ವನಿಯೊಂದಿಗೆ ಉಚ್ಚಾರವಾಗುವ ಎಂದಾಗಿದೆ. ಸಂಸ್ಕೃತ ಭಾಷೆಯಲ್ಲಿ ಸ್ವರ ಶಬ್ದದ ಪ್ರಥಮ ಪ್ರಯೋಗ ಋಗ್ವೇದದಲ್ಲಿ ಕಂಡುಬರುತ್ತದೆ. ಅಲ್ಲಿ ಇದರ ಅರ್ಥ ಧ್ವನಿ ಎಂಬುದಾಗಿದೆ. ನಂತರ ಇದರ ಅರ್ಥ 'ಬಲಾಘಾತ' ಮತ್ತು 'ಸುರ' ಎಂದು ವಿಕಾಸವಾಗಿದೆ. ಇಂದು ಪ್ರಚಲಿತವಿರುವ ಸ್ವರ ಸಂವಾದಿ ಅರ್ಥವು ಪ್ರಥಮವಾಗಿ ಐತರೇಯ ಬ್ರಾಹ್ಮಣದಲ್ಲಿ[93] ದೊರಕುತ್ತದೆ. ಐತರೇಯ

---

[90]ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ವ್ಯಂಜನ ಪದದ ಅರ್ಥವಿವವರಣೆಯ ಭಾಗ.

[91] ಕಾನ್ಸಿಯಸ್ ಆಕ್ಸಫರ್ಡ ಇಂಗ್ಲೀಷ್ ಡಿಕ್ಶನರಿ, 11 ನೇ ಆವೃತ್ತಿ,2004, ಅಂಗಸ್‌ಸ್ಟೀವನ್‌ಸನ್, ಆಕ್ಸಫರ್ಡ ಯಿನಿವರ್ಸಿಟಿ ಪ್ರೆಸ್, ನ್ಯೂಯಾರ್ಕ, ಅಮೇರಿಕಾ, ಪುಟ ಸಂಖ್ಯೆ: 305, 'Consonant' ಪದದ ಅರ್ಥವಿವರಣೆಯಲ್ಲಿ.

[92] ಅದೇ.

[93] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಸ್ವರ ಪದದ ಅರ್ಥವಿವವರಣೆಯ ಭಾಗ..

ಆರಣ್ಯಕದಲ್ಲಿ ಈ ಅರ್ಥಕ್ಕಿಂತ ಮೊದಲು ಘೋಷ ಶಬ್ದದ ಪ್ರಯೋಗವಿರುವುದು ಕಂಡುಬರುತ್ತದೆ.

ತಸ್ಯ ಯಾನಿ ವ್ಯಂಜನಾನಿ ತಚ್ಛರೀರಂ

ಯೋ ಘೋಷಃ ಸ ಆತ್ಮಾ[94]

ಧ್ವನಿಯ ವಿಶೇಷರೂಪವಾದ ವ್ಯಂಜನಾರ್ಥದಲ್ಲಿ ವ್ಯಂಜನ ರೂಪದ ಪ್ರಯೋಗವೂ ಕೂಡ ಐತರೇಯಬ್ರಾಹ್ಮಣಕ್ಕಿಂತ ಪೂರ್ವದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ವ್ಯಂಜನದ ಪ್ರಥಮ ಪ್ರಯೋಗವು ಐತರೇಯ ಬ್ರಾಹ್ಮಣದಲ್ಲಿ ಕಂಡುಬರುತ್ತದೆ. ಈ ಮೇಲಿನ ಐತರೇಯ ಆರಣ್ಯಕದಲ್ಲಿ ಕೊಡಲಾದ ಉದಾಹರಣೆಯಿಂದ ಸ್ಪಷ್ಟವಾಗುವುದೇನೆಂದರೆ ಐತರೇಯ ಆರಣ್ಯಕದಕಾಲದವರೆಗೆ ಸ್ವರದ ಮಹತ್ತ್ವದಕುರಿತು ಚಿಂತಿಸಿದ್ದರು ಎಂಬುದು ಅರಿವಾಗುತ್ತದೆ. ಮುಂದೆ ಈ ವಿಚಾರದಲ್ಲಿ ಪತಂಜಲಿಮಹರ್ಷಿಗಳು ಮಹಾಭಾಷ್ಯದಲ್ಲಿ ಈ ಕೆಳಗಿನಂತೆ ಹೇಳಿದ್ದಾರೆ.

ಸ್ವರಗಳನ್ನು ಕುರಿತು

ಸ್ವಯಂ ರಾಜಂತೇ ಸ್ವರಾಃ[95]

(ಬೇರೆ ಧ್ವನಿಯ ಆಶ್ರಯವಿಲ್ಲದೆ ಭಾಷೆಯಲ್ಲಿ ಪ್ರಯೋಗವಾಗುವಂತಹವು)

ವ್ಯಂಜನಗಳನ್ನು ಕುರಿತು

ಅನ್ವಗ್ ಭವತಿ ವ್ಯಂಜನಮಿತಿ.[96]

ಯಃ ಸ್ವಯಂರಾಜತೆ ತಂ ತು ಸ್ವರಮಾಹ ಪತಂಜಲಿಃ

ಉಪರಿ ಸ್ಥಾಯಿನಾ ತೇನ ವ್ಯಂಗ್ಯಂ ವ್ಯಂಜನ ಮುಚ್ಯತೆ.[97]

---

[94] ಅದೇ.

[95] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಸ್ವರ ಪದದ ಅರ್ಥವಿವವರಣೆಯ ಭಾಗ.

[96] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 256 ರಲ್ಲಿ ಮೂರನೇ ಪ್ಯಾರಾ ಮೂರನೇ ಸಾಲು.

[97] ಅದೇ.

(ಯಾವುದು ಸ್ವಂತ ಬಲದಮೇಲೆ ಪ್ರಯೋಗವಾಗುತ್ತದೋ ಅದು ಸ್ವರ. ಸ್ವರದ ಸಹಯೋಗದೊಂದಿಗೆ ಬಳಕೆಯಾಗುವಂತಹವು ವ್ಯಂಜನಗಳು)

ಒಟ್ಟಾರೆಯಾಗಿ ಮೇಲಿನ ಎಲ್ಲ ವಿದ್ವಾಂಸರ ಏಕಾಭಿಪ್ರಾಯವೆಂದರೆ ಸ್ವರಕ್ಕೆ ಪ್ರಧಾನ ಸ್ಥಾನವನ್ನು ಕಲ್ಪಿಸಿಕೊಟ್ಟು ವ್ಯಂಜನಕ್ಕೆ ಅಪ್ರಧಾನ ಸ್ಥಾನವನ್ನು ದೊರಕಿಸಿಕೊಟ್ಟಿದ್ದರು. ಮತ್ತು ಸ್ವರವನ್ನು ಸ್ವಯಂ ಉಚ್ಚಾರಮಾಡುವುದೆಂದೂ ವ್ಯಂಜನವನ್ನು ಸ್ವರದ ಸಹಯೋಗದೊಂದಿಗೆ ಉಚ್ಚಾರಮಾಡ ಬೇಕೆಂಬುದಾಗಿ ಸ್ಪಷ್ಟವಾಗಿ ಹೇಳಿದ್ದಾರೆ. ಭಾರತದಲ್ಲಿ ಪತಂಜಲಿ ಮತ್ತು ಪಾಶ್ಚಾತ್ಯರಲ್ಲಿ ಪ್ರಸಿದ್ಧ ಗ್ರೀಕ್ ವಿದ್ವಾಂಸನಾದ ಥ್ರೈಕ್ಸನು 2200 ವರ್ಷಗಳ ಹಿಂದೆ ಈ ವಿಚಾರವನ್ನು ಒಂದೇರೀತಿಯಲ್ಲಿ ಪ್ರಸ್ತಾಪಮಾಡಿದ್ದು ಕಂಡುಬರುತ್ತದೆ. ಆದರೆ ಈ ವಿಚಾರವಾಗಿ ಅದಕ್ಕಿಂತ 7–8 ಶತಮಾನಗಳಿಗಿಂತ ಹಿಂದೆಯೇ ಬೀಜರೂಪದಲ್ಲಿ ಆರಣ್ಯಕ ಮತ್ತು ಬ್ರಾಹ್ಮಣಗ್ರಂಥಗಳಲ್ಲಿ ಕಂಡುಬರುತ್ತದೆ, ವ್ಯಂಜನಾಂತ ಶಬ್ದಗಳು ಹಿಂದಿಭಾಷೆಯಲ್ಲಿ ರೂಢಿಯಲ್ಲಿ ಕನ್ನಡ ಸಂಸ್ಕೃತಗಳಲ್ಲಿ ವ್ಯಂಜನಗಳು ಸ್ವರಾಂತವಾಗಿಯೇ ಬಳಕೆಯಾಗುತ್ತದೆ. ಉದಾಹರಣೆಗೆ 'ರಾಮ' ಎನ್ನುವ ಕನ್ನಡ ಶಬ್ದವು 'ರಾಮ್' ಎಂದು ಹಿಂದಿಭಾಷೆಯಲ್ಲಿ ವ್ಯಂಜನಾಂತವಾಗಿ ಬಳಕೆಯಾಗುತ್ತದೆ. ಪ್ರಸಿದ್ಧ ಭಾಷಾವಿಜ್ಞಾನಿಗಳಾದ ಡೇನಿಯಲ್‌ಜೋನ್ಸ್, ಪಾಲಪಾಸಿ, ಸ್ವಿಟ್ ಇತ್ಯಾದಿ ವಿದ್ವಾಂಸರುಗಳು ಸ್ವರವು ಘೋಷಧ್ವನಿಯಾಗಿದೆ. ಇದರ ಉಚ್ಚಾರಣೆಯಲ್ಲಿ ಹವೆ(ಗಾಳಿ)ಯು ಅಬಾಧ ಗತಿಯಿಂದ ಚಲಿಸುತ್ತದೆ. ಮುಖವಿವರದಲ್ಲಿ ಯಾವುದೇ ರೀತಿಯ ಅಡೆತಡೆಗಳಿಲ್ಲದೆ ಕರಣ ಮತ್ತು ಸ್ಥಾನಗಳ ಪರಸ್ಪರ ತಾಡನ/ಸ್ಪರ್ಶವಿಲ್ಲದೇ ಹವೆಯು ಸಂಚಾರವಾಗುವಾಗ ಉದ್ಭವವಾಗುವ ಧ್ವನಿಗಳು ಸ್ವರಗಳಾಗಿವೆ, ಆದರೆ ವ್ಯಂಜನದ ಉಚ್ಚಾರಣೆಯಲ್ಲಿ ಹವೆಯು ಮುಖವಿವರದಲ್ಲಿ ಚಲಿಸುವಾಗ ಸ್ಥಾನ ಮತ್ತು ಕರಣಗಳ ಪರಸ್ಪರ ಘರ್ಷಣೆಗೆ ಒಳಗಾಗುತ್ತದೆ ಮತ್ತು ನಾಲಗೆಯು ಪ್ರಮುಖ ಪಾತ್ರವಹಿಸುತ್ತದೆ. ನಾಲಗೆಯ ಮುಂಭಾಗ, ಮಧ್ಯಭಾಗ, ಹಿಂಭಾಗ, ನಾಲಗೆಯ ಎರಡು ಪಾರ್ಶ್ವಗಳಲ್ಲಿ ಹವೆಯನ್ನು ಚಲಿಸುವಂತೆ ಮಾಡುವುದರಮೂಲಕ ವ್ಯಂಜನದ ಉಚ್ಚಾರಣೆಯಲ್ಲಿ ಬಹುಮುಖ್ಯ ಪಾತ್ರವಹಿಸುತ್ತದೆ. ಸರಿಸುಮಾರು ಇದೇ ಪರಿಭಾಷೆಯನ್ನು ಆರ್ಮ‌ಫೀಲ್ಡ್, ವೆಸ್ಟರ್ ಮೈನ್, ವಾರ್ಡ, ಗ್ರೇ, ಬ್ಲಾಕ್ ಮತ್ತು ಟ್ರೆಗರ್ ಮೊದಲಾದವರೂ ಕೂಡ ಒಪ್ಪಿದ್ದಾರೆ. ವರ್ಣಗಳ ಪ್ರಯೋಗವನ್ನಾಧರಿಸಿ ಸ್ವರ ಮತ್ತು ವ್ಯಂಜನಗಳನ್ನು

ವರ್ಗೀಕರಿಸುವ ಪದ್ಧತಿಯನ್ನು ಬಹುತೇಕ ಭಾರತೀಯ ಮತ್ತು ಪಾಶ್ಚಾತ್ಯ ವ್ಯಾಕರಣ ಹಾಗು ಭಾಷಾವಿಜ್ಞಾನಿಗಳು ಒಪ್ಪಿದ್ದಾರೆ.

## 5.4 ಅಕ್ಷರ ಮತ್ತು ವರ್ಣ

ಅಕ್ಷರ ಮತ್ತು ವರ್ಣ ಪರಸ್ಪರ ಭಿನ್ನವಾದ ಅರ್ಥವನ್ನು ಹೊಂದಿವೆ. ಆದರೆ ಪರಸ್ಪರ ಪೂರಕವಾಗಿವೆ. ಅಕ್ಷರಪದದ ವ್ಯುತ್ಪತ್ತಿಯನ್ನು ಕುರಿತು ಪತಂಜಲಿಯು 'ಕ್ಷರ'[98] ಧಾತುವಿನಿಂದ ಉದ್ಗಮವಾದದ್ದು ಎಂಬುದಾಗಿದೆ. 'ಕ್ಷರ' ಎಂದರೆ ನಷ್ಟವಾಗುವಂಥಾದ್ದು ಎಂದರ್ಥ. ಅಕ್ಷರವೆಂದರೆ 'ಕ್ಷರ'ದ ವಿರುದ್ಧಾರ್ಥ. ಅಂದರೆ ನಾಶವಿಲ್ಲದ್ದು,ಶಾಶ್ವತವಾದದ್ದು, ಚಿರಂತನವಾದದ್ದು ಎಂದರ್ಥ. ಈ ಅರ್ಥದಲ್ಲಿ ಪ್ರಣವ ಎಂದೂ ಅಕ್ಷರಪದವನ್ನು ಸಂಬೋಧಿಸಲಾಗಿದೆ. ಪ್ರಾಚೀನ ವೈಯಾಕರಣಿಗಳು ಅಕ್ಷರಕ್ಕೆ ಬ್ರಹ್ಮ ಸ್ವರೂಪವನ್ನು ಕೊಟ್ಟಿರುವುದು ಕಂಡುಬರುತ್ತದೆ. ಮುಂದೆ ಅಕ್ಷರದ ಮೂಲ ಅರ್ಥವಿಕಸಿತಗೊಂಡು ವಿಭಜಿಸಲು ಅಸಾಧ್ಯವಾದುದು ಎಂಬ ಅರ್ಥದಲ್ಲಿ ಬಳಕೆಯಾಯಿತು. 'ಋಚೋ ಅಕ್ಷರೋ ಪರಮೇವ್ಯೋಮನ್' ಇಲ್ಲಿ ಅಕ್ಷರ ಶಬ್ದದ 'ಋಕ್' ಈ ಅರ್ಥದಲ್ಲಿ ಬಳಸಲಾಗಿದೆ. ಋಗ್ವೇದ, ಐತರೇಯ ಬ್ರಾಹಣ,ಋಕ್,ವಾಜಸೇನೀಯ ಪ್ರಾತಿಶಾಖ್ಯಗಳಲ್ಲಿ ಇತ್ಯಾದಿಗಳಲ್ಲಿ ಅಕ್ಷರವನ್ನು ಈ ಅರ್ಥದಲ್ಲಿ ಬಳಸಲಾಗಿದೆ. ನಂತರದ ಕಾಲದಲ್ಲಿ ಸ್ವರ ಮತ್ತು ವ್ಯಂಜನದ ರೂಪವನ್ನು ಸೇರಿಸುವ ಕಾಗುಣಿತಗಳನ್ನು ಅಕ್ಷರ ಎಂದು ಸಂಬೋಧಿಸಲಾಯಿತು. ಇಂದು ಕೂಡ ಕೆಲವರು ಈ ಅರ್ಥದಲ್ಲಿ ಅಕ್ಷರವನ್ನು ಅರ್ಥೈಸುತ್ತಾರೆ. ಇನ್ನು ಕೆಲವರು ಕಾಗುಣಿತಗಳಲ್ಲಿ ಬಿಡಿಬಿಡಿಯಾಗಿರುವ ವರ್ಣಗಳ ಸಂವಾದಿಯಾಗಿ ಅಕ್ಷರಗಳನ್ನು ಅರ್ಥೈಸುತ್ತಾರೆ. ಸ್ವರದ ಸಮಾನಾರ್ಥಕ ರೂಪವಾಗಿಯೂ, ಋಗ್ವೇದ ಪ್ರಾತಿಶಾಖ್ಯ, ತೈತ್ತಿರೀಯ ಪ್ರಾತಿಶಾಖ್ಯ, ಚತುರಧ್ಯಾಯಿಕಾ ಗ್ರಂಥಗಳಲ್ಲಿ ಅಕ್ಷರಕ್ಕೆ ಸ್ವರವನ್ನು ಸಂವಾದಿಯಾಗಿ ಬಳಸಿದ

---

[98] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ಅಕ್ಷರ' ಪದದ ಅರ್ಥವಿವವರಣೆಯ ಭಾಗ, ಪುಟ ಸಂಖ್ಯೆ: 4.

ಉಲ್ಲೇಖಗಳಿವೆ. ಇವುಗಳನ್ನು ಪರಿಶೀಲಿಸಿದಾಗ ಅಕ್ಷರ ಎನ್ನುವುದಕ್ಕೆ ಆಂಗ್ಲಭಾಷೆಯ ಸಿಲೆಬಲ್ ಎನ್ನುವ ಅರ್ಥ ಸಾರ್ಥಕ ಎನ್ನಿಸುತ್ತದೆ. ಆಂಗ್ಲಭಾಷೆಯಲ್ಲಿ ಬಳಕೆಯಲ್ಲಿರುವ ಸಿಲೆಬಲ್ ಎನ್ನುವುದ ಶಬ್ದಕ್ಕೆ ಮೂಲ 'ಸಿಲೆಬ' ಇದರ ಅರ್ಥ 'ಒಂದರಲ್ಲಿ ಬಂಧಿಸಲ್ಪಟ್ಟಿದ್ದು'. ಇದು ಅಕ್ಷರ ಎನ್ನುವುದಕ್ಕೆ ಸರಿಹೊಂದುತ್ತದೆ. ಈ ಕೆಳಗಿನಂತೆ ಅಕ್ಷರದ ಅರ್ಥಗಳನ್ನು ಕ್ರೋಢೀಕರಿಸ ಬಹದು.

1 ವರ್ಣ ಅಥವಾ ಧ್ವನಿಚಿಹ್ನೆಯಾಗಿ

ಉದಾಹರಣೆಗೆ ಅ,ಬ ಇತ್ಯಾದಿ, "ನಿನ್ನ ಅಕ್ಷರವು ಸುಮಧುರವಾಗಿದೆ".

ಎಂಬ ವಾಕ್ಯದಲ್ಲಿ ಇದರ ಅರ್ಥವನ್ನು ಗಮನಿಸಬಹುದಾಗಿದೆ.

2 ಸ್ವರ ಎಂಬ ಅರ್ಥದಲ್ಲಿ: ಉದಾಹರಣೆಗೆ ಅ,ಆ, ಇತ್ಯಾದಿ,

3 ಅಯೋಗವಾಹ ಎಂಬ ಅರ್ಥದಲ್ಲಿಯೂ ಇದರ ಪ್ರಯೋಗವಿದೆ.

4 ಸ್ವರ ಮತ್ತು ವ್ಯಂಜನದ ಸಂಯುಕ್ತರೂಪವಾಗಿ: ಉದಾಹರಣೆಗೆ ಉದಾ ಕ್+ಅ=ಕ

5 ಸಿಲೆಬಲ್ ಎನ್ನು ಅರ್ಥದಲ್ಲಿ : ಉದಾಹರಣೆಗೆ ವರ್ಣಮಾಲೆಯಲ್ಲಿವ ಅಕ್ಷರಗಳು.

ಅಕ್ಷರದ ಭೇದಗಳು

ಅಕ್ಷರಗಳನ್ನು ಎರಡು ಪ್ರಕಾರದಲ್ಲಿ ವಿಂಗಡಿಸಬಹುದು. ಒಂದು ಬದ್ಧಾಕ್ಷರ ಇನ್ನೊಂದು ಮುಕ್ತಾಕ್ಷರ. ಯಾವ ಅಕ್ಷರದ ಅಂತಿಮಧ್ವನಿಯು ವ್ಯಂಜನವಾಗಿರುತ್ತದೋ ಅಂತಹ ಅಕ್ಷರಗಳನ್ನು ಬದ್ಧಾಕ್ಷರಗಳು ಎಂದು ಕರೆಯುತ್ತೇವೆ. ಇದಕ್ಕೆ ವಿರುದ್ಧವಾಗಿ ಯಾವ ಅಕ್ಷರದ ಅಂತಿಮಧ್ವನಿಯು ಸ್ವರವಾಗಿರುತ್ತದೋ ಅಂತಹ ಅಕ್ಷರವನ್ನು ಮುಕ್ತಾಕ್ಷರ ಎಂದು ಕರೆಯುತ್ತಾರೆ.

ವರ್ಣವು ಅಕ್ಷರಕ್ಕೆ ಮೂಲವಾದುದು. ಅಕ್ಷರವು ಖಂಡ್ಯವೂ ಅಥವಾ ಅಖಂಡ್ಯವೂ ಆಗಿರುತ್ತದೆ. ಆದರೆ ವರ್ಣವು ಅಖಂಡ್ಯವಾಗಿರುತ್ತದೆ. ಆದ್ದರಿಂದ ಎಲ್ಲವರ್ಣಗಳೂ ಅಕ್ಷರಗಳಲ್ಲ. ಮತ್ತು ಎಲ್ಲ ಅಕ್ಷರಗಳೂ ವರ್ಣಗಳಲ್ಲ. ಕೆಲವು ವರ್ಣಗಳು ಅಕ್ಷರಗಳಾಗಿವೆ. ಉದಾಹರಣೆಗೆ ಹ್ರಸ್ವಸ್ವರಗಳು ಅಖಂಡ್ಯಗಳಾಗಿವೆ. ಆದ್ದರಿಂದ ಅವು ವರ್ಣಗಳೂ ಹೌದು. ಅ,ಇ,ಉ, ಇತ್ಯಾದಿಗಳನ್ನು ಗಮನಿಸಿದಾಗ ಅವುಸ್ಪಷ್ಟಗೊಳ್ಳುತ್ತವೆ. ಆದರೆ ಕ,ಗ,ತ,ದ, ಇತ್ಯಾದಿಗಳು ಅಕ್ಷರಗಳಾಗುತ್ತವೆ. ಏಕೆಂದರೆ ಇವುಗಳು ಖಂಡ್ಯಗಳಾಗಿವೆ. ಕ್+ಅ, ಗ್+ಅ. ತ್+ಅ ಎಂದು ಅವುಗಳನ್ನು ಖಂಡಗಳಾಗಿ ವಿಭಜಿಸಿ ತೋರಿಸಬಹುದಾಗಿದೆ. ಇನ್ನೊಂದು ಅಕ್ಷರದಲ್ಲಿ ಒಂದು ಅಥವಾ ಎರಡು ಅಥವಾ ಎರಡಕ್ಕಿಂತ ಹೆಚ್ಚು

ವರ್ಣಗಳಿರಬಹುದು. ವರ್ಣವು ಏಕಮಾತ್ರವಾದುದಾಗಿದೆ. ಏಕೆಂದರೆ ವರ್ಣ ಅಖಂಡ್ಯವಾದುದು.

### 5.4 ಸಾಮಗಾನಯೋನಿ ಮತ್ತು ಮೂಲಪಾಠ

ಸಾಮವೇದದಲ್ಲಿ ಸ್ವರಗಳು ವಿಶಿಷ್ಟವಾಗಿವೆ. ಮತ್ತು ಅವುಗಳ ಅಧ್ಯಯನಕ್ರಮವು ಭಿನ್ನತೆರನಾಗಿದೆ. ಸಾಮವೇದದ ಮೂಲಪಾಠಗಳು ಸಾಮವೇದದ ಯೋನಿ ಮಂತ್ರಗಳನ್ನು ಮಾತ್ರಹೊಂದಿವೆ. ಗಾನಕ್ಕೆ ಬೇಕಾದ ಮೂಲಪಾಠವನ್ನು ಪಡೆಯಲು ಸಾಮಯೋನಿ[99] ಮಂತ್ರಗಳಪದಗಳನ್ನು ಕೆಲವು ನಿರ್ದಿಷ್ಟ ನಿಯಮಗಳಿಗೆ ಅನುಸಾರವಾಗಿ ಮಾರ್ಪಡಿಸಲಾಗುತ್ತದೆ. ಈ ಮಾರ್ಪಾಡುಗಳು ಎಂಟುವಿಧವಾಗಿವೆ.

1. ವಿಕಾರ :ಒಂದು ಅಕ್ಷರವನ್ನು ಮತ್ತೊಂದು ಅಕ್ಷರದಿಂದ ಬದಲಿಸುವುದು.

   ಉದಾ: ಅಗ್ನೆ–ಓಗ್ನಾಇ[100]

2. ವಿಶ್ಲೇಷಣ : ಸಂಧಿನಿಯಮಗಳಿಗೆ ಅನುಸಾರ ವಿಭಜನೆ

   ಉದಾ ವೀತಯೆ–ವೋಯಿತೋಯಾ2ಯಿ[101]

   ಅಕ್ಷರ ವಿ ಯನ್ನು ವೊ+ಯಿ ಎಮದು ಮಾರ್ಪಾಟು. 2 ಸಂಖ್ಯೆಯಾಗಿದೆ.

3. ವಿಕರ್ಷಣ: ಉಚ್ಚಾರವನ್ನು ಎಳೆಯುವುದು.

   ಉದಾ: ಯೆ–ಯಾ23ಯಿ(2,3 ಕಾಲಾಂಶವನ್ನು ಸೂಚಿಸುತ್ತವೆ.[102]

4. ಅಭ್ಯಾಸ : ಒಂದೇ ಪದದ ಪುನರಾವರ್ತನೆ.[103]

---

[99] ಸಾಮವೇದದ ಅಂತರಂಗ, ಮೊದಲ ಆವೃತ್ತಿ, 2007, ಆರ್.ಎಲ್.ಕಶ್ಯಪ್, ಶ್ರೀ ಅರಬಿಂದೋ ಕಪಾಲಿ ಶಾಸ್ತ್ರಿ ಐ.ಎಫ್.ವಿ.ಕೆ. ಪ್ರಕಾಶನ, ಜಯನಗರ, ಬೆಂಗಳೂರು, ಪುಟ ಸಂಖ್ಯೆ 19 ಎರಡನೇ ಪ್ಯಾರಾ ಎರಡನೇ ಸಾಲು.

[100] ಮೇಲಿನದೇ, ಮೂರನೇ ಪ್ಯಾರಾ.

[101] ಮೇಲಿನದೇ, ನಾಲ್ಕನೇ ಪ್ಯಾರಾ.

[102] ಮೇಲಿನದೇ, ಐದನೇ ಪ್ಯಾರಾ.

[103] ಮೇಲಿನದೇ, ಆರನೇ ಪ್ಯಾರಾ.

5. ವಿರಾಮ: ಉಚ್ಚಾರಣೆಯ ನಡುವೆ ಅಲ್ಪವಿರಾಮ[104]

ಗೃಣಾನೊ ಹವ್ಯದಾತಯೆ- ಗೃಣಾನೋಹ/ವ್ಯದಾತಯೆ

6. ಸ್ತೋಭ : ಹೊಸ ಅಕ್ಷರಗಳನ್ನು ಸೇರ್ಪಡೆಗೊಳಿಸುವುದು.[105]

ಉದಾ: ಓಹೋವಾ ಹಾಉ ಹಾವು

7. ಸಂಯುಕ್ತಾಕ್ಷರಗಳನ್ನು ವಿಭಾಗಿಸುವುದು.:[106]

ಉದಾ: ವರೇಣ್ಯಂ:-ವರೇಣಿಯಂ

8. ಲೋಪ: ಅಕ್ಷರಗಳನ್ನು ಉಚ್ಚರಿಸದಿರುವುದು.[107]

ಉದಾ: ಸಾಮವೇದ ಮತ್ತು ಸಪ್ತ ಸ್ವರಗಳು

ಹೀಗೆ ಸಾಮವೇದದಲ್ಲಿ ಸ್ವರಗಳ ಕಲ್ಪನೆ ವಿಭಿನ್ನತೆರನಾಗಿದೆ. ಸಂಸ್ಕೃತದ ನಾರದೀಯ ಶಿಕ್ಷಾಗ್ರಂಥದಲ್ಲಿ ಈ ಕುರಿತು ವಿವರಣೆ ಬಂದಿದೆ.

ಷಡ್ಜಂ ವದತಿ ಮಯೂರೋ ಗಾವೋ ರಂಭಂತಿ ಚರ್ಷಭಂ
ಅಜಾವಿಕೇತು ಗಾಂಧಾರಂ ಕ್ರೌಂಚೋ ವದತು ಮಧ್ಯಮಂ(ನಾ.ಶಿ.)1.5.3[108]
ಪುಷ್ಪ ಸಾಧಾರಣೇಕಾಲೇ ಕೋಕಿಲಾ ವ್ಯಕ್ತಿ ಪಂಚಮಂ
ಅಶ್ವಸ್ ತು ದೈವತಂವಕ್ತಿ ನಿಷಾದಂ ವಕ್ತಿ ಕುಂಜರಃ( ನಾ.ಶಿ.1.5.4)[109]

ಈ ಮೇಲಿನ ಶ್ಲೋಕದಲ್ಲಿ ವಚಾರವನ್ನು ಈ ಕೆಳಗಿನ ಕೋಷ್ಟಕದ ಮೂಲಕ ವಿವರಿಸಲಾಗಿದೆ. ಅಂದರೆ ಸಾಮಸಂಗೀತದ ಹೆಸರು, ಅದರ ಚಿಹ್ನೆ, ಸ್ವರ, ಪ್ರತಿಯೊಂದು ಸ್ವರವನ್ನು ಒಂದು ಪಕ್ಷಿಗೆ ಹೋಲಿಸಿರುವುದನ್ನು ತೋರಿಸಲಾಗಿದೆ.

---

[104] ಮೇಲಿನದೇ, ಏಳನೇ ಪ್ಯಾರಾ.

[105] ಮೇಲಿನದೇ, ಎಂಟನೇ ಪ್ಯಾರಾ.

[106] ಮೇಲಿನದೇ, ಒಂಬತ್ತನೇ ಪ್ಯಾರಾ.

[107] ಮೇಲಿನದೇ, ಹತ್ತನೇ ಪ್ಯಾರಾ.

[108] ಮೇಲಿನದೇ. ಸಾಮವೇದದ ಅಂತರಂಗ, ಮೊದಲ ಆವೃತ್ತಿ, 2007, ಆರ್.ಎಲ್.ಕಶ್ಯಪ್, ಶ್ರೀ ಅರಬಿಂದೋ ಕಪಾಲಿ ಶಾಸ್ತ್ರಿ ಐ.ಎಫ್.ವಿ.ಕೆ. ಪ್ರಕಾಶನ, ಜಯನಗರ, ಬೆಂಗಳೂರು, ಪುಟ ಸಂಖ್ಯೆ 24 ಎಂಟನೇ ಸಾಲು.

[109] ಮೇಲಿನದೇ,

| ಸಾಮ ಸಂಗೀತದಲ್ಲಿ ಹೆಸರು | ಚಿಹ್ನೆ | ಸಾಮವೇದದ ಸ್ವರ | ಪಕ್ಷಿ ಅಥವಾ ಪ್ರಾಣಿಗಳ ಹೆಸರು |
|---|---|---|---|
| ಮಧ್ಯಮ | ಮ | ಸ್ವರಿತ | ಕ್ರೌಂಚ |
| ಗಾಂಧಾರ | ಗಾ | ಉದಾತ್ತ | ಮೇಕೆ |
| ಋಷಭ | ಋ | ಅನುದಾತ್ತ | ಎತ್ತು |
| ಷಡ್ಜ | ಷ | ಸ್ವರಿತ | ನವಿಲು |
| ಧೈವತ | ಧೈ | ಉದಾತ್ತ | ಅಶ್ವ |
| ನಿಷಾದ | ನಿ | ಅನುದಾತ್ತ | ಆನೆ |
| ಪಂಚಮ | ಪ | ಸ್ವರಿತ | ಕೋಗಿಲೆ |

## 5.6 ವರ್ಣಗಳ ಸಂಖ್ಯಾಲೆಕ್ಕಾಚಾರ

ವರ್ಣಗಳಸಂಖ್ಯೆಗಳಲ್ಲಿ ಪ್ರಾಚೀನಕಾಲದಿಂದ ಆಧುನಿಕಕಾಲದವರೆಗೆ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ನಿರಂತರವಾಗಿ ಬದಲಾವಣೆಗಳಾಗಿರುವುದನ್ನು ಗಮನಿಸಬಹುದು. ಮತ್ತು ವರ್ಣಗಳ ಸಂಖ್ಯೆಯಲ್ಲಿಯೂ ವಿಭಿನ್ನತೆರನಾದ ಅನೇಕ ಅಭಿಪ್ರಾಯಗಳನ್ನು ಉಭಯಭಾಷೆಗಳಲ್ಲಿ ಮೊದಲಿನಿಂದಲೂ ಕಾಣುತ್ತೇವೆ. ಉದಾಹರಣೆಗೆ ಪಾಣಿನಿಯು ಮಾಹೇಶ್ವರಸೂತ್ರದಲ್ಲಿ 43 ಪ್ರಮುಖವರ್ಣಗಳನ್ನು ಹೇಳಿ ಅವು 83 ಅಥವಾ 92ರೀತಿಯಲ್ಲಿ ಬಳಕೆಯಾಗುತ್ತವೆ ಎನ್ನುತ್ತಾನೆ. ಅಲ್ಲದೆ ಅ,ಇ,ಉ,ಮತ್ತುಋ ಕಾರಗಳಲ್ಲಿ ಪ್ರತ್ಯೇಕ 18–18 ವರ್ಣಗಳನ್ನು ಹೇಳಿದ್ದಾನೆ. ಅದೇರೀತಿ ಲೃ,ಏ,ಓ,ಐ,ಔ ಗಳಲ್ಲಿ 12 ಭೇದಗಳನ್ನು ಹೇಳಿದ್ದಾನೆ. ಸ್ವರಗಳ ಒಟ್ಟು ಸಂಖ್ಯೆಗಳನ್ನು 132 ಎಂದು ವರ್ಗೀಕರಿಸಿದ್ದಾನೆ. ವರ್ಣಗಳ ಸಂಖ್ಯಾಲೆಕ್ಕಾಚಾರದಲ್ಲಿ ಎರಡು ಪಕ್ಷಗಳನ್ನು ಮಾಡಬಹುದು. ಒಂದು ವ್ಯಕ್ತಿಪಕ್ಷ ಇನ್ನೊಂದು ಜಾತಿಪಕ್ಷ. ಉದಾಹರಣೆಗೆ 'ಅಕಾರತ್ವಜಾತಿ' ಯೆಂದರೆ 'ಅ'ಕಾರಗುಣ ಹೊಂದಿರುವ ಅಂಶಗಳನ್ನೆಲ್ಲ ಒಂದೆಡೆ ಸೇರಿಸುವುದು. ಇನ್ನು 'ಅ'ಕಾರಕ್ಕೆ ಹ್ರಸ್ವ, ಉದಾತ್ತ, ಅನುದಾತ್ತ ಮತ್ತಿತರ ಪ್ರಭೇದಗಳು ಅದರ ವೈಯಕ್ತಿಕ ವಾದ ಸಂಕೇತಗಳಾಗಿವೆ, ವರ್ಣಗಳನ್ನು ಲೆಕ್ಕಾಚಾರ ಮಾಡಿ ಒಂದು

ಭಾಷೆಯಲ್ಲಿ ವರ್ಣಗಳ ವ್ಯವಸ್ಥೆಯನ್ನು ನಿರ್ಧರಿಸುವಾಗ ವ್ಯಕ್ತಿಪಕ್ಷವನ್ನು ನಿರ್ಧರಿಸಿ ತೀರ್ಮಾನಿಸುವುದು ಅಸಮಂಜಸವಾದುದು. ಇನ್ನೊಂದು ದೃಷ್ಟಿಯಲ್ಲಿ ಒಂದೇ ಸ್ವರ ಅಥವಾ ವರ್ಣವನ್ನು ಭಿನ್ನಭಾಷಿಗರು ತಮ್ಮದೇ ಆದಶೈಲಿಯಲ್ಲಿ ಉಚ್ಚರಿಸುತ್ತಿರುತ್ತಾರೆ, ಜೊತೆಗೆ ಒಂದೇ ಧ್ವನಿಯನ್ನು ಒಂದಕ್ಕಿಂತ ಹೆಚ್ಚುಬಾರಿ ಒಬ್ಬ ವ್ಯಕ್ತಿ ಬಳಸಿದಾಗ ಅವು ಎಲ್ಲ ಉಚ್ಚಾರಣೆಯಲ್ಲಿಯು ಭಿನ್ನತೆಯನ್ನು ಹೊಂದಿರುತ್ತವೆ. ಅವುಗಳಿಗೆಲ್ಲ ಪ್ರತ್ಯೇಕ ವರ್ಣಸ್ಥಾನ ಕಲ್ಪಿಸಿಕೊಡುವುದು ಅನಗತ್ಯವಾದುದಾಗಿದೆ. ಅವುಗಳು ಪ್ರಾದೇಶಿಕವಾಗಿ ಭಿನ್ನಸ್ವರೂಪದವೇ ಹೊರತು ಅರ್ಥಸಾಮ್ಯವನ್ನು ಹೊಂದಿರುತ್ತವೆ. ಆದ್ದರಿಂದ ವ್ಯಕ್ತಿಪಕ್ಷ ಆಧರಿಸಿ ವರ್ಣಗಳ ಲೆಕ್ಕಾಚಾರಮಾಡುವುದು, ಯೋಗ್ಯವಾದುದಲ್ಲ. ಯಾವ ಧ್ವನಿಯು ಮಾತ್ರೆಗಳ ಆಧಾರದಮೇಲೆ, ಸ್ವರದ ಆಧಾರದ ಮೇಲೆ, ಏರಿಳಿತಗಳ ಆಧಾರದ ಮೇಲೆ, ಮತ್ತು ಇನ್ನೊಂದು ಧ್ವನಿಯ ಪ್ರಭಾವಕ್ಕೆ ಒಳಾಗಿ ಸಾಂದರ್ಭಿಕವಾಗಿ ಬಳಕೆಯಾಗುತ್ತದೋ ಅಂತಹ ಸನ್ನಿವೇಶದಲ್ಲಿ ಅವುಗಳನ್ನು ಪ್ರತ್ಯೇಕ ಧ್ವನಿಗಳೆಂದು ಪರಿಗಣಿಸಿ. ಪ್ರತ್ಯೇಕ 'ಧ್ವನಿ' ಎಂದು ಸ್ಥಾನಕಲ್ಪಿಸದೇ ಅವುಗಳನ್ನು ಒಂದೇಧ್ವನಿಯ ಉಪಧ್ವನಿಗಳಂತೆ ಪರಿಗಣಿಸಬೇಕೆಂದು ತೀರ್ಮಾನಿಸಿರುವುದು ಕಂಡುಬರುತ್ತದೆ. ಅದಕ್ಕೆ ಪಾಣಿನಿಯು ವರ್ಣಗಳ ಸಂಖ್ಯೆಗಳನ್ನು ನಿರ್ದಿಷ್ಟವಾಗಿ ಹೇಳಿದ್ದಾನೆ.

### 5.7 ವರ್ಣಗಳ ಕ್ರಮವಿಭಜನೆ

ಪ್ರಾಚೀನ ಸಂಸ್ಕೃತ ವರ್ಣಸಮಾಮ್ನಾಯದಲ್ಲಿ ಸ್ವರಗಳನ್ನು ಮೊದಲಿಗೆ ವರ್ಗೀಕರಿಸಿರುವುದು ಕಂಡುಬರುತ್ತದೆ ಉದಾಹರಣೆಗೆ ಪಾಣಿನಿಯ ಮಾಹೇಶ್ವರ ಸೂತ್ರದಲ್ಲಿ ಅ,ಇ,ಉ,ಣ್ ಇತ್ಯಾದಿಯಿಂದ ಆರಂಭವಾಗುವ ಸೂತ್ರವನ್ನು ಕಂಡಾಗ ಇದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಸ್ವರಗಳು ಸ್ವತಂತ್ರ ಉಚ್ಚಾರಣೆಯ ಸಾಮರ್ಥ್ಯ ಹೊಂದಿರುವಂತಹವು, ಸ್ವತಂತ್ರವಾಗಿಬಳಕೆಯಾಗಬಲ್ಲ ಸಾಮರ್ಥ್ಯವಿದೆ. ವ್ಯಂಜನಗಳು ಸ್ವರದ ಸಹಯೋಗದಿಂದಲೇ ಉಚ್ಚಾರಗೊಳ್ಳುತ್ತವೆ. ಪತಂಜಲಿಯು 'ಅನ್ವಗ್

ಭವತಿ ವ್ಯಂಜನಮ್'[110] ಎಂದಿದ್ದಾನೆ. ವರ್ಣಮಾಲೆಯಲ್ಲಿ ಮುಖ್ಯವರ್ಣಗಳು ಸ್ವರಗಳಾಗಿವೆ. ಸ್ವರವನ್ನು 'ಶಾಸಕ'[111] ಎಂದು ಕರೆದಿದ್ದಾನೆ. ಸ್ವರಗಳು ಅಕ್ಷರರಚನೆಯಲ್ಲಿ ಪ್ರಮುಖಪಾತ್ರ ವಹಿಸುವ ಕಾರಣದಿಂದ ಸ್ವರಗಳ ಸಂಖ್ಯೆ ಕಡಿಮೆಯಿದೆ. ಕನ್ನಡವರ್ಣಮಾಲೆಯಲ್ಲಿಯೂ ಸ್ವರಗಳನ್ನು ಮೊದಲಿಗೆ ವರ್ಗೀಕರಿಸಿರುವುದು ಕಂಡುಬರುತ್ತದೆ. ಕೇಶಿರಾಜನು ಶಬ್ದಮಣಿದರ್ಪಣ ಗ್ರಂಥದಲ್ಲಿ ಅಕಾರದಿಂದ ಆದಿಯಾಗಿ ಎಂದು ಸ್ವರಗಳನ್ನು ವರ್ಣ ಸಮಾಮ್ನಾಯ ದಲ್ಲಿ ಮೊದಲಿಗೆ ಸೇರಿಸಿರುವುದು ಕಂಡು ಬರುತ್ತದೆ.

## ಸ್ವರಗಳ ನಂತರ ವರ್ಣಮಾಲೆಯಲ್ಲಿರುವ ವರ್ಣಗಳು

ಸ್ವರಗಳನ್ನು ಕನ್ನಡ ಮತ್ತು ಸಂಸ್ಕೃತ ವರ್ಣಮಾಲೆಯಲ್ಲಿ ಮೊದಲ ಭಾಗದಲ್ಲಿ ವಿವರಿಸಿದರೆ ಸ್ವರದ ನಂತರದ ಸ್ಥಾನ ಮಾತ್ರ ಕನ್ನಡ ಮತ್ತು ಸಂಸ್ಕೃತ ವರ್ಣಮಾಲೆಯಲ್ಲಿ ಏಕಸ್ವರೂಪ ವನ್ನು ಹೊಂದಿಲ್ಲದಿರುವುದು ಕಂಡುಬರುತ್ತದೆ. ಕನ್ನಡವರ್ಣಮಾಲೆಯಲ್ಲಿ ವ್ಯಂಜನಗಳು ಸ್ವರಗಳ ನಂತರಸಮಾಮ್ನಾಯವಾಗಲ್ಪಟ್ಟರೆ ಸಂಸ್ಕೃತದಲ್ಲಿ ಅಂತಃಸ್ಥವರ್ಣಗಳು ಪರಿಚಯಿಸಲ್ಪಟ್ಟಿವೆ. ಅಂತಃಸ್ಥವರ್ಣಗಳೆಂದರೆ ಅರ್ಧಸ್ವರಗಳೆಂದೂ ಅಪೂರ್ಣ ವ್ಯಂಜನಗಳೆಂದೂ ಕರೆಯುತ್ತಾರೆ. ಪಾಣಿನಿಯು ಮಾಹೇಶ್ವರ ಸೂತ್ರದಲ್ಲಿ ಇವುಗಳನ್ನು ಸ್ವರಗಳ ನಂತರದ ಸೂತ್ರವಾಗಿ ಪರಿಗಣಿಸಿದ್ದಾನೆ. ಮತ್ತು ಅಂತಃಸ್ಥಗಳಿಗೆ ವಿಶೇಷವಾದ ಮಹತ್ತ್ವ ನೀಡಿರುವುದು ಕಂಡುಬರುತ್ತದೆ. ಅಂತಃಸ್ಥ ವರ್ಣಗಳಲ್ಲಿ ಆತನ ಸೂತ್ರ ಹ,ಯ,ವ,ರ,ಟ್[112] ಎನ್ನುವುದಾಗಿದೆ. ಕನ್ನಡ ವರ್ಣಮಾಲೆಯಲ್ಲಿ

---

110 "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ.ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮೈಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 256 ರಲ್ಲಿ ನಾಲ್ಕನೇ ಪ್ಯಾರಾ, ಮೂರನೇಸಾಲು.

111 ಮೇಲಿನದೇ, ಐದನೇಸಾಲು.

112 "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮೈಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 250, ಮೊದಲನೇಸಾಲು.

ಅಂತಃಸ್ಥವರ್ಣಗಳು ವರ್ಗೀಯವ್ಯಂಜನಗಳ ನಂತರ ಬಂದಿವೆ ಮತ್ತು ಅಂತಃಸ್ಥವರ್ಣಗಳ ಸರಣಿಯಲ್ಲಿ 'ಹ' ವರ್ಣವಿಲ್ಲದಿರುವುದು ಕಂಡು ಬರುತ್ತದೆ. ಯ,ರ,ಲ,ವ ಶ್ರೇಣಿಯಲ್ಲಿ ಮುಂದಿನ ವರ್ಣವಾಗಿ ಶ ವರ್ಣ ಬಂದಿದೆ. ಊಷ್ಮವರ್ಣಗಳ ಪಂಕ್ತಿಯಲ್ಲಿ ಇದಕ್ಕೆ ಸ್ಥಾನಕಲ್ಪಿಸಿರುವುದು ಕಂಡು ಬರುತ್ತದೆ. ಕನ್ನಡ ವರ್ಣಮಾಲೆಯಲ್ಲಿ ಅಂತಃಸ್ಥ ವರ್ಣಗಳ ಅನುಕ್ರಮಣಿಕೆಯಲ್ಲಿ ಸಂಸ್ಕೃತ ಮತ್ತು ಕನ್ನಡ ವರ್ಣಸಮಾಮ್ನಾಯದಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಸಂಸ್ಕೃತ ವರ್ಣಮಾಲೆಯಲ್ಲಿ ಯ,ವ,ರ,ಲ ಗಳು ಅನುಕ್ರಮವಾಗಿ ಬಂದಿದ್ದರೆ ಕನ್ನಡ ವರ್ಣಮಾಲೆಯಲ್ಲಿ ಯ,ರ,ಲ,ವ ಸರಣಿ ಬಂದಿದೆ. ಇವೆರಡು ಭಿನ್ನವಾಗಿ ಬಂದಿರುವುದಕ್ಕೆ ಕಾರಣ ಗಳೇನು ಎನ್ನುವುದನ್ನು ಅರಿಯುವುದು ಅವಶ್ಯಕವಾಗಿದೆ. ಮೊದಲನೆಯಯದಾಗಿ ಸಂಸ್ಕೃತದಲ್ಲಿ ಬರುವಿಕೆಯನ್ನು ಗಮನಿಸಿದಾಗ ವರ್ಣಗಳ ಉಚ್ಚಾರಣೆಯ ದೃಷ್ಟಿಯಿಂದ ಇದು ಅರ್ಥಪೂಣವಾದುದು. ಕ್ರಮವಾಗಿ ಅ,ಇ,ಉ,ಋ,ಲೃ ಗಳಿಗೆ ಕ್ರಮವಾಗಿ ಉಚ್ಚಾರಣಾ ಸ್ಥಾನದ ದೃಷ್ಟಿಯಿಂದ ಇವು ಪರಸ್ಪರ ಸಾದೃಶ್ಯವಿರುವುದರ ಜೊತೆಗೆ ಮುಖವಿವರದಲ್ಲಿ ಒಂದು ಕ್ರಮದಲ್ಲಿ ಬರುವಂತಹ ಧ್ವನ್ಯಂಗಗಳಾಗಿವೆ. ಕಂಠದಿಂದ ಆರಂಭಿಸಿ ಒಂದು ನಿಶ್ಚಿತ ಸರಣಿಯಲ್ಲಿ ಬಂದಿರುವುದನ್ನು ಗಮನಿಸಬಹುದಾಗಿದೆ.

ಸಂಸ್ಕೃತ ವರ್ಣ ಸಮಾಮ್ನಾಯದಲ್ಲಿ ಅಂತಃಸ್ಥಗಳ ನಂತರ ಬಂದಿರುವಂತದ್ದು ವರ್ಗೀಯವ್ಯಂಜನಾಕ್ಷರಗಳ ಕೊನೆಯ ಅಕ್ಷರಗಳಾದ ಅನುನಾಸಿಕಗಳದ್ದು ಪಾಣಿನಿಯು ಹೇಳಿದ ಮಾಹೇಶ್ವರ ಸೂತ್ರದಲ್ಲಿ ಞ,ಮ,ಙ,ಣ,ನಮ್ ಎಂದು ಉಲ್ಲೇಖವಾಗಿದೆ. ಕನ್ನಡ ವರ್ಣಮಾಲೆಯಲ್ಲಿ ಇವುಗಳನ್ನು ಪ್ರತಿಯೊಂದು ವರ್ಗೀಯವ್ಯಂಜನದ ಕೊನೆಭಾಗದಲ್ಲಿ ಸೇರಿಸಿ ಹೇಳುವ ಪರಂಪರೆಯಿದೆ. ಕನ್ನಡಭಾಷೆಯಲ್ಲಿ ಅನುನಾಸಿಕಗಳ ಬಳಕೆಯ ಬಗ್ಗೆ ಗಮನಿಸಿದಾಗ ಙ ಮತ್ತಞ ಗಳ ಬಳಕೆ ತೀರಾ ಅತ್ಯಲ್ಪ ಮತ್ತು ಇವು ಸ್ವತಂತ್ರವಾಗಿ ಎಲ್ಲಿಯೂ ಪ್ರಯೋಗ ಸಾಮರ್ಥ್ಯವನ್ನು ಹೊಂದಿಲ್ಲ. ಉಳಿದ ಮ,ನ,ಣ ಇವು ಸ್ವಂತತ್ರವಾಗಿ ಪೂರ್ಣ ಪ್ರಮಾಣದ ವರ್ಣಗಳಾಗಿ ಪ್ರಯೋಗವಾಗುವ ಸಾಮರ್ಥ್ಯಹೊಂದಿವೆ.

ಸಂಸ್ಕೃತ ವರ್ಣ ಸಮಾಮ್ನಾಯದಲ್ಲಿ ಅನುನಾಸಿಕ ವರ್ಣಗಳ ನಂತರ ವರ್ಗೀಯವ್ಯಂಜನಗಳನ್ನು ಹೇಳಿದ್ದಾರೆ. ಇವುಗಳಲ್ಲಿ ಮೊದಲಿಗೆ ಪ್ರತಿಯೊಂದು ವರ್ಗದ ಚತುರ್ಥವರ್ಣಗಳನ್ನು 'ಝ.ಭ.ಘ.ಢ.ಧ' ನಂತರ ವರ್ಗೀಯವ್ಯಂಜನದ ತೃತೀಯ

ವರ್ಣಗಳಾದ 'ಜ,ಬ,ಗ,ಡ,ದ' ನಂತರ ದ್ವಿತೀಯ ವರ್ಣಗಳಾದ 'ಖ,ಫ,ಛ,ಠ,ಥ' ನಂತರ ವರ್ಗೀಯವ್ಯಂಜನದ ಮೊದಲವರ್ಣಗಳಾದ 'ಕ,ಪ,ಚ,ಟ,ತ' ಗಳನ್ನು ಹೆಸರಿಸಲಾಗಿದೆ. ಆದರೆ ಕನ್ನಡ ವರ್ಣಮಾಲೆಯಲ್ಲಿಸ್ವರಗಳ ನಂತರದ ಸ್ಥಾನ ವರ್ಗೀಯ ವ್ಯಂಜನಗಳಿಗಿವೆ. ಸಂಸ್ಕೃತ ವರ್ಣ ಸಮಾಮ್ನಾಯದಲ್ಲಿ ವರ್ಗೀಯವ್ಯಂಜನಗಳ ನಂತರ ಊಷ್ಮವರ್ಣಗಳಾದ ಶ,ಷ,ಸ,ಹ ವರ್ಣಗಳನ್ನು ಹೇಳಲಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಜಿಹ್ವಾಮೂಲೀಯ, ಉಪಾಧ್ಮಾನೀಯ, ವಿಸರ್ಗ,ಅನುಸ್ವಾರ, ಯಮ ಮತ್ತಿತರ ವರ್ಣಗಳನ್ನು ವರ್ಣ ಸಮಾಮ್ನಾಯ ದಲ್ಲಿ ಸೇರಿಸದಿರುವುದು ಕಂಡುಬರುತ್ತದೆ. ಇವು ಭಾಷೆಯಲ್ಲಿ ಸ್ವತಂತ್ರ ಪ್ರಯೋಗ ಸಾಮರ್ಥ್ಯಹೊಂದಿಲ್ಲದ ಕಾರಣದಿಂದ ವರ್ಣಸಮಾಮ್ನಾಯದಲ್ಲಿ ಅವಕಾಶವಿಲ್ಲ. ಪತಂಜಲಿಯು ಮಹಾಭಾಷ್ಯದಲ್ಲಿ ಇವುಗಳನ್ನು ಅಯೋಗವಾಹಗಳು ಎಂದು ಕರೆದಿದ್ದಾನೆ. ಕೇಶಿರಾಜನು ಕನ್ನಡ ಶುದ್ಧಗೆಯನ್ನು ಹೇಳುವಾಗ ಮೊದಲು ಯೋಗವಾಹಗಳು ಎಂದು ಬಳಸಿದ್ದಾನೆ. ಆದರೆ ಕನ್ನಡ ಶುದ್ಧಗೆಯ ಕುರಿತು ಕನ್ನಡದಲ್ಲಿ ಬಳಕೆಯಲ್ಲಿಲ್ಲದವರ್ಣಗಳನ್ನು ಕೈಬಿಡುವಾಗ ಇವುಗಳನ್ನು ಸೇರಿಸಲಿಲ್ಲ. ಒಟ್ಟಾರೆಯಾಗಿ ಪಾಣಿನಿಯು ವರ್ಣಮಾಲೆಯಲ್ಲಿ ಪರಿಪೂರ್ಣತೆಯನ್ನು ಹೊಂದಿರುವ ಸ್ವತಂತ್ರ ಉಚ್ಚಾರ ಮತ್ತು ಪ್ರಯೋಗ ಸಾಮರ್ಥ್ಯಹೊಂದಿರುವ ವರ್ಣಗಳನ್ನು ಇನ್ನೊಂದರ ಸಹಾಯವಿಲ್ಲದೇ ಉಚ್ಚಾರ ವಾಗಬಲ್ಲ ಗುಣಗಳನ್ನು ಹೊಂದಿರುವ ವರ್ಣಗಳಿಗೆ ಮಾತ್ರ ವರ್ಣಮಾಲೆಯಲ್ಲಿ ಸ್ಥಾನ ಕಲ್ಪಿಸಿದ್ದಾನೆ. ಕನ್ನಡ ವರ್ಣಮಾಲೆಯು ಸಂಸ್ಕೃತ ಭಾಷೆಯವರ್ಣಮಾಲೆಯ ಪರಂಪರೆಯನ್ನು ಅನುಸರಿಸುವಾಗ ಕನ್ನಡ ಸಂರಚನೆಗೆ ಒಗ್ಗಿಕೊಳ್ಳುವ ಧ್ವನಿನಿಗಳನ್ನು ಮಾತ್ರ ಸ್ವೀಕರಿಸಿದೆ ಮತ್ತು ಕನ್ನಡದಲ್ಲಿ ಬಳಕೆಯಲ್ಲಿರು ವರ್ಣಗಳನ್ನು ಸೇರಿಸಿಕೊಂಡು ರಚಿತವಾಗಿದೆ. ಉದಾಹರಣೆಗೆ ಸಂಸ್ಕೃದಲ್ಲಿಲ್ಲದ ಹ್ರಸ್ವ 'ಎ' ಮತ್ತು 'ಒ' ಗಳು ಕನ್ನಡ ವರ್ಣಮಾಲೆಯಲ್ಲಿರುವುದು ಕಂಡುಬರುತ್ತದೆ. ಸಂಸ್ಕೃತ ಮತ್ತು ಕನ್ನಡ ವರ್ಣಮಾಲೆಯಲ್ಲಿರುವ ವರ್ಣಗಳ ಅನುಕ್ರಮಣಿಕೆಯನ್ನು ಈಕೆಳಗಿನ ಕೋಷ್ಟಕದ ಮೂಲಕ ತೋರಿಸಬಹುದಾಗಿದೆ.

| ಸಂಸ್ಕೃತ ವರ್ಣಮಾಲೆ | ಕನ್ನಡ ವರ್ಣಮಾಲೆ |
| --- | --- |
| ಸ್ವರಗಳು | ಸ್ವರಗಳು |
| ಅಂತಃಸ್ಥವರ್ಣಗಳು | ವರ್ಗೀಯವ್ಯಂಜನಗಳು |
| ಅನುನಾಸಿಕಗಳು | ಅವರ್ಗೀಯ ವ್ಯಂಜನಗಳು<br>ದೇಶೀಯ ವರ್ಣಗಳು |
| ವರ್ಗೀಯವ್ಯಂಜನಗಳು | ಯೋಗವಾಹಗಳು |
| ಊಷ್ಮವರ್ಣಗಳು | |
| ಅಯೋಗವಾಹಗಳು | |

## 5.8 ಸ್ವರಗಳ ಅನುಕ್ರಮಣಿಕೆ.

ಸ್ವರಗಳಲ್ಲಿ ಪ್ರಧಾನ ಸ್ವರಗಳಾಗಿ ಸಂಸ್ಕೃತ ಮತ್ತು ಕನ್ನಡ ವಣಮಾಲೆಯನ್ನು ಅಧ್ಯಯನ ಮಾಡಿದರೆ ಅ,ಇ,ಉ,ಋ, ಎ/ಏ,ಒ/ಓ, ಗಳೆಂದು ಹೇಳಬಹುದು. ಮೊದಲಿಗೆ ಅ ಕುರಿತು ಅಧ್ಯಯನ ಮಾಡಿದರೆ 'ಅ' ಅಕ್ಷರವು ವರ್ಣಮಾಲೆಯಲ್ಲಿ ಮೊಟ್ಟ ಮೊದಲ ಅಕ್ಷರವಾಗಿ ಯಾಕೆಬಂದಿದೆ ಎಂಬುದಕ್ಕೆ ಸಾಕಷ್ಟು ಆಧಾರಗಳು ಸಿಗುತ್ತವೆ, ಮೊದಲನೆಯದಾಗಿ ಸಾಮಾನ್ಯವಾಗಿ ಇದು ಕಂಠ್ಯ ಸ್ವರವಾದ ಕಾರಣ ,ಕಂಠವು ಧ್ವನ್ಯುತ್ಪಾದನಾ ಸ್ಥಾನಗಳಲ್ಲಿ ಮೊದಲ ಸ್ಥಾನ ದಲ್ಲಿರುವ ಕಾರಣ ಅ ವರ್ಣಮಾಲೆಯಲ್ಲಿ ಮೊದಲಿಗೆ ಬಂದಿದೆ. ಎರಡನೇಯದಾಗಿ ಅ ವರ್ಣವು ಅತ್ಯಂತ ವ್ಯಾಪಕವಾದ ವರ್ಣವಾಗಿದೆ. ಪರೋಕ್ಷವಾಗಿ ಅಥವಾ ಅಪರೋಕ್ಷವಾಗಿ ಅ ವರ್ಣವು ಎಲ್ಲ ವರ್ಣಗಳಲ್ಲಿ ಇದೆ. ಅದಕ್ಕೋಸ್ಕರ ವರ್ಣಮಾಲೆಯಲ್ಲಿ ಮೊದಲ ವರ್ಣವಾಗಿ ಬಂದಿದೆ. ಉದಾಹರಣೆಗೆ ಪ್ರತಿಯೊಂದು ವ್ಯಂಜನಾಕ್ಷರಗಳಲ್ಲಿ ಅ ಸ್ವರ ಸೇರಿಕೊಂಡಿದೆ. ಕ್+ಅ= ಕ,

ಸ್+ಅ=ಸ ಇತ್ಯಾದಿ, ಅದೇರೀತಿ ಐ ಎನ್ನುವ ರಚನೆಯಲ್ಲಿ ಅ+ಈ= ಐ, ಓ ರಚನೆಯಲ್ಲಿ ಅ+ಊ=ಓ ಇತ್ಯಾದಿ ಕೋ ಎನ್ನುವ ರಚನೆಯಲ್ಲಿ ಕ್+ಓ (ಕ್+ಅ+ಊ) ಕೈ ರಚನೆಯಲ್ಲಿ ಕ್+ ಅ+ಐ ಇತ್ಯಾದಿ ಗಮನಿಸಿದಾಗ ಇದರ ವ್ಯಾಪಕತೆ ಅರ್ಥವಾಗುತ್ತದೆ. ಮನು ತನ್ನ ಧರ್ಮ ಶಾಸ್ತ್ರಗ್ರಂಥದಲ್ಲಿ ಅ ಕಾರಕ್ಕೆ ಪ್ರಣವ ಸ್ವರೂಪ ಕೊಟ್ಟಿದ್ದಾನೆ 'ಅಕಾರಂ ಚಾಪ್ಯುಕಾರಂ ಚ ಮಕಾರಂಚ ಪ್ರಜಾಪತಿಃ'[113] ಎಂದು ಉಲ್ಲೇಖ ಮಾಡಿದ್ದನ್ನು ಗಮನಿಸಬಹುದಾಗಿದೆ. ಧ್ವನಿ ಪರಿವರ್ತನೆಯಲ್ಲಿ ಎಲ್ಲ ಸ್ವರಗಳ ಸ್ಥಾನದಲ್ಲಿ ಅ ಹಾಗೂ ಅ ಸ್ಥಾನದಲ್ಲಿ ಎಲ್ಲ ಸ್ವರಗಳು ಬರುತ್ತವೆ. ಆದ್ದರಿಂದ ಅ ಎಲ್ಲ ಸ್ವರಗಳ ಜನನಿಯಾಗಿದೆ. ನಂದಿಕೇಶ್ವರನು ನಂದಿಕೇಶ್ವರ ಸಂಹಿತೆಯಲ್ಲಿ 'ಅಕಾರಃ ಸರ್ವವರ್ಣಸ್ಯ ಪ್ರಕಾಶಃ ಪರಮೇಶ್ವರಃ' ಅದೇರೀತಿ ಐತರೇಯ ಆರಣ್ಯಕದಲ್ಲಿ 'ಅಕಾರೋ ವೈ ಸರ್ವಾ ವಾಕ್ ಸೇಷಾ ಸ್ಪರ್ಶೋರ್ಷ್ಮಭಿರ್ವ್ಯಜ್ಯಮಾನಾ ಬಹವೀ ನಾನಾರೂಪಾ ಭವತಿ'[114] ಅಕಾರದಲ್ಲಿ ಎಲ್ಲ ಮಾತು/ ಬಾಷೆ / ವರ್ಣಗಳು ನಿಂತಿವೆ. ಸ್ಪರ್ಶಾದಿವ್ಯಂಜನಗಳೂ ನಾನಾರೂಪದಲ್ಲಿ ಅಕಾರ ಸಹಿತವಾಗಿಯೇ ಬಳಕೆಯಾಗುತ್ತವೆ ಎಂದು ಉಲ್ಲೇಖವಾಗಿರುವುದನ್ನು ಗಮನಿಸಬಹುದಾಗಿದೆ. ಮಗು ಸಾಮಾನ್ಯವಾಗಿ ಮಾತನಾಡಲು ರೂಢಿಸಿಕೊಳ್ಳುವುದು ಅಕಾರದಿಂದಲೇ. ಅಮ್ಮ, ಅಪ್ಪ ಇತ್ಯಾದಿ. ಓಂಕಾರಶ್ಚ ಅಥ ಶಬ್ದಶ್ಚ ಎಂದು ಪ್ರಾಚೀನರು ಅಕಾರ ವನ್ನು ಅತ್ಯಂತ ಮಹತ್ತರವಾದ ಸ್ಥಾನದಲ್ಲಿ ನಿಲ್ಲಿಸಿದ್ದಾರೆ.

ಅ ವರ್ಣದ ತರುವಾಯ ವರ್ಣಮಾಲೆಯಲ್ಲಿ ಬರುವ ಎರಡನೇ ವರ್ಣ ಇ ಸ್ವರ. ಅ ಕಾರದ ಧ್ವನ್ಯುತ್ಪಾದನಾ ಸ್ಥಾನ ಕಂಠ . ಕಂಠದ ನಂತರದ ಮುಖವಿವರದಲ್ಲಿಯ ಧ್ವನ್ಯುತ್ಪಾದನಾ ಸ್ಥಾನ ತಾಲವ್ಯ ವಾಗಿದೆ. ಆದ್ದರಿಂದ ವರ್ಣಮಾಲೆಯಲ್ಲಿ ಇ ವರ್ಣವನ್ನು ಎರಡನೇಸ್ಥಾನದಲ್ಲಿ ಬರುವಂತೆ ಅವಕಾಶ ಕಲ್ಪಿಸಲಾಗಿದೆ. ಇ ವರ್ಣವನ್ನು ಇನ್ನೊಂದು ದೃಷ್ಟಿಯಿಂದ ದ್ವಿತೀಯ ವರ್ಣವಾಗಿ ವರ್ಣಮಾಲೆಯಲ್ಲಿ ಸ್ಥಾನಕಲ್ಪಿಸಿರುವುದನ್ನು ಸಮರ್ಥಿಸಬಹುದಾಗಿದೆ. ಅ ವರ್ಣವನ್ನು ಒಮದು ವಿಸಿಷ್ಟ ವರ್ಣವಾಗಿ ವ್ಯಾಪಕ

---

[113] ಮನುಸ್ಮೃತಿ, ಚೌಕಂಬಾ ಪ್ರಕಾಶನ, ಉತ್ತರ ಪ್ರದೇಶ. ಅಧ್ಯಾಯ 2 ಶ್ಲೋಕ 76.

[114] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 254 ರಲ್ಲಿ ಒಂದನೇ ಪ್ಯಾರಾ.

ವರ್ಣವಾಗಿ ಅಧ್ಯಯನಮಾಡಿದಂತೆ ಇ ವರ್ಣಕ್ಕೂ ಕೂಡ ಅವಕಾಶ ಕೊಡಬಹುದಾಗಿದೆ. ಅ ವರ್ಣವು ಎಲ್ಲ ಸ್ವರ ಮತ್ತು ವ್ಯಂಜನಗಳ ಜನನಿಯಾದರೂ ಇ ಸ್ವರದ ಧ್ವನ್ಯುತ್ಪಾದನೆಯನ್ನು , ರಚನೆಯನ್ನು ಗಮನಿಸಿದಾಗ ಇದಕ್ಕೆ ಅಪವಾದ ಕಾಣುತ್ತದೆ. ಇ ಸ್ವರವು ಅ ಕ್ಕಿಂತ ಭಿನ್ನವಾಗಿದೆ.ಈ ಕೆಳಗಿನ ಉದಾಹರಣೆಯ ಮೂಲಕ ಇನ್ನಷ್ಟು ಸ್ಪಷ್ಟ ಪಡಿಸ ಬಹುದಾಗಿದೆ.

1 ಅ+ ಈ= ಏ ಗಣ + ಈಶ =ಗಣೇಶ

2 ಅ+ಉ= ಓ ರಾಜ್ಯ+ ಉತ್ಸವ = ರಾಜ್ಯೋತ್ಸವ

3 ಇ+ಅ= ಯ ಅತಿ+ ಅಂತ= ಅತ್ಯಂತ

ಈ ಮೇಲಿನ ಮೂರು ಉದಾಹರಣೆಯನ್ನು ಗಮನಿಸಿದಾಗ ಮೊದಲ ಎರಡು ಉದಾಹರಣೆಯಲ್ಲಿ ಸಂಧಿಪ್ರಕ್ರಿಯೆ ನಡೆಯುವಾಗ ಅ ವರ್ಣವು ಯಾವ ಪಾತ್ರವಹಿಸಿತ್ತೋ ಅದೇ ರೀತಿಯ ಪಾತ್ರವನ್ನು ಇ ವರ್ಣವು ವಹಿಸಿದೆ. ಅಂದರೆ ಸ್ವತಂತ್ರವಾಗಿ ಅರಹಿತವಾಗಿ ಅಥವಾ ಅ ಕ್ಕಿಂತ ಪ್ರತ್ಯೇಕವಾಗಿ ಇ ವರ್ಣವು ಸ್ಥಾನವನ್ನು ಕಲ್ಪಿಸಿಕೊಂಡಿದೆ ಎಂದರೆ ತಪ್ಪಾಗದು. ಮತ್ತು ಇ ವವರ್ಣವು ಅ ವರ್ಣದ ಭಾಗಶಃ ಉಚ್ಚಾರಣೆಯನ್ನಾಗಲೀ ವರ್ಣರಚನಾ ವಿನ್ಯಾಸವನ್ನಾಗಲಿ ಹೊಂದಿಲ್ಲ ಒಂದು ಸ್ವಂತ ಅಸ್ತಿತ್ವಹೊಂದಿರುವ ವರ್ಣವಾಗಿದೆ ಎಂದರೆ ತಪ್ಪಾಗದು. ಇ ವರ್ಣವು ಅ ವರ್ಣದಂತೆ ಸವರ್ಣ ಸ್ವರಗಳನ್ನು ಹೊಮದಿರುವುದು ಇದಕ್ಕೆ ಪೂರಕವಾಗಿದೆ ಎನ್ನಬಹುದು. ಅದ್ದರಿಂದ ಇ ವರ್ಣಕ್ಕೆ ವರ್ಣಮಾಲೆಯಲ್ಲಿ ಎರಡನೇ ಸ್ಥಾನದಲ್ಲಿ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ.

ಇ ಸ್ವರದ ನಂತರ ಬರುವ ವರ್ಣ ಉ ವರ್ಣವಾಗಿದೆ. ಇ ವರ್ಣ ಸ್ವಂತಿಕೆಯನ್ನು ಹೊಂದಿರುವಂತೆ ಉ ವರ್ಣವೂ ಕೂಡ ಸ್ವತಂತ್ರ ಅಸ್ತಿತ್ವ ಹೊಂದಿದೆ ಎನ್ನಲಡ್ಡಿಯಿಲ್ಲ. ಉ ವರ್ಣದ ಉಚ್ಚಾರಣಾ ಸ್ಥಾನವು ಧ್ವನ್ಯುತ್ಪಾದನಾಸ್ಥಾನದ ಅನುಕ್ರಮಣಿಕೆಯಲ್ಲಿ ಅ ಮತ್ತು ಇ ವರ್ಣದ ತರುವಾಯ ಬರುವುದದರಿಂದ ವರ್ಣಮಾಲೆಯಲ್ಲಿ ಉ ವರ್ಣವನ್ನು ಮೂರನೆಯ ಪ್ರಧಾನ ವರ್ಣವಾಗಿ ಕಲ್ಪಿಸಿಕೊಟ್ಟಿರುವುದು ಸೂಕ್ತವಾದುದಾಗಿದೆ. ಅದೇರೀತಿ ಉ ವರ್ಣವು ಇ ವರ್ಣದಷ್ಟು ಬಳಕೆಯನ್ನು ಹೊಂದಿಲ್ಲದ ಕಾರಣ ವರ್ಣಮಾಲೆಯಲ್ಲಿ ತೃತೀಯ ಸ್ಥಾನದಲ್ಲಿ ಬಂದಿದೆ . ಉ ವರ್ಣವು ಸ್ವತಂತ್ರ ಅಸ್ತಿತ್ವದ

ವರ್ಣವಾಗಿದೆ ಎನ್ನುವುದನ್ನು ಈ ಕೆಳಗಿನ ಉದಾಹರಣೆಯ ಮೂಲಕ ಸ್ಪಷ್ಟ ಪಡಿಸಬಹುದಾಗಿದೆ.

1 ಅ+ ಈ= ಏ ಗಣ + ಈಶ =ಗಣೇಶ

2 ಅ+ಉ= ಓ ರಾಜ್ಯ+ ಉತ್ಸವ = ರಾಜ್ಯೋತ್ಸವ

3 ಇ+ಅ= ಯ ಅತಿ+ ಅಂತ= ಅತ್ಯಂತ

4 ಉ+ಅ= ವ ಮನು+ ಅಂತರ= ಮನ್ವಂತರ

ಈ ಮೆಲಿನ ನಾಲ್ಕು ಉದಾಹರಣೆಯನ್ನು ಗಮನಿಸಿದಾಗ ಮೊದಲ ಮೂರು ಉದಾಹರನೆಯಲ್ಲಿ ಸಂಧಿಪ್ರಕ್ರಿಯೆ ನಡೆಯುವಾಗ ಅ ಮತ್ತು ಇ ವರ್ಣವು ಯಾವ ಪಾತ್ರವಹಿಸಿತ್ತೋ ಅದೇ ರೀತಿಯ ಪಾತ್ರವನ್ನು ನಾಲ್ಕನೆಯ ಉದಾಹರಣೆಯಲ್ಲಿ ಉ ವರ್ಣವು ವಹಿಸಿದೆ. ಅಂದರೆ ಸ್ವತಂತ್ರವಾಗಿ ಅ ರಹಿತವಾಗಿ ಅಥವಾ ಅ ಕ್ಕಿಂತ ಪ್ರತ್ಯೇಕವಾಗಿ ಉ ವರ್ಣವು ಸ್ಥಾನವನ್ನು ಕಲ್ಪಿಸಿಕೊಂಡಿದೆ ಎಂದರೆ ತಪ್ಪಾಗದು. ಮತ್ತು ಉ ವರ್ಣವು ಅ ಮ ತ್ತು ಇವರ್ಣದ ಭಾಗಶಃ ಉಚ್ಚಾರಣೆಯನ್ನಾಗಲೀ ವರ್ಣರಚನಾ ವಿನ್ಯಾಸವನ್ನಾಗಲಿ ಹೊಂದಿಲ್ಲ ಒಂದು ಸ್ವಂತ ಅಸ್ತಿತ್ವಹೊಂದಿರುವ ವರ್ಣವಾಗಿದೆ ಎಂದರೆ ತಪ್ಪಾಗದು. ಮೊದಲ ಮೂರು ವರ್ಣಗಳಾದ ಅ,ಇ,ಉ ಗಳನ್ನು ಪಾಣಿನಿಯು ವರ್ಣ ಸಮಾಮ್ನಾಯದಲ್ಲಿ ಮೊದಲಿಗೆ ಹೇಳಿದ್ದಾನೆ. ಮತ್ತು ಆತನು ಮಾಹೇಶ್ವರ ಸೂತ್ರದಲ್ಲಿ ಮೊದಲ ಸೂತ್ರವಾಗಿ ಪರಿಚಯಿಸಿದ್ದಾನೆ. ಬಹುಶಃ ವರ್ಣಮಾಲೆಯಲ್ಲಿ ಪ್ರಧಾನ ಮತ್ತು ಸ್ವತಂತ್ರ ಅಸ್ತಿತ್ವವುಳ್ಳ ಸ್ವರಗಳಾಗಿವೆ, ಇನ್ನುಳಿದ ಋ,ಲೃ, ಎ,ಒ,ಗಳು ಸ್ವತಂತ್ರ ಸ್ವರಗಳಾಗದೇ ಸಂಯುಕ್ತ ಸ್ವರಗಳೆಂದು ಕರೆಯುವುದು ಸೂಕ್ತವಾಗಿದೆ. ಉದಾಹರಣೆಗೆ ಎ ಸ್ವರದ ರಚನೆಯಲ್ಲಿ ಅ+ಇ ಸೇರಿ ಎ ರಚನೆಯಾಗಿದೆ, ಅ+ಉ ಸೇರಿ ಒ ರಚನೆಯಾಗಿದೆ. ಇತ್ಯಾದಿ, ಅ, ಇ,ಉ, ವರ್ಣಗಳು ಕನ್ನಡ ಮತ್ತು ಸಂಸ್ಕೃತ ವರ್ಣಮಾಲೆಯಲ್ಲಿ ಏಕ ರೀತಿಯಲ್ಲಿ ಏಕಾಭಿಪ್ರಾಯದಲ್ಲಿ ಬಳಕೆಯಾಗಿದೆ.

ಋ ಮತ್ತ ಲೃ ಧ್ವನ್ಯುತ್ಪಾದನಾ ಸ್ಥಾನಗಳು ಕ್ರಮವಾಗಿ ಮೂರ್ಧಾ ಮತ್ತು ದಂತ ಗಳಾಗಿವೆ. ಆದ್ದರಿಂದ ವರ್ಣಮಾಲೆಯಲ್ಲಿ ಇವುಗಳಿಗೆ ಅ,ಇ,ಉ ಗಳಿಗೆ ಅವಕಾಶ ಕಲ್ಪಿಸಿಕೊಡಲಾಗಿದೆ. ಋ ಮತ್ತು ಲೃ ಗಳು ಭಾಗಶಃ ಸಮಾನಾಕ್ಷರಗಳೆಂದು ಹೇಳಬಹುದು. ರ್, ಮತ್ತು ಸ್ವರಭಕ್ತಿಯ ಅಂಶ ಎರಡೂ ವರ್ಣಗಲಲ್ಲಿ ಏಕರೂಪವಾಗಿದೆ. ಆದರೆ ವಾಸ್ತವದಲ್ಲಿ ಋ ಮತ್ತು ಲೃ ವರ್ಣಗಳು ಸಂಧಿ ಅಥವಾ

ಮಿಶ್ರ ಸ್ವರಗಳಾಗಿವೆ. ಈ ವರ್ಣಗಳಲ್ಲಿ ಸ್ವರ ಮತ್ತು ವ್ಯಂಜನಗಳ ಅಪೂರ್ಣವಾದ ಭಾಗಗಳು ಇವೆ. ಸ್ವರ ಭಕ್ತಿ ಮತ್ತು ವ್ಯಂಜನಭಕ್ತಿ ಮಿಶ್ರಿತವಾಗಿದೆ. ಋ ಕಾರ ದಲ್ಲಿ ರ್ ಅಂಶವಿದೆ. ಪಾಣಿನಿಯು ಇದನ್ನು ಸ್ವೀಕಾರಮಾಡಿದ್ದಾನೆ. ಈತನ ಸೂತ್ರ 'ಪ್ರಶಾಸ್ತೃಣಾಮ್'[115] ಅದೇರೀತಿ ಇನ್ನೊಂದು ಸೂತ್ರ 'ಕ್ಲೃಪಃ'[116] ದಿಂದ ಇದು ಸ್ಪಷ್ಟಗೊಳ್ಳುತ್ತದೆ. ಸಂಸ್ಕೃತ ಭಾಷೆಯಲ್ಲಿ ಋ ಮತ್ತು ಲೃ ವರ್ಣಗಳು ಕಂಡುಬರುತ್ತವಾದರೂ ಕನ್ನಡ ಭಾಷೆಯಲ್ಲಿ ಋಕಾರ ಸಂಸ್ಕೃತದ ಪ್ರಭಾವದಿಂದ ಬಂದಿದೆಯಾದರೂ ಲೃ ಕಾರ ಕ್ಕೆ ಕನ್ನಡ ಭಾಷೆಯಲ್ಲಿ ಅಸ್ತಿತ್ವವನ್ನು ನೀಡಿಲ್ಲ. ವರ್ಣಮಾಲೆಯಲ್ಲಿ ಪ್ರಧಾನ ಅಸ್ತಿತ್ವ ವಿರುವ ಅ,ಇ,ಉ, ವರ್ಣಗಳಿಗೆ ಸ್ಥಾನ ಕಲ್ಪಿಸಿ ಅಪೂರ್ಣ ಸ್ವರ ಮತ್ತು ಅಪೂರ್ಣ ವ್ಯಂಜನಾಂಶಗಳನ್ನು ಹೊಂದಿರುವ ಋ ಮತ್ತು ಲೃ ವರ್ಣಗಳಿಗೆ ಅವಕಾಶ ಕಲ್ಪಿಸಿರುವುದು ಸೂಕ್ತವಾದುದಾಗಿದೆ.

ಋ ಮತ್ತು ಲೃಗಳ ತರುವಾಯ ಎ ಮತ್ತು ಒ ಗಳಿಗೆ ಸ್ಥಾನ ಕಲ್ಪಿಸಲಾಗಿದೆ. ಸಂಸ್ಕೃತ ಭಾಷೆಯಲ್ಲಿ ಹ್ರಸ್ವ ಎ ಮತ್ತು ಒ ಗಳಿಗೆ ಸ್ಥಾನವಿಲ್ಲ. ಕೇವಲ ದೀರ್ಘ ಸ್ವರಗಳಿಗೆ ಮಾತ್ರ ಅವಕಾಶ ಕಲ್ಪಿಸಲಾಗಿದೆ. ಎ ಮತ್ತು ಏ ಗಳು ಸವರ್ಣ ಸ್ವರಗಳೆಂದು ಹೇಳಬಹುದು. ಇದು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ಕನ್ನಡ ಭಾಷೆಗೆ ಮಾತ್ರ ಸೀಮಿತವಾದುದಾಗಿದೆ. ಅ ಮತ್ತು ಆ ವರ್ಣಗಳು, ಇ ಮತ್ತು ಈ ವರ್ಣಗಳು ಉ ಮತ್ತು ಊ ವರ್ಣಗಳು ಮಾಡುವ ಕ್ರಿಯೆಯನ್ನು ಎ ಮತ್ತು ಏ ಗಳು ಮಾಡುವುದನ್ನು ಕೆಲವು ಉದಾಹರಣೆಗಳಲ್ಲಿ ನೋಡಬಹುದು. ವಾಸ್ತವವಾಗಿ ಸವರ್ಣ ಪದ್ಧತಿಯು ಸಂಸ್ಕೃತದ ಕೊಡುಗೆಯಾದರೂ ಸಂಸ್ಕೃತದಲ್ಲಿ ಎ ಮತ್ತು ಏ ವರ್ಣಗಳ ಸವರ್ಣವನ್ನು ನಾವು ಕೆಲವು ಪದಗಳಲ್ಲಿ ಕಾಣ ಬಹುದಾಗಿದೆ. ಮತ್ತೇನು ಎನ್ನುವ ಪದವನ್ನು ಬಿಡಿಸಿ ಬರೆದಾಗ ಮತ್ತು + ಏನು ಎಂದು ಬರೆಯಬಹುದಾಗಿದೆ. ಅದನ್ನೆ ಇನ್ನೊಂದು

---

[115] ಪಾಣಿನಿಯ ಅಷ್ಟಾಧ್ಯಾಯೀ ಚೌಕಂಬಾಪ್ರಕಾಶನ 1960,ಆರನೇ ಅಧ್ಯಾಯ ನಾಲ್ಕನೇ ಪಾದ 11 ನೇ ಸೂತ್ರ.

[116] ಪಾಣಿನಿಯ ಅಷ್ಟಾಧ್ಯಾಯೀ ಚೌಕಂಬಾಪ್ರಕಾಶನ 1960,ಒಂದನೇ ಅಧ್ಯಾಯ ಮೂರನೇಪಾದ 93ನೇ ಸೂತ್ರ.

ರೀತಿಯಲ್ಲಿ ಮತ್ತೆ + ಏನು = ಮತ್ತೇನು ಕೂಡ ಮಾಡ ಬಹುದಲ್ಲವೇ. ಇಲ್ಲಿ ಪೂರ್ವ ಪದದ ಅಂತ್ಯ ಸ್ವರ ಮತ್ತು ಪರ ಪದದ ಆದಿ ಸ್ವರ ಇವೆರಡು ಏಕಸ್ಥಾನೀಯ ಸ್ವರಗಳಾದ ಕಾರಣ ಸವರ್ಣ ಸ್ವರಗಳಾದಕಾರಣ ಇಲ್ಲಿ ಸವರ್ಣ ದೀರ್ಘಸಂಧಿ ನಡೆದಿರುವುದು ಕಂಡು ಬರುತ್ತದೆ. ವಾಸ್ತವವಾಗಿ ಸವರ್ಣ ಸಂಧಿ ಪ್ರಕ್ರಿಯೆ ಸಂಸ್ಕೃತದಲ್ಲಿದೆ ಆದಾಗ್ಯೂ ಕನ್ನಡದಲ್ಲಿ ಹೊಸದನ್ನು ಹೇಳಬಹುದಾಗಿದೆ.

ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಏ ಮತ್ತು ಓ ಗಳನ್ನು ಪ್ರತ್ಯೇಕವಾಗಿ ಸೂತ್ರ ರೂಪದಲ್ಲಿ ಹೇಳಲಾಗಿದೆ. ಏಕೆಂದರೆ ಏ ಮತ್ತು ಓ ಗಳು ಕ್ರಮವಾಗಿ ಇ ಮತ್ತು ಉ ಗಳೊಂದಿಗೆ ತುಲ್ಯಸ್ಥಾನವನ್ನು ಹೊಂದಿವೆ. ಮತ್ತು ಇವು ಸ್ವತಂತ್ರ ಸ್ವರಗಳಾಗಿರದೆ ಸಂಯುಕ್ತ ಸ್ವರಗಳಾದ ಕಾರಣ ಇವುಗಳನ್ನು ಪ್ರತ್ಯೇಕವಾಗಿಹೇಳಿರುವುದು ಸೂಕ್ತವಾದುದಾಗಿದೆ. ಉದಾಹರಣೆಗೆ ಏ ಸ್ವರದಲ್ಲಿ ಅ+ಈ/ಇ = ಏ ಸಂಯುಕ್ತ ಸ್ವರ ರಚನೆಗೊಂಡಿದೆ. ಅದೇರೀತಿ ಅ+ಉ/ಊ = ಓ ಸಂಯುಕ್ತ ಸ್ವರ ರಚಿತ ವಾಗಿದೆ. ಏ ಮತ್ತು ಓ ವರ್ಣಗಳು ಉದ್ಗಮಿಸುವ ಧ್ವನ್ಯುತ್ಪಾದನ ಸ್ಥಾನಗಳೂ ಮುಖವಿವರದಲ್ಲಿ ಈ ಮೊದಲು ವಿವರಿಸಲಾದ ವರ್ಣಗಳ ನಂತರವಿದೆ. ಆದ್ದರಿಂದ ವರ್ಣಮಾಲೆಯಲ್ಲಿ ಏ ಮತ್ತು ಓಗಳನ್ನು ಅ,ಇ,ಉ,ಋ,ಲೃ, ಗಲ ನಂತರ ಹೇಳಿರುವುದು ವೈಜ್ಞಾನಿಕ ದೃಷ್ಟಿಕೋನವನ್ನು ಹೊಂದಿದೆ ಎನ್ನಬಹುದು. ವರ್ಣ ಮಾಲೆಯಲ್ಲಿ ಏ ಮತ್ತು ಓ ಗಳ ನಂತರ ಸ್ಥಾನವನ್ನು ಸಂಧ್ಯಕ್ಷರಗಳಾದ ಐ ಮತ್ತು ಔ ಗಳಿಗೆ ಕಲ್ಪಿಸಲಾಗಿದೆ. ಧ್ವನ್ಯುತ್ಪಾದನಾ ಸ್ಥಾನವನ್ನು ಅನುಸರಿಸಿ ಇದು ಸರಿಯಾಗಿದೆ. ಇದರ ಜೊತೆಗೆ ಇನ್ನೊಂದು ಕಾರಣ ವನ್ನು ಕಂಡುಕೊಳ್ಳ ಬೇಕಾಗಿದೆ. ಏ ಮತ್ತು ಓ ವರ್ಣಗಳು ಎರಡು ಸ್ವರಗಳ ಮಿಲನದಿಂದ ಸಂಯುಕ್ತ ಸ್ವರಗಳಾಗಿ ರೂಪಿತ ಗೊಂಡಿದ್ದರೆ ಐ ಮತ್ತು ಔ ವರ್ಣಗಳು ಮೂರು ಸ್ವರಗಳನ್ನು ಹೊಂದಿ ರೂಪಿತಗೊಂಡಿವೆ. ಇನ್ನೊಂದು ದೃಷ್ಟಿಯಿಂದ ಇವು ಸಂಧಿ ಪ್ರಕ್ರಿಯೆಯಲ್ಲಿ ಅಧ್ಯಾದೇಶವಾಗಿ ಬರುವುದರಿಂದ ಇವುಗಳನ್ನು ಸಂಧ್ಯಕ್ಷರಗಳೆಂದು ಕರೆಯುತ್ತಾರೆ.

## 5.9 ವರ್ಣಗಳ ರೂಪ ವಿಕಾಸ ಚರಿತ್ರೆ ಮತ್ತು ಗುಣಲಕ್ಷಣಗಳು

### 'ಅ' ವರ್ಣ

'ಓಂ ಕಾರಶ್ಚ ಅಥ ಶಬ್ದಶ್ಚ ಮೂಲಂ ಶಬ್ದಾರ್ಥ ನಿರ್ಣಯಃ' ಎಂಬ ಹೇಳಿಕೆಯಿಂದ ಇದು ಸ್ಪಷ್ಟವಾಗುತ್ತದೆ. ಓಂ ಕಾರದಲ್ಲಿ ಅ+ಉ+ಅಂ ಎಂಬ ಘಟಕಗಳಿವೆ. 'ಅ' ವರ್ಣವು ಭಾರತೀಯವಿವಿಧಭಾಷೆಗಳ ವರ್ಣಮಾಲೆಗಳಲ್ಲಿ ಆರಂಭದಲ್ಲಿ ಬರುತ್ತದೆ. 'ಅ' ವರ್ಣವನ್ನು ಯಾಕೆ ಆರಂಭದ ವರ್ಣವಾಗಿ ಸ್ವೀಕರಿಸಲಾಗಿದೆ ಎನ್ನುವುದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು.

1 ಬಹುತೇಕಭಾರತೀಯ ಭಾಷೆಗಳಲ್ಲಿ ಮೊದಲ ವರ್ಣವಾಗಿರುವುದರಿಂದ ಅವರ್ಣವನ್ನು ಮೊದಲನೇ ವರ್ಣವನ್ನಾಗಿ ವರ್ಣಮಾಲೆಯಲ್ಲಿ ಸ್ಥಾನ ಕಲ್ಪಿಸಲಾಗಿದೆ.

1 ಪಾಣಿನಿಯು ಅಷ್ಟಾಧ್ಯಾಯಿಯ ಮಾಹೇಶ್ವರ ಸೂತ್ರದಲ್ಲಿ ಮೊದಲ ಸೂತ್ರದ ಮೊದಲ ವರ್ಣವನ್ನಾಗಿ ಹೇಳಿದ್ದಾನೆ. ಉದಾಹರಣೆ ಅ,ಇ,ಉಣ್[117] 'ಅ,ಇ, ಉಣ್' ಎನ್ನುವುದು ಪಾಣಿನಿಯಿ ವರ್ಣಸಮಾಮ್ನಾಯ ಅಥವಾ ಮಾಹೇಶ್ವರ ಸೂತ್ರಗಳಲ್ಲಿ ಉಲ್ಲೇಖಿತವಾದ ಮೊದಲ ಸೂತ್ರವಾಗಿದೆ.

2 'ಅ' ವರ್ಣವು ಪ್ರತಿಯೊಂದು ವರ್ಣದ ಉಚ್ಚಾರಣೆಯಲ್ಲೂ ಭಾಗಶಃ ಉಚ್ಚಾರವನ್ನು ಹೊಂದಿದೆ. ಉದಾಹರಣೆಗೆ 'ಎ' ಸ್ವರ. ಅದರ ಮೂಲ ರಚನೆಯನ್ನು ನೋಡಿದರೆ ಅ+ಇ= ಎ, ಅದೇ ರೀತಿ 'ಒ' ಸ್ವರ. ರಚನೆ ಅ+ಉ=ಒ ಇತ್ಯಾದಿ.

3 ವೇದಗಳು ನಮಗೆ ದೊರೆತ ಅತ್ಯಂತ ಪ್ರಾಚೀನ ಲಿಖಿತ ದಾಖಲೆಗಳಾಗಿವೆ. ಎಂದು ನಾವು ಗುರುತಿಸ ಬಹುದಾದರೂ ಅದರ ಪ್ರಥಮ ವಾಕ್ಯ ಋಗ್‌ವೇದದ ಮೊದಲ

---

[117] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾ.ನಾಲ್ಕನೇ ಸಾಲು.

ಮಂತ್ರ ಆರಂಭವಾಗುವುದು ಅ ವರ್ಣದಿಂದ " ಅಗ್ನಿಮೀಳೇ ಪುರೋಹಿತಂ"[118] ಎನ್ನುವ ಮಂತ್ರದಿಂದ ಆರಂಭವಾಗುತ್ತದೆ.

4 ಸಂಸ್ಕೃತದ ಎಲ್ಲ ಶಿಕ್ಷಾ ಗ್ರಂಥಗಳಲ್ಲಿ ಮತ್ತು ಪ್ರಾತಿಶಾಖ್ಯ ಗ್ರಂಥಗಳ ಎಲ್ಲಾ ವರ್ಣಮಾಲೆಯಲ್ಲಿಯೂ ಇದರ ಪ್ರಥಮ ಉಲ್ಲೇಖವಿದೆ.

5 ಇದು ಕಂಠ್ಯ ಸ್ವರವಾಗಿದೆ. ಧ್ವನ್ಯಂಗಗಳಲ್ಲಿ ಇದು ಮೊದಲಸ್ಥಾನದಲ್ಲಿ ಬರುತ್ತದೆ. 'ಅಕುಹ ವಿಸರ್ಜನೀಯಾನಾಂ ಕಂಠಃ' ಎಂದು ಪಾಣಿನಿಯು ಉಲ್ಲೇಖಿಸಿದ್ದಾನೆ.

6 ಇದೊಂದು ಸರ್ವಸ್ವತಂತ್ರ ಸ್ವರವಾಗಿದೆ. 'ಅ' ವರ್ಣವು ಪ್ರತಿಯೊಂದು ಅಕ್ಷರದಲ್ಲಿಯೂ ಅಂತರ್ಗತವಾಗಿದೆ.

7 'ಅ' ವರ್ಣವು ಅತ್ಯಂತ ಹೆಚ್ಚು ಬಳಕೆಯಲ್ಲಿರುವ ವರ್ಣವೂ ಹೌದು.

ಹೀಗೆ 'ಅ' ವರ್ಣವನ್ನು ವರ್ಣಮಾಲೆಯ ಮೊದಲ ವರ್ಣವಾಗಿಹೇಳಿರುವುದು ಸಾರ್ಥಕವಾದುದಾಗಿದೆ.

'ಅ' ವರ್ಣವು ಏಕಮಾತ್ರಿಕ ಸ್ವರವಾಗಿದೆ. ಅಂದರೆ ಇದನ್ನು ಉಚ್ಚಾರ ಮಾಡಲು ಒಂದು ಮಾತ್ರಾಕಾಲ ಸಾಕು. ಏಕಮಾತ್ರೋ ಭವೇದ್ಧ್ರಸ್ವೋ[119] ಎನ್ನುವ ಪಾಣಿನಿಯ ಮಾತಾಗಲೀ ಕೇಶಿರಾಜನ "ಹ್ರಸ್ವಮೇಕಮಾತ್ರಕಂ ದೀರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ"[120] ಎನ್ನುವ ಮಾತು ಇದನ್ನು ಪುಷ್ಟೀಕರಿಸುತ್ತವೆ. 'ಅ' ವರ್ಣವು ಸಂಸ್ಕೃತ ಭಾಷೆಯಲ್ಲಿ ಮಾತ್ರವಲ್ಲ ಇತರ ದ್ರಾವಿಡ ಭಾಷೆಯಲ್ಲಿ ಹೇರಳವಾಗಿ ಬಳಕೆಯಾಗುತ್ತಿರುವ ವರ್ಣವಾಗಿದೆ. 'ಅ' ವರ್ಣವನ್ನು ವಿವಿಧ ಭಾಷಿಗರು ವಿವಿಧ ರೀತಿಯಾಗಿ ಬರೆಯುತ್ತಾರೆ ಆದರೆ ಅದಕ್ಕೆ ಮೂಲತಃ ಆ ಸ್ವರೂಪ ಬಂದಿರುವುದು ಆಯಾಭಾಷಿಗರ ರೂಢಿಯಿಂದ. ಕನ್ನಡ ಭಾಷೆಯಲ್ಲಿ ಅ ವರ್ಣವನ್ನು ಎರಡು ಉಚ್ಚಾರಣೆಯೊಂದಿಗೆ ಬಳಸುತ್ತಾರೆ.

---

[118] 'ಋಗ್ವೇದ ಸಂಹಿತಾ 1' ಚೌಕಂಬ ಪ್ರಕಾಶನ, ಉ.ಪ್ರ. 1978, ಮೊದಲ ಅಧ್ಯಾಯ, ಮೊದಲ ಮಂತ್ರ, ಪುಟ ಸಂಖ್ಯೆ 1.

[119] ಮೂಲ 'ಶ್ರುತಬೋಧ' ಸಂಸ್ಕೃತಛಂದೋಗ್ರಂಥ.)(ಕನ್ನಡ ಛಂದಃಸ್ವರೂಪ, ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರಿ ಎರಡನೇ ಆವೃತ್ತಿ 1996,. ಪುಟ 15.

[120] ಶಬ್ದಮಣಿದರ್ಪಣ ಸಂಗ್ರಹ.ಸಂಪಾದಕರು ಪ್ರೊ. ಬಿ.ಟಿ.ಸಾಸನೂರ ಹಾಗೂ ಡಾ. ಎಂ. ಎಂ. ಕಲಬುರ್ಗಿ.ಪ್ರಕಾಶಕರು : ಮನೋಹರ ಘಾಣೇಕರ್ ಸಮಾಜ ಪುಸ್ತಕಾಲಯ ಧಾರವಾಡ, ಪುಟ ಸಂಖ್ಯೆ: 7 ಎರಡನೇ ಸೂತ್ರದ ಮೂರು ಮತ್ತು ನಾಲ್ಕನೇ ಸಾಲು.

ಅ = ಅ ಉತ್ತರಕರ್ನಾಟಕದ ಭಾಗದವರು ಉಚ್ಚರಿಸುವ ಬಗೆ

ಅ = ಅ ದಕ್ಷಿಣಕನ್ನಡ ಜಿಲ್ಲೆಯವರು ಉಚ್ಚರಿಸುವ ಬಗೆ

ಈ ಮೇಲಿನ ಎರಡು ಉದಾಹರಣೆಗಳಲ್ಲಿ ದಪ್ಪದಾಗಿ ಕಾಣುವ ವರ್ಣಗಳು ರೂಪದಲ್ಲಿ ವ್ಯತ್ಯಾಸವಿದ್ದರೂ ಅವೆರಡೂ ಹ್ರಸ್ವಗಳು. ಉತ್ತರಕರ್ನಾಟಕದ ಭಾಗದಲ್ಲಿ ಮೊದಲಿನ ಸಂಪ್ರದಾಯವು ಕಂಡುಬಂದರೆ ಎರಡನೆಯದು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಕಂಡುಬರುತ್ತದೆ. ಉತ್ತರಕರ್ನಾಟಕ ಭಾಗದವರು ಅ ಮತ್ತು ಆ ಸ್ವರಗಳನ್ನು ವಿಭಿನ್ನ ತೆರನಾಗಿ ಉಚ್ಚಾರ ಮಾಡಿದರೆ ದಕ್ಷಿಣ ಕನ್ನಡದವರು ಅ ಮತ್ತು ಆ ವರ್ಣಗಳನ್ನು ಒಂದೇರೀತಿಯಲ್ಲಿ ಉಚ್ಚಾರಮಾಡುತ್ತಾರೆ. ಈಹಿನ್ನೆಲೆಯಲ್ಲಿ ಅ ಮತ್ತು ಆ ವರ್ಣಗಳನ್ನು ಪ್ರತ್ಯೇಕವಾಗಿ ಒಂದೊಂದು ಹ್ರಸ್ವ ವರ್ಣಗಳೆಂದು ಪರಿಗಣಿಸಬೇಕೆ? ಎನ್ನುವ ಪ್ರಶ್ನೆ ಏಳುತ್ತದೆ. ಏಕೆಂದರೆ ಪಾಣಿನಿಯ ಕಾಲಕ್ಕಾಗಲೇ ಈ ಕುರಿತು ಸಾಕಷ್ಟು ಚರ್ಚೆ ನಡೆದಿರುವುದು ಕಂಡು ಬರುತ್ತದೆ.

ಉದಾ ಅ ವರ್ಣಕ್ಕೆ ಉತ್ತರ ಪ್ರದೇಶದಲ್ಲಿ ಆ ಎಂದು, ಬಂಗಾಳಿ ಭಾಷೆಯಲ್ಲಿ ಓ ಎಂದೂ, ಬಿಹಾರಿ ಭಾಷೆಯಲ್ಲಿ ಅ ಎಂದು ಉಚ್ಚರಿಸುತ್ತಿದ್ದರೆ. ಕ,ಖ,ಗ,ಘ ಗಳನ್ನು ಬಂಗಾಳಿ ಭಾಷೆಯವರು ಕೋ,ಖೋ,ಗೋ,ಘೋ ಎಂದೂ, ಬಿಹಾರಿಗರು ಕ,ಖ,ಗ,ಘ ಎಂದೂ, ಉತ್ತರ ಪ್ರದೇಶದವರು ಕಾ,ಖಾ,ಗಾ,ಘಾ, ಎಂದು ಉಚ್ಚರಿಸುತ್ತಾರೆ. ಅರವಿಂದ ಎನ್ನುವುದನ್ನು ಬಂಗಾಳಿ ಭಾಷೆಯಲ್ಲಿ ಓರೋವಂದೋ ಎಂದೂ, ಆರಾವಿಂದಾ ಎಂದು ಉತ್ತರ ಪ್ರದೇಶಿಗರು ಉಚ್ಚಾರ ಮಾಡುತ್ತಾರೆ. ಇದೆಲ್ಲ ಪ್ರಾದೇಶಿಕ ವ್ಯತ್ಯಾಸವಾದ ಕಾರಣ ಅವುಗಳನ್ನೆಲ್ಲ ಪ್ರತ್ಯೇಕ ವರ್ಣವೆಂದು ಪರಿಗಣಿಸಲು ಸಾಧ್ಯವಿಲ್ಲ.

ಕನ್ನಡವರ್ಣಮಾಲೆಯಲ್ಲಿಯ ಅ ವರ್ಣದ ಅತ್ಯಂತ ಹಳೆಯ ರೂಪವು ಕ್ರಿಸ್ತಪೂರ್ವ ಮೂರನೇಯ ಶತಮಾನದಲ್ಲಿಯ ಅಶೋಕನ ಬ್ರಾಹ್ಮಿಲಿಪಿಯ ಶಾಸನಗಳಲ್ಲಿ ಕಂಡುಬಂದಿದೆ. ಬ್ರಾಹ್ಮಿ ಲಿಪಿಯಿಂದ ಅ ಕಾರ ವಿಕಾಸ ಹೊಂದಿರುವಿಕೆಯನ್ನು ಮತ್ತು ಪ್ರಾಚೀನ ಕಾಲದ ರೂಪಕ್ಕಿಂದ ಭಿನ್ನವಾಗಿ ನಡೆದುಬಂದ ದಾರಿಯನ್ನು ಸ್ಪಷ್ಟೀಕರಿಸಲಾಗಿದೆ.

ಪ್ರಾಚೀನ ಭಾರತೀಯ ಲಿಪಿ ಬ್ರಾಹ್ಮಿ ಲಿಪಿಯಾದ ಕಾರಣ ಕನ್ನಡ ಮತ್ತು ಸಂಸ್ಕೃತ ಅ ವರ್ಣದ ಪ್ರಾಚೀನ ಸ್ವರೂಪವು ಒಂದೇ ರಿತಿಯಾಗಿತ್ತೆನ್ನುವುದನ್ನು ಈ ಕೆಳಗಿನ ಚಿತ್ರದಮೂಲಕ ತಿಳಿಯಬಹುದಾಗಿದೆ. ಅಶೋಕನ ಬ್ರಾಹ್ಮಿಶಾಸನದಲ್ಲಿ (ಕಾಲ

ಸುಮಾರು ಮೂರನೆ ಶತಮಾನ) ಸುಮಾರು ಒಂಬತ್ತನೇ ಶತಮಾನದ ಹೊತ್ತಿಗೆ ಕನ್ನಡದ ಅ ವರ್ಣ ಮತ್ತು ಸಂಸ್ಕೃತದ ಅ ವರ್ಣ ಪರಸ್ಪರ ವಿಭಿನ್ನ ಸ್ವರೂಪವನ್ನು ಪಡೆದಿರುವುದು ಕಂಡು ಬರುತ್ತದೆ. ಈ ಗಮನಾರ್ಹ ಪರಿವರ್ತನೆಗೆ ಪ್ರಬಲವಾದ ಕಾರಣಗಳನ್ನು ಕಂಡುಹಿಡಿಯುವ ಅಧ್ಯಯನವಾಗಬೇಕಾಗಿದೆ. ಆದಾಗ್ಯೂ ಕನ್ನಡ ಭಾಷೆಯಲ್ಲಿ ಸಿಕ್ಕ ಮೊದಲ ಗ್ರಂಥದ ಕಾಲವೂ ಸರಿಸುಮಾರು ಇದೇ ಸಮಯವಾದ ಕಾರಣದಿಂದ ಕನ್ನಡಭಾಷೆ ಲಿಪಿ ದೃಷ್ಟಿಯಿಂದ ಬ್ರಾಹ್ಮಿಲಿಪಿಯಿಂದ ಪ್ರತ್ಯೇಕತೆಯನ್ನು ಹೊಂದಿತ್ತು. ಇದಕ್ಕೆ ಆಧಾರ ರಾಷ್ಟ್ರಕೂಟರಶಾಸನಗಳು ಸರಿಸುಮಾರು ಅದೇ ರೂಪವನ್ನು ಇಂದಿಗೂ ಕನ್ನಡ ಭಾಷೆಯು ರೂಢಿಸಿಕೊಂಡುಬಂದಿದೆ. ಒಂದು ಲಿಪಿ ವಿಭಿನ್ನ ಸ್ವರೂಪ ಪಡೆಯುವ ಪ್ರಕ್ರಿಯೆ ಒಂದು ಕ್ಷಣದ ಒಂದು ನಿರ್ದಿಷ್ಟ ಸಮಯದಲ್ಲಾಗುವ ಕೆಲಸವಲ್ಲ ಅದು ಸುಧೀರ್ಘ ಪ್ರಯತ್ನದಫಲವಾಗಿದೆ. ಆದ್ದರಿಂದ ಸುಮಾರು 7 ನೇ ಶತಮಾನದ ಅಂತ್ಯದ ಹೊತ್ತಿಗೆ ಕನ್ನಡಭಾಷೆಯ 'ಅ' ವರ್ಣದ ಸ್ವರೂಪ ಬ್ರಾಹ್ಮಿಲಿಪಿಯ 'ಅ' ವರ್ಣದ ಸ್ವರೂಪಕ್ಕಿಂತ ಭಿನ್ನವಾಗುತ್ತಬಂದಿದೆ. ಕನ್ನಡ ಮತ್ತು ಸಂಸ್ಕೃತದ 'ಅ' ವರ್ಣದ ವಿಕಾಸವನ್ನು ಹಾಗು 'ಅ' ವರ್ಣ ಉಚ್ಚಾರಮಾಡುವಾಗ ಮುಖವಿವರದಲ್ಲಿಯ ಧ್ವನ್ಯಂಗಗಳ ಸ್ವರೂಪವನ್ನು ಈ ಕೆಳಗಿನ ಚಿತ್ರಸಂಖ್ಯೆ-1ರಲ್ಲಿ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆಗ 'ಅ' ವರ್ಣ ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 1

[121]

## ಆ ವರ್ಣ

'ಆ' ವರ್ಣವು ಎಲ್ಲಿಂದ ಆರಂಭವಾಯಿತೆನ್ನುವುದಕ್ಕೆ ಮೂಲ ಹುಡುಕಹೊರಟರೆ ದೊರೆಯುವ ತತ್ಕ್ಷಣದ ಉತ್ತರ 'ಅ' ವರ್ಣದ ದೀರ್ಘಾಕ್ಷರವಾಗಿದೆ ಎಂಬುದಾಗಿದೆ. ಇಲ್ಲಿಯ ಎರಡು ವಿಶೇಷ ಅಂಶವನ್ನು ಗಮನಿಸಬಹುದು. ಒಂದು 'ಅ' ವರ್ಣವನ್ನು 'ಆ' ವರ್ಣದ ದೀರ್ಘಸ್ವರವೆಂದು ಹೇಳಿದಾಕ್ಷಣ ಅನೇಕ ಗೊಂದಲಗಳು ಸಮಸ್ಯೆಗಳು ಮೊದಲಿನಿಂದಲೂ ಸಂಸ್ಕೃತಭಾಷಾ ವ್ಯಾಕರಣತಜ್ಞರಲ್ಲಿ ನಡೆದಿರುವುದು ಕಂಡುಬರುತ್ತದೆ.

---

[121].ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 38 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಪುಟ 271. ಹಾಗೂ ಸಂಸ್ಕೃತ 'ಅ' ವರ್ಣದ ವಿಕಾಸ ಚಿತ್ರವನ್ನು [121] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ. ಪುಟ 271.

ಉಚ್ಚಾರಣೆಗೆ ಸಂಬಂಧಿಸಿದ ಹಾಗೆ 'ಅ' ಉಚ್ಚಾರಣೆ ಮತ್ತು 'ಆ' ಉಚ್ಚಾರಣೆ ಪರಸ್ಪರ ವಿರುದ್ಧವಾದುವು ಎನ್ನುವುದು ಒಂದು ಮತ. ಉಳಿದ ಸ್ವರ ವರ್ಣಗಳಾದ ಇ, ಈ,ಉ,ಊ, ಇತ್ಯಾದಿಗಳಲ್ಲಾದರೋ ಒಂದೇ ರೀತಿಯ ಉಚ್ಚಾರಣೆ ಹೊಂದಿರುವ ವರ್ಣಗಳು. ಅಂದರೆ ಮೊದಲ ವರ್ಣವನ್ನೆ ಹೆಚ್ಚು ದೀರ್ಘಸಮಯ ಬಳಸಿ ಉಚ್ಚರಿಸಿದರೆ ದೀರ್ಘ ಸ್ವರವಾಗುತ್ತದೆ. ಕಾಲಭೇದಮಾತ್ರದಿಂದ ಪರಸ್ಪರ ಬೇರೆ ವರ್ಣಗಳಾಗಿ ಲೆಕ್ಕಹಾಕಲಾಗಿದೆ, 'ಅ' ಮತ್ತು 'ಆ' ವರ್ಣಗಳಲ್ಲಿ ಉಚ್ಚಾರಣೆ ಭಿನ್ನ ವಾಗಿದ್ದರೂ ಒಂದೇ ಗುಂಪಿಗೆಸೇರಿಸಿ ಪರಸ್ಪರ ಹ್ರಸ್ವ ದೀರ್ಘಗಳನ್ನಾಗಿ ವಿಭಜಿಸಲಾಗಿದೆ. ಇನ್ನೊಂದು ವಿಶೇಷವೆಂದರೆ 'ಅ' ಮತ್ತು 'ಆ' ವರ್ಣಗಳನ್ನು ಕೆಲವು ಪ್ರದೇಶಗಳಲ್ಲಿ ಮುಖ್ಯವಾಗಿ ಕರಾವಳಿಪ್ರದೇಶದ ದಕ್ಷಿಣ ಕನ್ನಡ ಪ್ರಾಂತ್ಯದಲ್ಲಿ ಒಂದೇರೀತಿಯಲ್ಲಿ ಉಚ್ಚಾರ ಮಾಡುವ ರೂಢಿಯಿದೆ. ಅದೇ ರೀತಿ ಉತ್ತರ ಕರ್ನಾಟಕದ ಪ್ರಾಂತ್ಯಗಳಿಗೆ ಹೋದರೆ ಅಲ್ಲಿ ಅ ಮತ್ತು ಆ ವರ್ಣವನ್ನುವನ್ನು ಉಚ್ಚಾರ ಮಾಡುವಪದ್ಧತಿ ಭಿನ್ನವಾಗಿದೆ. ಈ ರೀತಿಯ ವಿಭಿನ್ನ ದೃಷ್ಟಿಕೋನ ಗಮನಿಸಿದರೆ ಅ ಮತ್ತು ಆ ಗಳನ್ನು ಪರಸ್ಪರ ಸವರ್ಣ ಸ್ವರಗಳೆಂದು ಹೇಳುವುದು ಸೂಕ್ತವೇ? ಎನ್ನುವ ಪ್ರಶ್ನೆ ಉದ್ಭವಾಗುತ್ತದೆ. ಅದೇನಿದ್ದರೂ 'ಆ' ಸ್ವರದ ಸ್ವೀಕರಣೆ ಯಾಗಿರುವುದೆ 'ಅ' ಕಾರದ ದೀರ್ಘಕ್ಕಾಗಿ ಪತಂಜಲಿ ಮಹರ್ಷಿಗಳು ಪಾಣಿನಿಯ ಅಷ್ಟಾಧ್ಯಾಯಿಗೆ ಬರೆದ ಮಹಾಭಾಷ್ಯದಲ್ಲಿ ಸ್ಪಷ್ಟ ಪಡಿಸಿದ್ದಾರೆ[122]. ವರ್ಣವನ್ನು ಪ್ರಯೋಗ ಮಾಡುವಾಗ ಸಂವೃತ ಪ್ರಯತ್ನವಾದರೆ ಶಾಸ್ತ್ರೀಯ ಅವಸ್ಥೆಯಲ್ಲಿರುವ 'ಅ' ವರ್ಣಕ್ಕೆ ವಿವೃತ ಪ್ರಯತ್ನ ವಿದೆ ಇದನ್ನೆ ಮಹಾಭಾಷ್ಯದಲ್ಲಿ ಪತಂಜಲಿ ಮಹರ್ಷಿಗಳು ಸ್ಪಷ್ಟಪಡಿಸಿದ್ದಾರೆ. ಅ ಮತ್ತು ಆ ಪರಸ್ಪರ ಸವರ್ಣ ಸಂಜ್ಞೆಗಳನ್ನು ಪ್ರಯತ್ನ ಭೇದದಕಾರಣದಿಂದ ಹೊಂದುವುದಿಲ್ಲ. ಅದು ವಿಭಿನ್ನ ವರ್ಣವಾಗಿಯೇ ನಿಲ್ಲುತ್ತದೆ. ಮೇಲ್ಕಂಡ ಭಾಷ್ಯವನ್ನು ಬರೆಯುವ ಸಂದರ್ಭದಲ್ಲಿ ಈ

---

[122]. 'ಭಗವತ್ಪತಂಜಲಿ–ವಿರಚಿತ ವ್ಯಾಕರಣ ಮಹಾಭಾಷ್ಯ' ಹಿಂದಿ ಅನುವಾದ ಮತ್ತು ವಿವರಣೆ, ಪ್ರಥಮ ನವಾಹ್ನಿಕ.ಚಾರುದೇವ ಶಾಸ್ತ್ರಿ, 3/54 ರೂಪನಗರ ದೆಹಲಿ. ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಏಳನೇ ಆವೃತ್ತಿ, 2009, ಪುಟ ಸಂಖ್ಯೆ: 53. ಮೊದಲ ಸಾಲು.

ರೀತಿಯ ಗೊಂದಲ ಕಂಡುಬಂದಿವೆ. ಆದ್ದರಿಂದ ಇಂದು ಕೂಡ ಅವು ವಿಭಿನ್ನರೀತಿಯಲ್ಲಿ ಬಳಕೆಯಾಗುತ್ತಿವೆ.

'ಆ' ವರ್ಣದ ಉಚ್ಚಾರಣೆಯನ್ನು ಪ್ರತ್ಯೇಕವಾಗಿ ಯಾವ ವೈಯಾಕರಣಿಗಳೂ ಹೇಳಿಲ್ಲ. ಅದು ಅವರ್ಣದ ದೀರ್ಘಸ್ವರವಾದ ಕಾರಣ ಕೇವಲ ಪ್ರಯತ್ನ ಮತ್ತು ಕಾಲ ಭೇದವಿರುವ ಕಾರಣ 'ಆ' ವರ್ಣವೂ ಕೂಡ 'ಅ' ವರ್ಣವನ್ನು ಉಚ್ಚಾರಮಾಡಿದ ರೀತಿಯಲ್ಲಿಯೇ ಉಚ್ಚಾರ ಆರಂಭಿಸಿ ಸ್ವಲ್ಪದೀರ್ಘ ಉಸಿರನ್ನು ಬಳಸಿ ಉಚ್ಚಾರಮಾಡಲಾಗುತ್ತದೆ ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ.

[123]




ಚಿತ್ರ ಸಂಖ್ಯೆ 2

ಸಂಸ್ಕೃತಭಾಷೆಯಲ್ಲಿ ಪ್ರತ್ಯೇಕವಾಗಿ ದೀರ್ಘಸ್ವರಗಳ ವರ್ಣವಿಕಾಸವನ್ನು ಸಚಿತ್ರವಾಗಿ ತೋರಿಸದಿರುವುದು ಇದಕ್ಕೆ ಇನ್ನಷ್ಟು ಪುಷ್ಟಿನೀಡುತ್ತದೆ. 'ಆ' ವರ್ಣದ

---

[123]. . ಕನ್ನಡ 'ಆ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 40 .

ರೂಪವಿಕಾಸವಿವರವನ್ನು ಚಿತ್ರ ಸಂಖ್ಯೆ 2 ರಲ್ಲಿ ಕಾಣಬಹುದಾಗಿದೆ. ಪ್ರಾಚೀನ ಶಾಸನಗಳ ಅಧ್ಯಯನದಿಂದ ಕಂಡುಕೊಂಡ ಸತ್ಯದಪ್ರಕಾರ ಕ್ರಿಸ್ತಶಕದ ಆರಂಭದ ಕಾಲಘಟ್ಟದಲ್ಲಿ ಅ ಮತ್ತು 'ಆ' ವರ್ಣಗಳ ಸ್ವರೂಪದಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಕನ್ನಡ ಮತ್ತು ಸಂಸ್ಕೃತದ 'ಆ' ವರ್ಣದ ವಿಕಾಸವನ್ನು ಹಾಗು 'ಆ' ವರ್ಣ ಉಚ್ಚಾರಣಾ ಸ್ವರೂಪವನ್ನು ಈ ಕೆಳಗಿನ ಚಿತ್ರಸಂಖ್ಯೆ-2ರಲ್ಲಿ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆಗ 'ಆ' ವರ್ಣವು ಉಚ್ಚಾರಗೊಳ್ಳುತ್ತದೆ.**

## ಇ ವರ್ಣ

ಇ ವರ್ಣವು ಕನ್ನಡ ವರ್ಣಮಾಲೆಯಲ್ಲಿ ಮೂರನೆಯ ಅಕ್ಷರವಾಗಿದೆ. ಇದು ಪಾಣಿನಿ ಮಾಹೇಶ್ವರ ಸೂತ್ರದಲ್ಲಿ ಮೊದಲ ಸೂತ್ರದ ಎರಡನೇವರ್ಣವಾಗಿದೆ. ಅ.ಇ.ಉಣ್,[124] ಎಂದು ಸೂತ್ರದಲ್ಲಿ ಇದನ್ನು ಕಾಣಬಹುದು. ಋಗ್ವೇದದ ಮೊದಲಮಂತ್ರವು (ಅಗ್ನಿಮೀಳೇ ಪುರೋಹಿತಂ_ ಇತ್ಯಾದಿ) 'ಅ' ವರ್ಣದಿಂದ ಆರಂಭವಾದರೆ ಯಜುರ್ವೇದದ ಮೊದಲಮಂತ್ರವು 'ಇ' ವರ್ಣದಿಂದ ಆರಂಭವಾಗುವುದು ಒಂದು ವಿಶೇಷವಾಗಿದೆ. 'ಇಷೆತ್ವೋರ್ಜೇತ್ವಾ ವಾಯವಸ್ಥೋಪಾಯವಸ್ಥೋ'[125] ಇತ್ಯಾದಿಯಿಂದ ಆರಂಭವಾಗುವ ಮಂತ್ರವನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ವೇದಗಳ

---

124 'ಭಗವತ್ಪತಂಜಲಿ-ವಿರಚಿತ ವ್ಯಾಕರಣ ಮಹಾಭಾಷ್ಯ' ಹಿಂದಿ ಅನುವಾದ ಮತ್ತು ವಿವರಣೆ, ಪ್ರಥಮ ನವಾಹ್ನಿಕ.ಚಾರುದೇವ ಶಾಸ್ತ್ರಿ, 3/54 ರೂಪನಗರ ದೆಹಲಿ. ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಏಳನೇ ಆವೃತ್ತಿ, 2009, ಪುಟ ಸಂಖ್ಯೆ: 53. ಕೆಳಭಾಗದಿಂದ ಮೊದಲ ಸಾಲು.

125 'ಯಜುರ್ವೇದಸಂಹಿತಾ' ಚೌಕಂಬ ಪ್ರಕಾಶನ ಯು.ಪಿ.1978, ಮೋದಲ ಅಧ್ಯಾಯ ಆರಂಭದ ಮಂತ್ರ.

ಕಾಲದಲ್ಲಿಯೇ ಇದರ ಬಳಕೆಯಿತ್ತು ಎನ್ನುವುದಕ್ಕೆ ಆಧಾರಗಳಿವೆ. ಕನ್ನಡದಲ್ಲಿಯೂ ಮತ್ತು ಇತರ ದ್ರಾವಿಡ ಭಾಷೆಗಳಲ್ಲಿಯೂ 'ಇ' ವರ್ಣದ ಉಲ್ಲೇಖ ಪ್ರಾಚೀನ ಕಾಲದಲ್ಲಿಯೂ ಕಂಡುಬರುತ್ತದೆ. ಪ್ರಾಚೀನ ಕನ್ನಡ ವೈಯಾಕರಣಿಗಳೆಲ್ಲ ಸಂಸ್ಕೃತ ವರ್ಣಮಾಲೆಯನ್ನೇ ಅನುಕರಿಸಿರುವರಾದರೂ ಕನ್ನಡಭಾಷೆಯಲ್ಲಿಯ ವಿಶೇಷ ವರ್ಣಗಳನ್ನು ಕೇಶಿರಾಜನು ಗುರುತಿಸಿದ್ದಾನೆ. 'ಇ'ವರ್ಣವು ತಾಲವ್ಯಸ್ವರವಾಗಿದೆ. "ಇಚುಯಶಾನಾಂತಾಲು"[126] ಎಂದು ಪಾಣಿನಿ ತನ್ನ ಶಿಕ್ಷಾಗ್ರಂಥದಲ್ಲಿ ಸ್ಪಷ್ಟಪಡಿ ಸಿದ್ದಾನೆ.ಅಂದರೆ 'ಇ' ವರ್ಣವು ತಾಲವ್ಯಭಾಗದಲ್ಲಿ ಜನಿಸುವ ವರ್ಣವಾಗಿದೆ. ಇ ಕಾರವು ವಿವೃತಸ್ವರವಾಗಿದೆ. ಸಂಸ್ಕೃತವೈಯಾಕರಣಿಗಳಹಾಗೆ ಕನ್ನಡ ವೈಯಾಕರಣಿಗಳಲ್ಲಿ ವರ್ಣಮಾಲೆಯ ಪ್ರತಿಯೊಂದು ಅಕ್ಷರವನ್ನು ಪ್ರತ್ಯೇಕವಾಗಿ ವಿಭಜಿಸಿ ತೋರಿಸುವ, ಅದರ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವ, ಪ್ರಯತ್ನ ಕಂಡುಬಂದಿಲ್ಲ. ಕೇಶಿರಾಜ ಮತ್ತಿತರ ಕನ್ನಡ ವ್ಯಾಕರಣಶಾಸ್ತ್ರಜ್ಞರು ಸಂಸ್ಕೃತಮಾದರಿಯನ್ನೇ ಹೆಚ್ಚಾಗಿ ಅನುಕರಿಸಿದ್ದಾರೆ. 'ಇ' ವರ್ಣವು ತಾಲವ್ಯ ಸ್ಥಾನದಲ್ಲಿ ಉಚ್ಚಾರವಾಗುವಕಾರಣ 'ಅ' ವರ್ಣದ ಉಚ್ಚಾರಣಾಸ್ಥಾನದ ನಂತರ ಬರುವುದರಿಂದ 'ಇ' ವರ್ಣಕ್ಕೆ ದ್ವಿತೀಯ ಸ್ಥಾನವನ್ನು ವರ್ಣಮಾಲೆಯಲ್ಲಿ ಕಲ್ಪಿಸಲಾಗಿದೆ, ಪಾಣಿನಿಯು ಮಾಹೇಶ್ವರಸೂತ್ರದ ಮೂಲಕ ಅ, ಇ, ಉ ವರ್ಣಗಳನ್ನು ಒಂದು ಸೂತ್ರದ ಮೂಲಕ ಹೇಳಿರುವುದು ಅರ್ಥಗರ್ಭಿತವಾಗಿದೆ.

---

[126]ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :56, ಎರಡನೇ ಪ್ಯಾರಾದ ಉಪ ಶೀರ್ಷಿಕೆ.




ಚಿತ್ರ ಸಂಖ್ಯೆ 3

[127]

ಬಹುಶಃ ವರ್ಣಮಾಲೆಯಲ್ಲಿ ಅ,ಇ,ಉ ವರ್ಣಗಳಷ್ಟು ಸ್ವತಂತ್ರವಾದ ವರ್ಣಗಳಿಲ್ಲ. ಏಕೆಂದರೆ ಇವಗಳ ಹೊರತಾಗಿ ಬೇರೆ ಯಾವುದೇ ವರ್ಣವನ್ನು ತೆಗೆದುಕೊಂಡರೂ ಅವು ಒಂದಿಲ್ಲೊಂದು ಬಗೆಯಲ್ಲಿ ಸಂಯುಕ್ತವರ್ಣಗಳೇ ಆಗುತ್ತವೆ. ಉದಾ 'ಏ' ವರ್ಣವನ್ನು ಬಿಡಿಸಿದಾಗ ಅಲ್ಲಿ 'ಅ' ಮತ್ತು 'ಈ' ವರ್ಣದ ಸಂಯೋಗವನ್ನು ಕಾಣಬಹುದಾಗಿದೆ. 'ಕ' ವರ್ಣವನ್ನು ತೆಗೆದುಕೊಂಡಾಗ 'ಕ್' ಮತ್ತು 'ಅ' ವರ್ಣಗಳ ಸಮ್ಮಿಶ್ರಣವನ್ನು ಅರಿಯಬಹುದಾಗಿದೆ. ಹೀಗೆ ಅ,ಇ,ಉ ವರ್ಣಗಳು ಸಂಪೂರ್ಣ ಸ್ವತಂತ್ರವರ್ಣಗಳಾಗಿವೆ. 'ಇ' ವರ್ಣದ ವಿಕಾಸಪಥಗಳನ್ನು ಈ ಮೇಲಿನ

---

[127] ಕನ್ನಡ 'ಇ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 40 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಪುಟ 271. ಹಾಗೂ ಸಂಸ್ಕೃತ 'ಇ ' ವರ್ಣದ ವಿಕಾಸ ಚಿತ್ರವನ್ನು [127] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 271.

ಚಿತ್ರದಮೂಲಕ ಅರಿಯಬಹುದಾಗಿದೆ. 'ಇ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಪ್ರತ್ಯೇಕವಾಗಿ ತೋರಿಸಲಾಗಿದೆ. ಬಿಂದುಗಳು ತ್ರಿಕೋನಾಕೃತಿಯಲ್ಲಿ ನಿಲ್ಲಿಸಿದ ರೀತಿಯಲ್ಲಿ 'ಇ' ವರ್ಣವನ್ನು ಸಂಕೇತಿಸಲಾಗುತ್ತಿತ್ತು. ಕನ್ನಡ ಭಾಷೆಯಲ್ಲಿ ಸುಮಾರು 10 ನೇ ಶತಮಾನದ ಹೊತ್ತಿಗೆ ಈಗಿನ ರೂಪವನ್ನು ಪಡೆಯಿತೆನ್ನಬಹುದು. 'ಇ' ವರ್ಣವು ಬ್ರಾಹ್ಮಿಲಿಪಿಯ ಭಾಗಶಃ ರೂಪವನ್ನು ಮೈಗೂಡಿಸಿಕೊಂಡಿದೆ. ಕನ್ನಡ 'ಇ' ವರ್ಣವನ್ನು ಓರೆಯಾಗಿ ಬರೆದಾಗ ಅದು ಸಂಸ್ಕೃತ ಇ ವರ್ಣವನ್ನೇ ಹೋಲುವ ರೀತಿಯಲ್ಲಿದೆ. ಚಿತ್ರ ಸಂಖ್ಯೆ 3 ರಲ್ಲಿ ಕನ್ನಡ 'ಇ' ವರ್ಣದ ರೂಪವಿಕಾಸವನ್ನು , ಸಂಸ್ಕೃತ 'ಇ' ವರ್ಣದ ರೂಪವಿಕಾಸವನ್ನು ಹಾಗೂ 'ಇ' ವರ್ಣವನ್ನು ಉಚ್ಚಾರಮಾಡುವಾಗ ಧ್ವನ್ಯಂಗಗಳ ಸ್ವರೂಪವನ್ನು ಅರಿಯಬಹುದಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಇ' ವರ್ಣವನ್ನು ಉಚ್ಚಾರಮಾಡಬೇಕು.**

### ಈ ವರ್ಣ

'ಈ' ವರ್ಣವು 'ಇ' ವರ್ಣದ ದೀರ್ಘವಾಗಿದೆ. ಆಶ್ಚರ್ಯದ ಸಂಗತಿಯೆಂದರೆ ಉಳಿದ ಹ್ರಸ್ವ ಮತ್ತು ದೀರ್ಘಸ್ವರಗಳಂತೆ ರೂಪಸಾಮ್ಯವನ್ನು 'ಇ' ಮತ್ತು 'ಈ' ವರ್ಣಗಳು ಹೊಂದದೇ ಇರುವುದು, 'ಅ' ಮತ್ತು 'ಆ' ವರ್ಣಗಳು ಅದೇರೀತಿ 'ಉ' ಮತ್ತು 'ಊ' ವರ್ಣಗಳು ಪರಸ್ಪರ ರೂಪ ಸಾಮ್ಯತೆಯನ್ನು ಹೊಂದಿರುವಂತೆ 'ಇ' ಮತ್ತು 'ಈ' ವರ್ಣಗಳು ರೂಪಸಾಮ್ಯವನ್ನು ಹೊಂದಿಲ್ಲ, ಉಚ್ಚಾರಣೆಯಲ್ಲಿ ಸಾದೃಶ್ಯವನ್ನು ಹೊಂದಿದ್ದರೂ ಬರವಣಿಗೆಯಲ್ಲಿ ಭಿನ್ನವಾಗಿವೆ. ಅಶೋಕನ ಶಾಸನಗಳ ಕಾಲದಲ್ಲಿನ 'ಈ' ವರ್ಣದ ರೂಪವನ್ನು ಪತ್ತೆಹಚ್ಚಲೂ ಇಂದಿಗೂ ಸಾಧ್ಯವಾಗಿಲ್ಲ. ಶಾತವಾಹನರ ಕಾಲದಲ್ಲಿ 'ಈ' ವರ್ಣವನ್ನು ಗುರುತಿಸಿರುವುದು ಕಂಡು ಬರುತ್ತದೆ. ಈ ಕೆಳಗಿನ ಚಿತ್ರದಲ್ಲಿ 'ಈ' ವರ್ಣದ ವಿಕಾಸಪಥವನ್ನು ಅರಿಯ ಬಹುದಾಗಿದೆ. ಈ ವರ್ಣವು ತಾಲವ್ಯ ಭಾಗದಲ್ಲಿ ಉಚ್ಚರಿತ ವಾಗುವ ವರ್ಣವಾಗಿದೆ ಅದರ ಉಚ್ಚಾರಣಸ್ಥಾನ ಈ

ಕೆಳಗಿನ ಚಿತ್ರದಲ್ಲಿ ತೋರಿಸಲಾಗಿದೆ. ಇನ್ನೊಂದು ಮುಖ್ಯವಾದ ವಿಚಾರ 'ಈ' ವರ್ಣದ ಕುರಿತಾಗಿಹೇಳಬೇಕೆಂದರೆ ಕನ್ನಡ ವರ್ಣಮಾಲೆಯ ಬಹುತೇಕ ವರ್ಣಗಳ ರೂಪಗಳು ಮೈಸೂರು ಒಡೆಯರ ಕಾಲದಲ್ಲಿ ಇಂದಿನ ರೂಪವನ್ನು ಪಡೆದಿವೆ ಆದರೆ ಇವುಗಳಿಗೆ 'ಈ' ವರ್ಣವು ಅಪವಾದವಾಗಿದೆ. ಏಕೆಂದರೆ 'ಈ' ವರ್ಣದ ಬರವಣಿಗೆಯಲ್ಲಿ ವ್ಯತ್ಯಾಸವಾಗಿರುವುದನ್ನು ಗಮನಿಸ ಬಹುದಾಗಿದೆ. 'ಈ' ವರ್ಣದ ವೃತ್ತದ ಹೊರಭಾಗದ ಕೊಂಬಿನ ಸ್ವರೂಪ ಇಂದು ತಲೆಕೆಳಗಾದಂತೆ ಬದಲಾಗಿರುವುದನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಪಾಣಿನಿ ತನ್ನ ಅಷ್ಟಾಧ್ಯಾಯಿಯ ಮಾಹೇಶ್ವರ ಸೂತ್ರಗಳಲ್ಲಿ 'ಈ' ವರ್ಣವನ್ನು ನೇರವಾಗಿ ಹೇಳದಿದ್ದರೂ 'ಈ' ವರ್ಣದ ಮೂಲವರ್ಣವಾದ ಇ ವರ್ಣಕ್ಕೆ ದೀರ್ಘ ಮತ್ತು ಪ್ಲುತ ಭೇದಗಳನ್ನು ಹೇಳಿದ್ದಾನೆ ಒಂದು ಪ್ರಮುಖವರ್ಣವಾಗಿ ವರ್ಣಮಾಲೆಯಲ್ಲಿ ಇದಕ್ಕೆ ಸ್ಥಾನನೀಡಲಿಲ್ಲ. 'ಈ' ವರ್ಣವು ಎರಡು ಹ್ರಸ್ವ 'ಇ' ವರ್ಣಗಳ ಉಚ್ಚಾರಣೆಯನ್ನು ಹೊಂದಿದೆ. 'ಈ' ವರ್ಣದ ವಿಕಾಸಪಥಗಳನ್ನು ಈ ಮೇಲಿನ ಚಿತ್ರದಮೂಲಕ ಅರಿಯಬಹುದಾಗಿದೆ. 'ಈ' ವರ್ಣದ **ಉಚ್ಚಾರಣೆಯ** ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಪ್ರತ್ಯೇಕವಾಗಿ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಈ' ವರ್ಣವನ್ನು ಉಚ್ಚಾರಮಾಡಬೇಕು.**




ಚಿತ್ರ ಸಂಖ್ಯೆ 4

[128]

## ಉ ವರ್ಣದ ಚರಿತ್ರೆ

ಕನ್ನಡ ವರ್ಣಮಾಲೆಯ ಮೂರನೆ ಪ್ರಧಾನ ಸ್ವರವಾಗಿ ಸರಣಿಯಲ್ಲಿ ಐದನೇ ವರ್ಣವಾಗಿ ಬಳಕೆಯಾಗುವ ವರ್ಣವಾಗಿದೆ. 'ಉ' ವರ್ಣ 'ಅ' ಮತ್ತು 'ಇ' ವರ್ಣದಂತೆ ಸ್ವತಂತ್ರ ವರ್ಣವಾಗಿದೆ. ಅ,ಇ,ಉ ಹೊರತಾಗಿ ಉಳಿದ ವರ್ಣಗಳು ಒಂದು ಅಥವಾ ಒಂದಕ್ಕಿಂತ ಹೆಚ್ಚು ವರ್ಣಗಳ ಸಮ್ಮಿಶ್ರಣದ ಫಲವಾಗಿದ್ದರೆ ಇವು ಸ್ವತಂತ್ರ ಸ್ವರಗಳಾಗಿವೆ, ಈಗಾಗಲೇ ಮೇಲಿನ ಪ್ಯಾರಾದಲ್ಲಿ ವಿವರವಾಗಿ ಚರ್ಚಿಸಲಾಗಿದೆ. 'ಉ' ವರ್ಣವನ್ನು 'ಓಷ್ಠ' ಧ್ವನಿಯೆಂದು ಕರೆಯುತ್ತಾರೆ. ಕಾರಣ ತುಟಿ ಅಥವಾ ಓಷ್ಠವನ್ನು ಬಳಸುವುದರ ಮುಖಾಂತರ ಉಚ್ಚಾರಣೆಮಾಡುವ ಧ್ವನಿಗಳಾದ ಕಾರಣ ಓಷ್ಠಧ್ವನಿಯೆಂದು ಕರೆಯುತ್ತರೆ. ಪಾಣಿನಿ ತನ್ನ

[128] ಕನ್ನಡ 'ಈ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ.ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 43.

ಅಷ್ಟಾಧ್ಯಾಯಿಯ ಮಾಹೇಶ್ವರ ಸೂತ್ರಗಳಲ್ಲಿ 'ಉ' ವರ್ಣವನ್ನು ಮೊದಲ ಸೂತ್ರದಲ್ಲಿ ಹೇಳಿದ್ದಾನೆ . ಉ ವರ್ಣದ ಸ್ವರೂಪವನ್ನು ಪರಸ್ಪರ ಸಂಸ್ಕೃತ ಮತ್ತು ಕನ್ನಡ




ಚಿತ್ರ ಸಂಖ್ಯೆ 5

[129]

ವರ್ಣಗಳ ವಿಕಾಸಕ್ಕೆ ತುಲನಾತ್ಮಕವಾಗಿ ಹೋಲಿಸಿದಾಗ ಅಶೋಕನ ಶಾಸನದ ಕಾಲದಲ್ಲಿ ಇರುವ ರೂಪವನ್ನೆ ಸಂಸ್ಕೃತ 'ಉ' ವರ್ಣಹೊಂದಿತು ಕನ್ನಡ 'ಉ' ವರ್ಣವು ಸುಮಾರು 10 ನೇಶತಮಾನದ ಹೊತ್ತಿಗೆ ವಿಭಿನ್ನತೆರನಾದ ಸ್ವರೂಪ ಪಡೆಯಿತು. 'ಉ' ವರ್ಣದ ವಿಕಾಸ ಪಥವನ್ನು ಈ ಮೇಲಿನ ಚಿತ್ರದ ಮೂಲಕ ವಿವರಿಸ ಬಹುದಾಗಿದೆ. ಮುಖವಿವರದಲ್ಲಿ 'ಉ' ವರ್ಣದ ಉಚ್ಚಾರಣಾ ವಿಧಾನವನ್ನು ಚಿತ್ರದಲ್ಲಿ ತೋರಿಸಲಾಗಿದೆ.

---

[129]ಕನ್ನಡ'ಉ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975,ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ ಡಾ.ಎ.ವಿ.ನರಸಿಂಹಮೂರ್ತಿ. ಪುಟ 44 ಹಾಗೂ ಸಂಸ್ಕೃತ 'ಉ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 271.

**ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಉ' ವರ್ಣವನ್ನು ಉಚ್ಚಾರಮಾಡಬೇಕು.**

**ಊ ವರ್ಣ**

'ಇ' ವರ್ಣದ ದೀರ್ಘ 'ಈ' ವರ್ಣವಿರುವಂತೆ 'ಉ' ವರ್ಣದ ದೀರ್ಘವರ್ಣವಾಗಿ 'ಊ' ವರ್ಣವಿದೆ. ಇದರ ಉಚ್ಚಾರಣಾ ಸ್ಥಾನ 'ಓಷ್ಠ' . ಉಚ್ಚಾರಣಾ ವಿಧಾನ ಅಥವಾ ಉಚ್ಚರಿಸುವಾಗ ಮುಖವಿವರದಲ್ಲಿ ಯಾವರೀತಿ ಸ್ವರೂಪವನ್ನು ಹೊಂದಿರುತ್ತದೆ ಎನ್ನುವುದನ್ನು ಚಿತ್ರದಲ್ಲಿತೋರಿಸಲಾಗಿದೆ 'ಇ' ಮತ್ತು 'ಈ' ವರ್ಣವಿಕಾಸದಲ್ಲಿ ಇರುವ ವಿಭಿನ್ನ ತೆರನಾದ ವಿಕಾಸಕ್ರಮದಂತೆಯೆ 'ಉ' ಮತ್ತು 'ಊ' ವರ್ಣವಿಕಾಸ ಕ್ರಮದಲ್ಲಿ ವಿಭಿನ್ನತೆಯಿದೆ. ಅಶೋಕನ ಶಾಸನಕಾಲದಲ್ಲಿ ಇವುಗಳನ್ನು ಪತ್ತೆ ಹಚ್ಚುವ ಕಾರ್ಯಯಶಸ್ವಿಯಾಗಿದೆ ಎನ್ನಬೇಕು. ಸ್ವತಂತ್ರವಾಗಿ 'ಊ' ವರ್ಣವನ್ನು ಪ್ರತ್ಯೇಕ ಸ್ವರವೆಂದು ಬಿಂಬಿಸುವ ವರ್ಣ ಸ್ವರೂಪವು ಅಶೋಕನ ಶಾಸನಗಳಲ್ಲಿ ಕಂಡು ಬರುವುದಿಲ್ಲ. ಆದಾಗ್ಯೂ 'ಊ' ವರ್ಣವು ವ್ಯಂಜನಗಳೊಂದಿಗೆ ಸೇರಿ ಬಳಕೆಯಾಗಿರುವ ಅಂಶಗಳು ಕ್ರಿಸ್ತಶಕ ಮೂರನೇ ಶತಮಾನದಲ್ಲಿ ಇದ್ದ ಸ್ವರೂಪವನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಪಾಣಿನಿ ತನ್ನ ಅಷ್ಟಾಧ್ಯಾಯಿಯ ಮಾಹೇಶ್ವರ ಸೂತ್ರಗಳಲ್ಲಿ 'ಉ' ವರ್ಣವನ್ನು ನೇರವಾಗಿ ವರ್ಣಮಾಲೆಯಲ್ಲಿ ಸೇರಿಸಿಕೊಳ್ಳಲಿಲ್ಲ. ಇದು 'ಉ' ವರ್ಣದ ದೀರ್ಘವಾಗಿದೆ ಎನ್ನುವುದು ಇದಕ್ಕೆ ಉತ್ತರವಾಗಿದೆ. 'ಉ'ವರ್ಣ ಉಚ್ಚಾರಹೊರತಾಗಿ ಇದರ ಉಚ್ಚಾರಣೆ ಅಸಾಧ್ಯವಾಗಿದೆ. ಆದ್ದರಿಂದ 'ಉ' ವರ್ಣ ಸ್ವತಂತ್ರ ವರ್ಣವಾಗಿರುವುದರಿಮದ ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಉ' ವರ್ಣಕ್ಕೆ ಸ್ಥಾನ ಕಲ್ಪಿಸಿ 'ಊ' ವರ್ಣವನ್ನು ಪ್ರಧಾನವರ್ಣಗಳ ಗುಂಪಿಗೆ ಸೇರಿಸಿಲ್ಲ. ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ 'ಊ' ವರ್ಣದ ವಿಕಾಸವನ್ನು ಪಥವನ್ನು ಈ ಕೆಳಗಿನ ಚಿತ್ರದ ಮೂಲಕ ವಿವರಿಸಬಹುದಾಗಿದೆ. ಹಾಗೆಯೇ ಮುಖವಿವರದಲ್ಲಿ 'ಊ' ವರ್ಣದ ಉಚ್ಚಾರಣಾ ವಿಧಾನವನ್ನು ಚಿತ್ರಸಂಖ್ಯೆ-6 ರಲ್ಲಿ ತೋರಿಸಲಾಗಿದೆ.

ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಊ' ವರ್ಣವನ್ನು ಉಚ್ಚಾರಮಾಡಬೇಕು.




ಚಿತ್ರ ಸಂಖ್ಯೆ 6

[130]

## ಋ ವರ್ಣ

---

[130] 'ಕನ್ನಡ ವಿಶ್ವಕೋಶ'ಸಂಪುಟ 2, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವಸಂಪಾದಕರು ದೇ. ಜವರೇಗೌಡ, ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1970, ಪುಟ ಸಂಖ್ಯೆ 820.

ಕನ್ನಡ ವರ್ಣಮಾಲೆಯ ಏಳನೆಯಕ್ಷರ. ಮೂಲತಃ ಕನ್ನಡ ಭಾಷೆಯಲ್ಲಿ 'ಋ' ವರ್ಣವು ಇರಲಿಲ್ಲ. ಸಂಸ್ಕೃತ ಭಾಷೆಯ ಸಂಪರ್ಕದಿಂದ ಕನ್ನಡಭಾಷೆಯಲ್ಲಿ ಬಳಕೆಯಲ್ಲಿರುವ ವರ್ಣವಾಗಿದೆ. ಪ್ರಸ್ತುತ ಕನ್ನಡ ಭಾಷೆಯ ವ್ಯಾವಹಾರಿಕ ಬಳಕೆಯ ದೃಷ್ಟಿಯಿಂದ 'ಋ' ವರ್ಣವನ್ನು ಅಧ್ಯಯನ ಮಾಡುವುದು ಅಗತ್ಯವಿದೆ. 'ಋ' ವರ್ಣದ ಬ್ರಾಹ್ಮೀಭಾಷೆಯ ಸ್ವರೂಪ ಇನ್ನೂ ತಿಳಿದು ಬಂದಿಲ್ಲ. ಕದಂಬರ ಶಾಸನಗಳಲ್ಲಿಯ ಉಲ್ಲೇಖದಲ್ಲಿಯ ರೂಪವೇ ನಮಗೆ ದೊರೆತಿರುವ ಅತ್ಯಂತ ಪ್ರಾಚೀನರೂಪ ಎನ್ನಬಹುದಾಗಿದೆ. ಕನ್ನಡದಲ್ಲಿ ಸಂಯುಕ್ತಾಕ್ಷರಗಳಲ್ಲಿ 'ಋ' ವರ್ಣ ಬಳಕೆಯಾಗು ವುದನ್ನು ಗಮನಿಸಬಹುದಾಗಿದೆ ಮತ್ತು 'ರ' ವರ್ಣವನ್ನು 'ಋ' ವರ್ಣದ ಸಂವಾದಿಯಾಗಿ ಉಚ್ಚಾರಣೆಯಲ್ಲಿ ಬಳಕೆಯಾಗುತ್ತಿರುವುದನ್ನು ಅರಿಯಬಹುದಾಗಿದೆ. ಕೇಶಿರಾಜನು 'ಋ' ವರ್ಣವನ್ನು ಶಿಥಿಲದ್ವಿತ್ವವನ್ನಾಗಿ[131] ಬಳಸಿದ್ದಾನೆ ಮತ್ತು ಆತ ಕನ್ನಡ ಶುದ್ಧಗೆಯನ್ನು ಹೇಳುವಾಗ 'ಋ' ವರ್ಣವನ್ನು ಕೈಬಿಟ್ಟಿರುವುದನ್ನು ಗಮನಿಸಬಹುದಾಗಿದೆ. ಆದರೆ 'ರ' ವರ್ಣ ಮತ್ತು 'ಋ' ವರ್ಣಗಳಲ್ಲಿ ಪರಸ್ಪರ ವ್ಯತ್ಯಾಸವಿದೆ. 'ರ' ವರ್ಣ 'ದಂತ್ಯ' ವರ್ಣವಾದರೆ (ಅಂದರೆ ಉಚ್ಚಾರಣಾ ಸ್ಥಾನದ ದೃಷ್ಟಿಯಿಂದ ಹೇಳುವುದಾದರೆ 'ದಂತ್ಯ' ಎಂದರ್ಥ) 'ಋ' ವರ್ಣ ಮೂರ್ಧನ್ಯ ವರ್ಣವಾಗಿದೆ. 'ಋ' ವರ್ಣ ಸ್ವರಗಳ ಗುಂಪಿಗೆ ಸೇರುವ ವರ್ಣವಾದರೆ 'ರ' ವ್ಯಂಜನಗಳ ಗುಂಪಿಗೆ ಸೇರಿ 'ತಾಡಿತ' ವರ್ಣವಾಗಿ ಬಳಕೆಯಾಗುತ್ತಿದೆ. 'ರ' ವರ್ಣ 'ಋ' ವರ್ಣಗಳ ಉಚ್ಚಾರಣಾ ಭಿನ್ನತೆಯನ್ನು ಹೊಂದಿವೆ. ಪಾಣಿನಿ ತನ್ನ ಅಷ್ಟಾಧ್ಯಾಯಿಯ ಮಾಹೇಶ್ವರ ಸೂತ್ರಗಳಲ್ಲಿ 'ಋ' ಮತ್ತು 'ಲೃ' ವರ್ಣವನ್ನು ಪ್ರತ್ಯೇಕ ಸೂತ್ರದ ಮೂಲಕ ಹೇಳಿದ್ದಾನೆ. 'ಋ' ವರ್ಣವನ್ನು ಉಚ್ಚಾರ ಮಾಡುವಾಗ ಮುಖವಿವರದಲ್ಲಿಯ ಧ್ವನ್ಯಂಗಗಳ ಸ್ವರೂಪವನ್ನು ಈ ಕೆಳಗಿನ ಚಿತ್ರದಲ್ಲಿ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಋ' ವರ್ಣವನ್ನು ಉಚ್ಚಾರಮಾಡಬೇಕು.**

---

[131]. ಶಬ್ದಮಣಿದರ್ಪಣ ಸಂಗ್ರಹ.ಸಂಪಾದಕರು ಪ್ರೊ. ಬಿ.ಟಿ.ಸಾಸನೂರ ಹಾಗೂ ಡಾ. ಎಂ. ಎಂ. ಕಲಬುರ್ಗಿ.ಪ್ರಕಾಶಕರು : ಮನೋಹರ ಘಾಣೇಕರ್ ಸಮಾಜ ಪುಸ್ತಕಾಲಯ ಧಾರವಾಡ, ಪುಟ ಸಂಖ್ಯೆ: 18 ಮೂರನೇ ಸೂತ್ರದ ನಾಲ್ಕನೇ ಸಾಲು.

[132]

ಕನ್ನಡ ಝ ವರ್ಣದ ವಿಕಾಸ



ಝ ಧ್ವನಿ ಉತ್ಪಾದನೆಯಾಗುವಾಗ ಮುಖ ವಿವರದ ಒಂದು ಸ್ಥೂಲ ನೋಟ



ಚಿತ್ರ ಸಂಖ್ಯೆ 7

## ಎ ವರ್ಣ

ಕನ್ನಡ ವಿಶಿಷ್ಟವರ್ಣವಾಗಿ ಕೇಶಿರಾಜ ಹೇಳಿದ್ದಾನೆ ಕನ್ನಡಭಾಷೆಯ ಅಸಾಧಾರಣ ಲಕ್ಷಣಗಳಲ್ಲಿ 'ಎ' ವರ್ಣವನ್ನು ಕೇಶಿರಾಜ ಶಬ್ದಮಣಿದರ್ಪಣಗ್ರಂಥದಲ್ಲಿ ಹೇಳಿರುವುದು ಕಂಡುಬರುತ್ತದೆ. ಸಂಸ್ಕೃತದಲ್ಲಿ ಹ್ರಸ್ವ 'ಎ' ವರ್ಣವಿಲ್ಲದಿರುವುದರಿಂದ ಸಂಸ್ಕೃತದ ವರ್ಣವಿಕಾಸದಲ್ಲಿ 'ಎ' ವರ್ಣದ ವಿಕಾಸ ಕಂಡುಬರುವುದಿಲ್ಲ. ಯಾವ ಕಾಲದಲ್ಲಿ 'ಎ' ಮತ್ತು 'ಏ' ವರ್ಣವಿಕಸಿತವಾದವು, ಬೇರ್ಪಟ್ಟವು ಎನ್ನುವುದಕ್ಕೆ ಖಚಿತ ಆಧಾರಗಳಿಲ್ಲ. ಸಾಂದರ್ಭಿಕವಾಗಿ ಇವುಗಳಬಳಕೆಯು ಭಾಷೆಯಲ್ಲಿ ನಡೆಯುತ್ತಿತ್ತೆಂದು ಊಹಿಸಬಹುದಾಗಿದೆ.

---

[132] ಕನ್ನಡ 'ಝ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 46.

**ಕನ್ನಡದಲ್ಲಿ 'ಎ' ವರ್ಣದ ಉಲ್ಲೇಖವನ್ನು ಕೇಶಿರಾಜನ ಉಲ್ಲೇಖದಿಂದಲೇ ಖಚಿತ ಪಡಿಸಬಹುದಾಗಿದೆ. ಹದಿನೈದನೇ ಶತಮಾನದಲ್ಲಿ ವಿಜಯನಗರದ ಕಾಲದಲ್ಲಿ ಸಿಗುವ ಶಾಸನಗಳ ಆಧಾರದಿಂದ ವ್ಯಂಜನಾಕ್ಷರಗಳೊಂದಿಗೆ ಸೇರಿಸಿ ಯಾವರೀತಿ 'ಎ' ವರ್ಣ ಬಳಸಲ್ಪಡುತ್ತಿತ್ತು ಎನ್ನುವುದನ್ನು ಅರಿಯಬಹುದಾಗಿದೆ.** 'ಎ' ವರ್ಣವನ್ನು ಉಚ್ಚಾರ ಮಾಡುವಾಗ ಮುಖವಿವರದಲ್ಲಿಯ ಧ್ವನ್ಯಂಗಗಳ ಸ್ವರೂಪವನ್ನು ಈ ಕೆಳಗಿನ ಚಿತ್ರದಲ್ಲಿ ತೋರಿಸಲಾಗಿದೆ. ಕನ್ನಡ 'ಎ' ವರ್ಣದ ವಿಕಾಸವನ್ನೂ ಚಿತ್ರದಲ್ಲಿ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಎ' ವರ್ಣವನ್ನು ಉಚ್ಚಾರಮಾಡಬೇಕು.**

133




ಚಿತ್ರ ಸಂಖ್ಯೆ 8

---

[133] . ಕನ್ನಡ 'ಎ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 47.

**'ಏ' ವರ್ಣ**

ಇದು ಕನ್ನಡ ವರ್ಣಮಾಲೆಯ 10 ನೇ ವರ್ಣವಾಗಿದೆ. 'ಎ' ವರ್ಣದ ದೀರ್ಘ ಸ್ವರವಾಗಿದೆ. 'ಎ' ವರ್ಣವು ಸಂಸ್ಕೃತ ವರ್ಣಮಾಲೆಯಲ್ಲಿ ಕಾಣುವುದಿಲ್ಲ. ಆದರೆ 'ಎ' ವರ್ಣದದೀರ್ಘಸ್ವರವನ್ನು ಪಾಣಿನಿಯು ಮಾಹೇಶ್ವರಸೂತ್ರದಲ್ಲಿ ಮೂರನೆಯ ಸೂತ್ರವಾಗಿ ಹೇಳಿದ್ದಾನೆ. 'ಏ ಓಙ್'[134] ಎನ್ನುವ ಸೂತ್ರವನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಬಹುತೇಕ ಸಂಸ್ಕೃತದ ಶಿಕ್ಷಾ, ಪ್ರಾತಿಶಾಖ್ಯಗ್ರಂಥಗಳ ಪರಂಪರೆಯಲ್ಲಿ 'ಏ' ವರ್ಣವು ಕಂಡುಬರುತ್ತದೆ. . ಪಾಣಿನಿ ತನ್ನ ಅಷ್ಟಾಧ್ಯಾಯಿಯ ಮಾಹೇಶ್ವರ ಸೂತ್ರಗಳಲ್ಲಿ ಮೊದಲ ಸೂತ್ರವನ್ನು ಸ್ವತಂತ್ರಸ್ವರಗಳನ್ನಾಗಿಯೂ, ಎರಡನೇ ಸೂತ್ರವನ್ನು ಮಿಶ್ರಸ್ವರಗಳನ್ನಾಗಿಯೂ, ಮೂರನೆಯಸೂತ್ರವನ್ನು ಎರಡಕ್ಕಿಂತ ಹೆಚ್ಚು ಸ್ವರಗಳನ್ನುಹೊಂದಿರುವ ಮಿಶ್ರಸ್ವರಗಳನ್ನಾಗಿಯೂ ವರ್ಗೀಕರಿಸಿದ್ದಾನೆ. ಬ್ರಾಹ್ಮಿ ಲಿಪಿಯಲ್ಲಿ ಈ ವರ್ಣವು ತ್ರಿಕೋನದಂತೆ ಇರುವುದನ್ನು ಈ ಕೆಳಗಿನ ಚಿತ್ರಮೂಲಕ ಅರಿಬಹುದು. ಕದಂಬರ ಕಾಲದಲ್ಲಿ ಮೊದಲಿನ ಸ್ವರೂಪದ ಕೆಳಗಿನ ಒಳಭಾಗ ವೃತ್ತಾಕಾರದಂತಾಗಿ ಚೌಕತಲೆಯ ತಲೆಕಟ್ಟು ಸ್ಪಷ್ಟವಾಗಿ ಕಾಣುತ್ತದೆ. ಕ್ರಿಸ್ತಶಕ 9 ನೇ ಶತಮಾನದಲ್ಲಿ ಕೆಳಗಿನ ವೃತ್ತಾಕಾರದಲ್ಲಿ ಬದಲವಣೆಗಳುಂಟಾಗಿ 'ಏ' ವರ್ಣವು ಈಗಿನರೂಪವನ್ನು ತಾಳುತ್ತದೆ. 13ನೇ ಶತಮಾನದಲ್ಲಿ ವೃತ್ತಮಾರ್ಪಟ್ಟು ಒಂದು ಸಣ್ಣ ಕೊಂಡಿಯಂತೆ ಬದಲಾಗುತ್ತದೆ. ಇದೇ ಪ್ರವೃತ್ತಿ ಮುಂದುವರಿದು ಈಗಿರುವ ರೂಪವನ್ನು ತಾಳುತ್ತದೆ. ಷ

---

134 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಉಪ ಶೀರ್ಷಿಕೆ.




ಚಿತ್ರ ಸಂಖ್ಯೆ 9

[135]

ಉಚ್ಚಾರಣೆಯಲ್ಲಿ ಗೊಂದಲವಿದ್ದರೂ ಚಾಕ್ಷುಷ ರೂಪಮಾತ್ರ ಬಹಳಕಾಲ ಒಂದೇ ಆಗಿತ್ತೆಂದು ಕಂಡು ಬರುತ್ತದೆ. 'ಏ' ವರ್ಣವು ಪೂರ್ವಅಗೋಲ ಅರ್ಧಸಂವೃತ ದೀರ್ಘ ಸ್ವರವನ್ನು ಸೂಚಿಸುತ್ತದೆ. 'ಏ'ವರ್ಣವನ್ನು ಉಚ್ಚಾರ ಮಾಡುವಾಗ ಮುಖವಿವರದಲ್ಲಿಯ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರಸಂಖ್ಯೆ-9ರಲ್ಲಿ ತೋರಿಸಲಾಗಿದೆ. ಸಂಸ್ಕೃತ ಹಾಗು ಕನ್ನಡ 'ಏ' ವರ್ಣದ ವಿಕಾಸವನ್ನೂ ಚಿತ್ರದಲ್ಲಿ ತೋರಿಸಲಾಗಿದೆ. ಮುಖವಿವರದಲ್ಲಿ ಹವೆಯನ್ನು

[135] 'ಕನ್ನಡ ವಿಶ್ವಕೋಶ'ಸಂಪುಟ 3, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವಸಂಪಾದಕರು ದೇ. ಆವರೇಗೌಡ, ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1971, ಪುಟ ಸಂಖ್ಯೆ 134. ಹಾಗೂ ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ಎವರಣೆ, ಪುಟ 271.

ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಏ' ವರ್ಣವನ್ನು ಉಚ್ಚಾರಮಾಡಬೇಕು.

**'ಐ' ವರ್ಣ**

'ಐ' ವರ್ಣವನ್ನು ಸಂಯುಕ್ತಸ್ವರವೆಂದು ಕರೆಯಲಾಗಿದೆ. 'ಐ' ವರ್ಣವನ್ನು 'ಅಇ'ಎಂದು ಉಚ್ಚಾರ ಮಾಡಲಾಗುತ್ತಿತ್ತು. ಪಾಣಿನಿಯು ಮಾಹೇಶ್ವರ ಸೂತ್ರದಲ್ಲಿ 'ಐ' ಮತ್ತು 'ಔ' ವರ್ಣಗಳನ್ನು ಒಂದು ಪ್ರತ್ಯೇಕಸೂತ್ರದಲ್ಲಿ ಹೇಳಿದ್ದಾನೆ. ದಂತ ಮತ್ತು ಓಷ್ಠ ಎರಡೂ ಧ್ವನ್ಯುತ್ಪಾದನಾಸ್ಥಾನವನ್ನು ಏಕಕಾಲದಲ್ಲಿ ಬಳಸಿಕೊಂಡು ಉಚ್ಚಾರಗೊಳ್ಳುವ ವರ್ಣವಾಗಿದೆ. 'ಐ' ವರ್ಣದಲ್ಲಿ ಎರಡಕ್ಕಿಂತ ಹೆಚ್ಚುವರ್ಣಗಳ ಸಮ್ಮಿಶ್ರಣವಿದೆ. ಅ+ಇ=ಎ > ಎ+ಇ=ಐ. 'ಐ' ವರ್ಣವು ಅಶೋಕಶಾಸನಗಳಲ್ಲಿ ಎರಡು ಗೆರೆಗಳ ಆಕೃತಿಯಲ್ಲಿ ಕಂಡುಬರುತ್ತದೆ. ಕನ್ನಡ ಭಾಷೆಯಲ್ಲಿ ಇದರ ಬಳಕೆ ಮೊದಲಿನಿಂದಲೂ ಇತ್ತು ಎನ್ನುವುದಕ್ಕೆ ಇದು ಸಾಕ್ಷ್ಯನೀಡುತ್ತದೆ. 'ಐ' ವರ್ಣವು ಶಬ್ದಾದಿಯಲ್ಲಿ ಕನ್ನಡ ಭಾಷೆಯಲ್ಲಿ ಬಳಕೆಯಾಗುವುದು ತುಂಬವಿರಳವಾದುದು. ವ್ಯಂಜನಾಕ್ಷರ ಸಹಿತವಾಗಿ




ಚಿತ್ರ ಸಂಖ್ಯೆ 10

136

ಬಳಕೆಯಾಗುವುದನ್ನು ಕಾಣಬಹುದು. ಉದಾಹರಣೆಗೆ ಕೈ, ಸೈ ಇತ್ಯಾದಿ. 'ಐ' ವರ್ಣವನ್ನು ಕನ್ನಡಭಾಷೆಯಲ್ಲಿ ಅಗತ್ಯ ಅಥವಾ ಅನಿವಾರ್ಯದ ವರ್ಣವಲ್ಲೆನ್ನಬಹುದು. 'ಐ' ವರ್ಣವಿಲ್ಲದೆಯೂ 'ಐ' ವರ್ಣದ ಕಾರ್ಯವನ್ನು ಮಾಡಬಹುದಾಗಿದೆ. ಉದಾಹರಣೆಗೆ 'ಐದು' ಎನ್ನುವುದನ್ನು 'ಅಯಿದು' ಎಂದೂ, 'ಕೈಕೆ' ಎಂಬುದನ್ನು 'ಕಯಿಕೆ' ಎಂದೂ ಉಚ್ಚಾರ ಮಾಡಬಹುದಾಗಿದೆ, ಬರೆಯಬಹುದಾಗಿದೆ. ಅಂದರೆ 'ಐ' ವರ್ಣವಿಲ್ಲದೆಯೂ ಇಲ್ಲಿ ಭಾಷಾ ಶಬ್ದರಚನೆ ಸಾಧ್ಯವಾಗಿದೆ. 'ಐ'ವರ್ಣವನ್ನು ಉಚ್ಚಾರ ಮಾಡುವಾಗ ಮುಖವಿವರದಲ್ಲಿಯ ಧ್ವನ್ಯಂಗಗಳ ಸ್ವರೂಪವನ್ನು ಈಮೇಲಿನ ಚಿತ್ರಸಂಖ್ಯೆ-10ರಲ್ಲಿ ತೋರಿಸಲಾಗಿದೆ. ಕನ್ನಡ 'ಐ' ವರ್ಣದ ವಿಕಾಸವನ್ನು ಚಿತ್ರದಲ್ಲಿ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ**

[136] 'ಕನ್ನಡ ವಿಶ್ವಕೋಶ'ಸಂಪುಟ 3, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವಸಂಪಾದಕರು ದೇ. ಜವರೇಗೌಡ, ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1971, ಪುಟ ಸಂಖ್ಯೆ 248.

ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಐ' ವರ್ಣವನ್ನು ಉಚ್ಚಾರಮಾಡಬೇಕು.

**ಒ ವರ್ಣ**

ಮೇಲೆ ವಿವರಿಸಿದ 'ಎ' ವರ್ಣದಂತೆ ಕೇಶಿರಾಜ ಹೇಳಿದ ಕನ್ನಡಭಾಷೆಯ ಅಸಾಧಾರಣ ಲಕ್ಷಣಗಳಲ್ಲಿ 'ಒ' ವರ್ಣವು ಕೂಡ ಸೇರುತ್ತದೆ. ಕನ್ನಡದ ವಿಶಿಷ್ಟ ವರ್ಣವಾಗಿದೆ. ಸಂಸ್ಕೃತ ಭಾಷೆಯಲ್ಲಿಲ್ಲದ ವಿಶಿಷ್ಟ ವರ್ಣವಾಗಿ ಕನ್ನಡದ 'ಒ' ವರ್ಣ ನಿಲ್ಲುತ್ತದೆ. 'ಒ' ವರ್ಣದ ಉಲ್ಲೇಖವನ್ನು ಕೇಶಿರಾಜನ ಶಬ್ದಮಣಿ ದರ್ಪಣದ ಉಲ್ಲೇಖದಿಂದಲೇ ಖಚಿತಪಡಿಸಬಹುದಾಗಿದೆ. ಹದಿನೈದನೇ ಶತಮಾನದಲ್ಲಿ ವಿಜಯನಗರದ ಕಾಲದಲ್ಲಿ ಸಿಗುವ ಶಾಸನಗಳ ಆಧಾರದಿಂದ ವ್ಯಂಜನಾಕ್ಷರಗಳೊಂದಿಗೆ ಸೇರಿಸಿ ಯಾವರೀತಿ 'ಒ' ವರ್ಣ ಬಳಸಲ್ಪಡುತ್ತಿತ್ತು ಎನ್ನುವುದನ್ನು ಅರಿಯಬಹುದಾಗಿದೆ. ಒ ವರ್ಣ ಮತ್ತು ಓ ವರ್ಣ ಯಾವಾಗ ವಿಭಿನ್ನ ತೆರನಾದ ವರ್ಣಗಳಾಗಿ ಮಾರ್ಪಟ್ಟವು ಎನ್ನುವುದಕ್ಕೆ ಖಚಿತ ಆಧಾರಗಳಿಲ್ಲ. 'ಒ'ವರ್ಣವನ್ನು ಉಚ್ಚಾರ ಮಾಡುವಾಗ ಮುಖವಿವರದಲ್ಲಿಯ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರಸಂಖ್ಯೆ-11ರಲ್ಲಿ ತೋರಿಸಲಾಗಿದೆ. ಕನ್ನಡ 'ಒ' ವರ್ಣದ ವಿಕಾಸವನ್ನೂ ಚಿತ್ರದಲ್ಲಿ ತೋರಿಸಲಾಗಿದೆ.




ಚಿತ್ರ ಸಂಖ್ಯೆ 11

[137]

'ಒ' ವರ್ಣದ ಧ್ವನ್ಯುತ್ಪಾದನಾ ಸ್ಥಾನವನ್ನು ಕುರಿತು ಪಾಣಿನಿಯು ಉಲ್ಲೇಖಮಾಡಿಲ್ಲ. ಅದರ ದೀರ್ಘಸ್ವರವಾದ 'ಓ' ವರ್ಣದಕುರಿತಾಗಿ "ಓದೌತೋಃ ಕಂಠೋಷ್ಠಂ"[138] ಎಂದು ಹೇಳಿರುವುದರಿಂದ ಇದರ ಉಚ್ಚಾರಣಾ ಸ್ಥಾನ ಕಂಠೋಷ್ಠವಾಗಿದೆ. ಅಂದರೆ ಹವೆಯು ಪ್ರಸಾರಗೊಳ್ಳುವಾಗ ಕಂಠ ಮತ್ತು ಓಷ್ಠ ಭಾಗ ಎರಡನ್ನೂ ಬಳಸಿಕೊಂಡು ಧ್ವನ್ಯುತ್ಪಾದನೆಗೆ ಕಾರಣವಾದರೆ ಅದನ್ನು ಕಂಠೋಷ್ಠ ಧ್ವನಿಎಂದು ಕರೆಯುತ್ತೇವೆ. ಮೇಲಿನ ಚಿತ್ರ– 11ರಲ್ಲಿ ಧ್ವನ್ಯುತ್ಪಾದನಾ ಸ್ಥಾನಗಳನ್ನು ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ**

---

[137] ಕನ್ನಡ 'ಒ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 49.

[138] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :17, ಮೂರನೇ ಸಾಲು.

ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಒ' ವರ್ಣವನ್ನು ಉಚ್ಚಾರಮಾಡಬೇಕು.

## 'ಓ' ವರ್ಣ

ಕನ್ನಡ ವರ್ಣಮಾಲೆಯಲ್ಲಿ 'ಒ' ವರ್ಣದ ದೀರ್ಘವರ್ಣವಾಗಿ ಬಳಕೆಯಲ್ಲಿದೆ. ಸಾಮಾನ್ಯವಾಗಿ 'ಒ' ಮತ್ತೊ 'ಓ' ವರ್ಣಗಳ ನಡುವೆ ಯಾವುದೇ ರೀತಿಯ ಭಿನ್ನತೆಯನ್ನು ನಾವು ಗ್ರಾಂಥಿಕವಾಗಿ ಪ್ರಾಚೀನಕಾಲದಲ್ಲಿ ಕಾಣಲು ಅಸಾಧ್ಯವಾಗಿದೆ. ಸಾಂದರ್ಭಿಕವಾಗಿ ಅವುಗಳು ಬಳಕೆಯಾಗುತ್ತಿದ್ದವು ಎನ್ನಬೇಕಾಗುತ್ತದೆ. 'ಓ' ವರ್ಣದ ವಿಕಾಸಪಥವನ್ನು ಈ ಕೆಳಗಿನ ಚಿತ್ರದಮೂಲಕ ಅರಿಯಬಹುದಾಗಿದೆ. ಮುಖವಿವರದಲ್ಲಿ ಇದರ ಉಚ್ಚಾರಣೆಯ ಸ್ವರೂಪವನ್ನೂ ಪ್ರತ್ಯೇಕ ಚಿತ್ರದ ಮೂಲಕ ವಿವರಿಸಲಾಗಿದೆ.




ಚಿತ್ರ ಸಂಖ್ಯೆ 12

139

[139] 'ಕನ್ನಡ ವಿಶ್ವಕೋಶ'ಸಂಪುಟ 3, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವ ಸಂಪಾದಕರು ದೇ. ಜವರೇಗೌಡ, ಸಂಪಾದಕರು ಡಾ.

'ಒ' ಮತ್ತು 'ಓ' ವರ್ಣಗಳು ಲಿಪಿ ವಿಕಾಸಪಥಗಳು ಭಿನ್ನ ರೀತಿಯಾಗಿರುವುದನ್ನು ಗಮನಿಸಬಹುದಾಗಿದೆ. 'ಓ' ವರ್ಣದ ಧ್ವನ್ಯುತ್ಪಾದನಾಸ್ಥಾನ "ಓದೌತೋಃ ಕಂಠೋಷ್ಠಂ" ಎಂದು ಹೇಳಿರುವುದರಿಂದ ಇದರ ಉಚ್ಚಾರಣಾ ಸ್ಥಾನ ಕಂಠೋಷ್ಠಗಿದೆ. ಅಂದರೆ ಹವೆಯು ಪ್ರಸಾರಗೊಳ್ಳುವಾಗ 'ಕಂಠ' ಮತ್ತು 'ಓಷ್ಠ' ಭಾಗ ಎರಡನ್ನೂ ಬಳಸಿಕೊಂಡು ಧ್ವನ್ಯುತ್ಪಾದನೆಗೆ ಕಾರಣವಾದರೆ ಅದನ್ನು ಕಂಠೋಷ್ಠ ಧ್ವನಿಎಂದು ಕರೆಯುತ್ತೇವೆ. ಮೇಲಿನ ಚಿತ್ರ– 12 ರಲ್ಲಿ ಧ್ವನ್ಯುತ್ಪಾದನಾ ಸ್ಥಾನಗಳನ್ನು ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಓ' ವರ್ಣವನ್ನು ಉಚ್ಚಾರಮಾಡಬೇಕು.**

## 'ಔ' ವರ್ಣ

'ಔ' ವರ್ಣವು 'ಐ' ವರ್ಣದಂತೆ ಸಮ್ಮಿಶ್ರ ಸ್ವರವಾಗಿದೆ. 'ಅ' ಮತ್ತು 'ಒ' ಅಥವಾ 'ಓ' ವರ್ಣಗಳ ಸಂಯೋಗ 'ಔ' ವರ್ಣದಲ್ಲಿ ಕಂಡುಬರುತ್ತದೆ. 'ಔ' ವರ್ಣದ ಪ್ರತೇಕ ವಾದ ರೂಪ ಅಶೋಕನ ಶಾಸನಗಳಲ್ಲಿ ಕಾಣಸಿಗುವುದಿಲ್ಲ. ಸಾಮಾನ್ಯವಾಗಿ ವ್ಯಂಜನಯುಕ್ತ ವರ್ಣವಾಗಿ ಬಳಕೆಯಾಗುವ ಕಾರಣ ಇದರ ರೂಪ ಪ್ರಾಚೀನ ಕಾಲದಲ್ಲಿ ಪ್ರತ್ಯೇಕವಾಗಿ ಕಾಣಸಿಗುವುದಿಲ್ಲ. ಪಾಣಿನಿಯು ಅಷ್ಟಾಧ್ಯಾಯಿಯಲ್ಲಿ ಮಾಹೇಶ್ವರ ಸೂತ್ರ ವಿಭಾಗದಲ್ಲಿ ಇದನ್ನು ಹೇಳಿದ್ದಾನೆ. ದಂತ್ಯ ಮತ್ತು ಓಷ್ಠ ಸ್ಥಾನಗಳು ಉಚ್ಚಾರಣಾ ಸ್ಥಾನಗಳಾಗಿವೆ. **'ಔ' ವರ್ಣವನ್ನು ಯಾವ ರೀತಿಯಾಗಿ ಉಚ್ಚಾರ ಮಾಡಬೇಕೆಂಬುದನ್ನು ಈ ಕೆಳಗಿನ ಚಿತ್ರಸಂಖ್ಯೆ–13ರಲ್ಲಿ ವಿವರಿಸಲಾಗಿದೆ.** ಮತ್ತು ಅದರ ವಿಕಾಸಪಥವನ್ನು

---

ಹಾ.ಮಾ.ನಾಯಕ, ಕ್ರಿ.ಶ.1970, ಪುಟ ಸಂಖ್ಯೆ 425 ನೇ ಪುಟ. ಹಾಗೂ ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ. ಪುಟ 271.




ಚಿತ್ರ ಸಂಖ್ಯೆ 13

140

**ಚಿತ್ರದಲ್ಲಿ ಪ್ರತ್ಯೇಕವಾಗಿ ತೋರಿಸಲಾಗಿದೆ.** 'ಔ' ವರ್ಣದ ಧ್ವನ್ಯುತ್ಪಾದನಾಸ್ಥಾನ "ಓದೌತೋಃ ಕಂಠೋಷ್ಠಂ"ಎಂದು ಹೇಳಿರುವುದರಿಂದ ಇದರ ಉಚ್ಚಾರಣಾ ಸ್ಥಾನ ಕಂಠೋಷ್ಠವಾಗಿದೆ. ಅಂದರೆ ಹವೆಯು ಪ್ರಸಾರಗೊಳ್ಳುವಾಗ 'ಕಂಠ' ಮತ್ತು 'ಓಷ್ಠ' ಭಾಗ ಎರಡನ್ನೂ ಬಳಸಿಕೊಂಡು ಧ್ವನ್ಯುತ್ಪಾದನೆಗೆ ಕಾರಣವಾದರೆ ಅದನ್ನು ಕಂಠೋಷ್ಠ ಧ್ವನಿಎಂದು ಕರೆಯುತ್ತೇವೆ. ಮೇಲಿನ ಚಿತ್ರ– 13 ರಲ್ಲಿ ಧ್ವನ್ಯುತ್ಪಾದನಾ ಸ್ಥಾನಗಳನ್ನು ತೋರಿಸಲಾಗಿದೆ. 'ಔ' ವರ್ಣವನ್ನು ಮೊದಲು ಸಂಯುಕ್ತಸ್ವರವೆಂದು ಕರೆಯಲಾಗುತ್ತಿತ್ತು. ಉಚ್ಚಾರಣೆಯ ಕ್ರಮದಿಂದಲೂ 'ಅಉ'ಎಂದು ಉಚ್ಚಾರ ಮಾಡಲಾಗುತ್ತಾ ಇತ್ತು. [141]ಐ ವರ್ಣದಂತೆಯೆ ಔ ವರ್ಣವೂ ಅನಿವಾರ್ಯ ವರ್ಣವಲ್ಲ ಎನ್ನುವುದನ್ನು ಸ್ಪಷ್ಟಪಡಿಸಬಹುದಾಗಿದೆ. 'ಔಷಧ' ಎನ್ನುವುದನ್ನು 'ಒವಷಧ' ಎಂದೂ 'ಗೌರಿ' ಎನ್ನುವುದನ್ನು 'ಗವರಿ' ಎಂದು

---

[140]. ಕನ್ನಡ 'ಔ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 50.

[141] ಭಾರತೀಯಭಾಷಾವಿಜ್ಞಾನ ಕೋಶ ಡಾ. ಬೋಲಾನಾಥ ತಿವಾರಿ. ಪುಟ ಸಂಖ್ಯೆ 271

**ಕರೆಯಬಹುದಾಗಿದೆ. ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಹತ್ತಿರಬಂದು ಹವೆಯು ಹೊರಹೋಗುವಂತೆ ಮಾಡುತ್ತವೆ. ಆ ಸಂದರ್ಭದಲ್ಲಿ 'ಔ' ವರ್ಣವನ್ನು ಉಚ್ಚಾರಮಾಡಬೇಕು.**

## 'ಕ' ವರ್ಣ

'ಕ' ವರ್ಣ ಕಂಠ್ಯ ವರ್ಣವಾಗಿದೆ. ವರ್ಗೀಯ ವ್ಯಂಜನಗಳ ಮೊದಲ ವರ್ಗದ ಮೊದಲ ವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ ಕವರ್ಣವನ್ನು ಕಂಠ್ಯವರ್ಣವೆಂದು ಕರೆಯಲಾಗುತ್ತದೆ. 'ಕ' ವರ್ಣವನ್ನು ಸ್ಪರ್ಶವ್ಯಂಜನಗಳಲ್ಲಿ ಮೊತ್ತಮೊದಲಿಗೆ ಹೇಳಲು ಕಾರಣವನ್ನು ಹುಡುಕಿಹೊರಟರೆ ಸಿಗುವ ಉತ್ತರವೂ ಕೂಡ ಇದನ್ನೇ ಸ್ಪಷ್ಟಪಡಿಸುತ್ತದೆ. ಪಾಣಿನಿಯು ಶಿಕ್ಷಾಗ್ರಂಥದಲ್ಲಿ "ಅಕುಹವಿಸರ್ಜನೀಯಾನಾಂ ಕಂಠಃ"[142] ಎಂದು ಹೇಳಿದ್ದಾನೆ ಅಂದರೆ ಅ,ಕವರ್ಗ,ಹ,ವಿಸರ್ಗಗಳು ಕಂಠದಲ್ಲಿ ಉತ್ಪತ್ತಿಯಾಗುವ ವರ್ಣಗಳಾಗಿವೆ. ಉತ್ಪಾದನಾ ಸ್ಥಾನದ ದೃಷ್ಟಿಯಿಂದ 'ಕ'ವರ್ಣವು ಮುಖವಿವರದ ಆರಂಭದಲ್ಲಿ ಬರುವ ಕಾರಣ 'ಕ'ವರ್ಗವನ್ನು ಮೊದಲ ಪಂಕ್ತಿಯಲ್ಲಿ ವರ್ಣಮಾಲೆಯಲ್ಲಿ ಸೇರಿಸಲಾಗಿದೆ. ಎನ್ನುವುದು ಸ್ಪಷ್ಟವಾಗಿದೆ. 'ಕ'ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಕ'ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ಕ' ವರ್ಣ ಅಘೋಷ, ಅಲ್ಪಪ್ರಾಣ, ಸ್ಪರ್ಶವರ್ಣವಾಗಿದೆ. ಅಘೋಷಗಳ ಉಚ್ಚಾರಣೆಯಲ್ಲಿ ಮುಖವಿವರದಲ್ಲಿಯ ಸ್ಥಾನ ಮತ್ತು ಕರಣಗಳು ಪರಸ್ಪರ ದೂರಸರಿದುಕೊಂಡು ಹವೆಯು ಸುಲಲಿತವಾಗಿ ಹೊರಹೋಗುವಂತೆ ಮಾಡಿ

---

[142] ಪಾಣಿನಿಶಿಕ್ಷಾ ಹಿಂದಿವ್ಯಾಖ್ಯಾನ ಡಾ. ದಾಮೋದರ ಮಹತೋ, ಪುಟ: 25

ಧ್ವನ್ಯುತ್ಪಾದನೆಗೆ ಕಾರಣವಾಗುತ್ತದೆ. ಯಾವುದೇ ಘರ್ಷಣೆಯಾಗಲೀ, ಸ್ವರತಂತ್ರದಲ್ಲಿ ಯಾವುದೇರೀತಿಯ ಕಂಪನವಾಗಲೀ ಸಂಭವಿಸುವುದಿಲ್ಲ. ನಿರಾತಂಕವಾಗಿ ಹವೆಯು ಮುಖವಿವರದಲ್ಲಿ ಚಲನೆಯಾಗುತ್ತಿರುತ್ತದೆ. 'ಕ' ವರ್ಣವನ್ನು ಉಚ್ಚಾರಮಾಡುವ ಸಂದರ್ಭದಲ್ಲಿಯೂ ಮುಖವಿವರದಲ್ಲಿ ಹವೆಯು ಸಂಚಾರವಾಗುವಾಗ ಯಾವುದೇ ರೀತಿಯ ಘರ್ಷಣೆಗಳು ಸಂಭವಿಸುವುದಿಲ್ಲ. ಆದ್ದರಿಂದ 'ಕ' ವರ್ಣವನ್ನು 'ಅಘೋಷಧ್ವನಿ' ಎಂದು ಕರೆಯುತ್ತಾರೆ. 'ಕ' ವರ್ಣವು ಅಲ್ಪಪ್ರಾಣ ವರ್ಣವಾಗಿದೆ. 'ಪ್ರಾಣ' ಎಂದರೆ 'ಉಸಿರು' ಎಂದರ್ಥ. 'ಅಲ್ಪ' ಎಂದರೆ 'ಸ್ವಲ್ಪ' ಎಂದರ್ಥ. ಯಾವ ಧ್ವನಿಯನ್ನು ಉಚ್ಚಾರಮಾಡಲು ಸ್ವಲ್ಪ ಹವೆಯನ್ನು ಅಥವಾ ಶ್ವಾಸವನ್ನು ಬಳಸಿ ಉಚ್ಚಾರಮಾಡುತ್ತೇವೆಯೋ ಅಂತಹ ಧ್ವನಿಗಳನ್ನು ಅಲ್ಪಪ್ರಾಣ ಧ್ವನಿಗಳೆಂದು ಕರೆಯುತ್ತೇವೆ. 'ಕ' ವರ್ಣವನ್ನು ಉಚ್ಚಾರಮಾಡುವಾಗ ಹವೆಯನ್ನು ಸ್ವಲ್ಪ ಬಳಸುವುದರಿಂದ ಅದು ಅಲ್ಪಪ್ರಾಣ ಧ್ವನಿಯಾಗಿದೆ. 'ಕ' ಇದೊಂದು ಸ್ಪರ್ಶಧ್ವನಿ. ಸ್ಪರ್ಶ ಎನ್ನುವುದನ್ನು ಸ್ಫೋಟವೆಂದೂ ಕರೆಯುತ್ತಾರೆ. ಶಾಬ್ದಿಕವಾಗಿ ಎರಡರ ಸಂಘರ್ಷ ಎಂದು ಅರ್ಥೈಸಲಾಗುತ್ತದೆ. ಭಾಷಾವಿಜ್ಞಾನದ ದೃಷ್ಟಿಯಿಂದ ಸ್ಪರ್ಶಗಳೆಂದರೆ ಮುಖವಿವರದಲ್ಲಿ ಧ್ವನ್ಯುತ್ಪಾದನಾ ಅಂಗಗಳಾದ ಸ್ಥಾನ ಮತ್ತು ಕರಣಗಳು ಪರಸ್ಪರ ಸ್ಪರ್ಶಿಸುವುದು ಎಂದರ್ಥ. ಸ್ವರಗಳನ್ನು ಉಚ್ಚಾರಮಾಡುವಾಗ ಯಾವುದೇ ರೀತಿಯ ಸ್ಪರ್ಶ ಸಂಭವಿಸುವುದಿಲ್ಲ. ಆದರೆ ವ್ಯಂಜನಗಳನ್ನು ಉಚ್ಚಾರಮಾಡುವಾಗ ಪರಸ್ಪರ ಸ್ಥಾನ ಮತ್ತು ಕರಣಗಳ ನಡುವೆ ಸ್ಪರ್ಶ ಸಂಭವಿಸುತ್ತದೆ. 'ಕ' ವರ್ಣವು ಸ್ಪರ್ಶ ಧ್ವನಿಯಾದ ಕಾರಣ ವ್ಯಂಜನಗಳ ಗುಂಪಿಗೆ ಸೇರುತ್ತದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಕ' ವರ್ಣವನ್ನು ಹೆಸರಿಸದ್ದಾನೆ. ಕ,ಪಯ್[143] ಕನ್ನಡ ಭಾಷೆಯಲ್ಲಿಯೂ 'ಕ'ವರ್ಣದ ಬಳಕೆ ಅಶೋಕನ ಕಾಲದಿಂದಲೂ ಬಳಕೆಯಲ್ಲಿರುವುದನ್ನು ಚಿತ್ರದಮೂಲಕ ತಿಳಿದುಬರುತ್ತದೆ.ಸಂಸ್ಕೃತ ಮತ್ತು ಕನ್ನಡ 'ಕ' ವರ್ಣದ ವಿಕಾಸವನ್ನು ಗಮನಿಸಿದಾಗ ಮೂಲದಲ್ಲಿ ಕ ವರ್ಣಗಳು ಒಂದೇರೀತಿಯಲ್ಲಿರುವುದನ್ನು ಚಿತ್ರದಲ್ಲಿ ಗಮನಿಸಬಹುದಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ**

---

[143] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2.

ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಕ' ವರ್ಣವು ಉಚ್ಚಾರಗೊಳ್ಳುತ್ತದೆ.




ಚಿತ್ರ ಸಂಖ್ಯೆ 14

144

## ಖ ವರ್ಣ

ವರ್ಗೀಯವ್ಯಂಜನದ ಮೊದಲವರ್ಗದ ಎರಡನೇವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಖ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಜ,ಬ,ಗ,ಡ,ದ[145] 'ಕ' ವರ್ಣವನ್ನು ಉಚ್ಚಾರಮಾಡುವಾಗ ಸಲ್ಪ

[144] ಕನ್ನಡ 'ಕ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 52 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಕ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[145]ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ

ಉಸಿರನ್ನು ತೆಗೆದುಕೊಂಡು ಉಚ್ಚಾರಮಾಡಿದರೆ 'ಖ'ವರ್ಣವನ್ನು ಉಚ್ಚಾರ ಮಾಡುವಾಗ ಹೆಚ್ಚು ಉಸಿರನ್ನು ತೆಗೆದುಕೊಂಡು ಉಚ್ಚಾರ ಮಾಡಬೇಕಾಗುತ್ತದೆ. ಆದ್ದರಿಂದ 'ಖ' ವರ್ಣವನ್ನು ಮಹಾಪ್ರಾಣ ಧ್ವನಿಯೆಂದು ಕರೆಯುತ್ತಾರೆ. 'ಖ' ವರ್ಣವು ಕಂಠ್ಯ, ಅಘೋಷ, ಮಹಾಪ್ರಾಣ, ಸ್ಪರ್ಶಧ್ವನಿಯಾಗಿದೆ. ಕಂಠ್ಯ ಧ್ವನಿಗಳ ಬಗ್ಗೆ ಈಗಾಗಲೇ ವಿವರಿಸಲಾಗಿದೆ. ಕೇಶಿರಾಜನು ಒಳವುಮಹಾಪ್ರಾಣಂಗಳ ವಿಳಸತ್‌ಕರ್ನಾಟ ಭಾಷೆಯೊಳು[146] ಎಂದು ಹೇಳಿರುವುದಿಂದ ಮಹಾಪ್ರಾಣಾಕ್ಷರಗಳು ಮೂಲತಃ ಕನ್ನಡದಲ್ಲಿ ಬಳಕೆಯಲ್ಲಿ ಇರಲಿಲ್ಲವೆನ್ನಬಹುದು ಸಂಸ್ಕೃತಭಾಷೆಯಿಂದ ಬಂದಿವೆ. ಸ್ವರಗಳ ರಚನಾಕ್ರಮದಲ್ಲಿ ಹ್ರಸ್ವದೀರ್ಘ ಎನ್ನುವ ಕಲ್ಪನೆಯೇ ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ರೂಪಕ್ಕೆ ಕಾರಣವಾಗಿರಬೇಕು ಈ ಕುರಿತು ಇನ್ನಷ್ಟು ಅಧ್ಯಯನ ನಡೆಯಬೇಕಾಗಿದೆ. ಕನ್ನಡ ಭಾಷೆಯಲ್ಲಿ 'ಖ' ವರ್ಣ ಇಂದು ಹೆಚ್ಚಾಗಿ ಗ್ರಾಂಥಿಕ ಭಾಷೆಯಲ್ಲಿ ಉಳಿದುಕೊಂಡಿದೆ. ಆಡುಭಾಷೆಯಲ್ಲಿ ಕ್ರಮೇಣವಾಗಿ ನಶಿಸಿಹೋಗುತ್ತಿದೆ. ಮಹಾಪ್ರಾಣ 'ಖ' ವರ್ಣವನ್ನು 'ಕ'ವರ್ಣದಂತೆ ವ್ಯವಹರಿಸಿ ಉಚ್ಚರಿಸುವ ಜಾಯಮಾನ ಬಂದುಬಿಟ್ಟಿದೆ. ಸಾಂದರ್ಭಿಕವಾಗಿ ಅವುಗಳನ್ನು ಅರ್ಥೈಸಿಕೊಳ್ಳಬೇಕೇ ಹೊರತು ಆತ 'ಖ' ವರ್ಣಕ್ಕೆ 'ಕ' ವರ್ಣವನ್ನು ಬಳಸುತ್ತಾನೆಂದು ನಗುವ ಸಂದರ್ಭಗಳು ಇಂದು ಕಡಿಮೆಯಾಗಿವೆ.

---

ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

[146]ಶಬ್ದಮಣಿದರ್ಪಣ ಸಂಗ್ರಹ,ಸಂಪಾದಕರು ಪ್ರೊ. ಬಿ.ಟಿ.ಸಾಸನೂರ ಹಾಗೂ ಡಾ. ಎಂ. ಎಂ. ಕಲಬುರ್ಗಿ,ಪ್ರಕಾಶಕರು : ಮನೋಹರ ಘಾಣೇಕರ್ ಸಮಾಜ ಪುಸ್ತಕಾಲಯ ಧಾರವಾಡ, ಪುಟ ಸಂಖ್ಯೆ: 10 ಮೊದಲನೇ ಸೂತ್ರದ ಮೊದಲ ಸಾಲು.




ಚಿತ್ರ ಸಂಖ್ಯೆ 15

[147]

'ಖ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರಿತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಮೇಲಿನ ಚಿತ್ರಸಂಖ್ಯೆ-15ರಲ್ಲಿ ಕಾಣಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಖ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ**

---

[147] ಕನ್ನಡ 'ಖ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 54 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಖ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಖ' ವರ್ಣವು ಉಚ್ಚಾರಗೊಳ್ಳುತ್ತದೆ. 'ಕ' ವರ್ಣಕ್ಕಿಂತ ಹೆಚ್ಚು ಹವೆಯ ಒತ್ತಡವಿರಬೇಕು. ಇಲ್ಲವಾದಲ್ಲಿ ಅದು 'ಖ' ವರ್ಣವೆನ್ನಿಸಿಕೊಳ್ಳದೇ 'ಕ' ವರ್ಣದ ಉಚ್ಚಾರವಾಗಿಬಿಡುತ್ತದೆ.

## 'ಗ' ವರ್ಣ

'ಗ' ವರ್ಣ ಕಂಠ್ಯ'ಮಹಾಪ್ರಾಣ,ಘೋಷ,ಸ್ಪರ್ಶವರ್ಣವಾಗಿದೆ. ವರ್ಗೀಯ ವ್ಯಂಜನಗಳ ಮೊದಲವರ್ಗದ ಮೂರನೇ ವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ 'ಗ' ವರ್ಣವನ್ನು ಕಂಠ್ಯವರ್ಣವೆಂದು ಕರೆಯಲಾಗುತ್ತದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಗ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಜ,ಬ,ಗ,ಡ,ದ[148] 'ಗ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರಿತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಕಾಣಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಕ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ಗ' ವರ್ಣವು ಕಂಠ್ಯ, ಘೋಷ, ಸ್ಪರ್ಶ ಧ್ವನಿಯಾಗಿದೆ. 'ಘೋಷ' ಧ್ವನಿಗಳೆಂದರೆ ಅಘೋಷಧ್ವನಿಗಳಿಗೆ ವಿರುದ್ಧವಾದವುಗಳು. ಧ್ವನಿಪೆಟ್ಟಿಗೆಯಿಂದ ಹೊರಟಹವೆಯು ಮುಖವಿವರದಲ್ಲಿ ಧ್ವನ್ಯುತ್ಪಾದನೆ ಮಾಡುವಾಗ ಕರಣ ಮತ್ತು ಸ್ಥಾನಗಳ ನಡುವೆ ಕರಣಗಳು ಸ್ಥಾನಗಳ ಸಮೀಪ ಬಂದು ಪರಸ್ಪರ ಸ್ಪರ್ಶಿಸದೇ ಇದ್ದರೂ ಒಂದುರೀತಿಯ ಘರ್ಷಣೆಗೆ

---

[148] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ಒಳಗಾಗುತ್ತದೆ. ಆಗ ಸ್ವರತಂತ್ರಗಳಲ್ಲಿ ಕಂಪನವುಂಟಾಗುತ್ತದೆ. ಇಂತಹ ಧ್ವನಿಗಳನ್ನು ಘೋಷ ಧ್ವನಿಗಳೆಂದು ಕರೆಯುತ್ತರೆ. 'ಗ' ವರ್ಣವನ್ನು ಉಚ್ಚಾರಮಾಡುವಾಗ 'ಕ' ಮತ್ತು 'ಖ' ವರ್ಣಗಳ ಉಚ್ಚಾರಣೆಗಿಂತಲೂ ಭಿನ್ನವಾಗಿ ಒಂದುರೀತಿಯ ಘರ್ಷಣೆ ನಡೆಯುವುದನ್ನು ಅರಿಯಬಹುದಾಗಿದೆ. 'ಗ' ವರ್ಣವು ಅಲ್ಪಪ್ರಾಣಧ್ವನಿಯಾಗಿದೆ. 'ಕ' ಮತ್ತು 'ಗ' ಗಳ ನಡುವೆ ಒಂದು ಸಾದೃಶ್ಯ, ಸಾಮೀಪ್ಯ ಸಂಬಂಧವಿದೆ. ಒಂದು ಉಚ್ಚಾರಣೆಯ ಸ್ಥಾನದದೃಷ್ಟಿಯಿಂದಾದರೆ ಇನ್ನೊಂದು ಸಂಧಿಪ್ರಕ್ರಿಯೆಯಲ್ಲಾಗುವ ಆದೇಶಗಳಿಂದ ಎನ್ನಬಹುದು. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಗ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 16

149

[149] ಕನ್ನಡ 'ಗ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 55 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಗ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ. ಪುಟ 272.

## ಘ ವರ್ಣ

ಘ ವರ್ಣವು ಕಂಠ್ಯ, ಘೋಷ, ಮಹಾಪ್ರಾಣ, ಸ್ಪರ್ಶ ಧ್ವನಿಯಾಗಿದೆ. 'ಕ' ವರ್ಣ ಮತ್ತು 'ಖ' ವರ್ಣಗಳ ನಡುವಿನ ಸಂಬಂಧವನ್ನು 'ಗ' ಮತ್ತು 'ಘ' ವರ್ಣಗಳಿಗೆ ಹೋಲಿಸಬಹುದಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಘ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಘ,ಢ,ಧ[150] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಮೂಲತಃ ಕನ್ನಡ ಭಾಷೆಯಲ್ಲಿ ಮಹಾಪ್ರಾಣಾಕ್ಷರಗಳಿಲ್ಲ ಆದರೂ ಸಂಸ್ಕೃತ ಸಂಪರ್ಕದಿಂದ ಬಂದಿದೆ ಎನ್ನುವುದನ್ನು ಈಗಾಗಲೇ ಅರಿಯಲಾಗಿದೆ. ಘ ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರಿತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಘ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. ಆಡುಭಾಷೆಯಲ್ಲಿ 'ಖ' ವರ್ಣದ ಬಳಕೆ ಕ್ಷೀಣಿಸುತ್ತಿರುವಂತೆ 'ಘ' ವರ್ಣದ ಬಳಕೆಯೂ ಕ್ಷೀಣಿಸುತ್ತಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಘ' ವರ್ಣವು ಉಚ್ಚಾರಗೊಳ್ಳುತ್ತದೆ. 'ಗ' ವರ್ಣಕ್ಕಿಂತ ಹೆಚ್ಚು ಹವೆಯ ಒತ್ತಡವಿರಬೇಕು. ಇಲ್ಲವಾದಲ್ಲಿ ಅದು 'ಘ' ವರ್ಣವೆನ್ನಿಸಿಕೊಳ್ಳದೇ 'ಗ' ವರ್ಣದ ಉಚ್ಚಾರವಾಗಿಬಿಡುತ್ತದೆ.**

---

[150] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.




ಚಿತ್ರ ಸಂಖ್ಯೆ 17

[151]

## ಙ ವರ್ಣ

'ಙ' ವರ್ಣವು ವರ್ಗೀಯವ್ಯಂಜನದ ಮೊದಲವರ್ಗದ ಕೊನೆಯವರ್ಣವಾಗಿದೆ. ಅಂದರೆ 'ಕ' ವರ್ಗದ ಕೊನೆಯವರ್ಣವಗಿದೆ. ಆದರೆ ಉಳಿದ ನಾಲ್ಕು ವರ್ಣಗಳಿಗಿಂತ ಭಿನ್ನವಾಗಿದೆ. ಕ,ಖ,ಗ,ಘ ವರ್ಣಗಳನ್ನು ಉಚ್ಚಾರಮಾಡುವಾಗ ನಾಸಿಕಮಾರ್ಗವು ಮುಚ್ಚಿದ್ದರೆ 'ಙ' ವರ್ಣವನ್ನು ಉಚ್ಚಾರಮಾಡುವಾಗ ನಾಸಿಕಮಾರ್ಗವು ತೆರೆದಿರುತ್ತದೆ.

---

[151] ಕನ್ನಡ 'ಫ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 57 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಫ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಮತ್ತು ಅವಶ್ಯವಾಗಿ ನಾಸಿಕಮಾರ್ಗ ತೆರೆದಿರಲೇಬೇಕು. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಞ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಞ,ಮ,ಙ,ಣ,ನ[152] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಆದ್ದರಿಂದ 'ಞ' ವರ್ಣವನ್ನು 'ನಾಸಿಕ್ಯಧ್ವನಿ' ಎಂದು ಕರೆಯಲಾಗುತ್ತದೆ. 'ಞ' ವರ್ಣವು ಘೋಷ, ಅಲ್ಪಪ್ರಾಣ, ಸ್ಪರ್ಶ,ನಾಸಿಕ್ಯಧ್ವನಿಯಾಗಿದೆ. 'ಞ' ವರ್ಣದ ಬಳಕೆಕನ್ನಡ ಭಾಷೆಯಲ್ಲಿ ಕನ್ನಡಭಾಷೆಯಲ್ಲಿ ತೀರಾವಿರಳವಾಗಿದೆ. ಕನ್ನಡಭಾಷೆಯ ಶಬ್ದಾರಂಭದಲ್ಲಿ 'ಞ' ವರ್ಣಎಲ್ಲಿಯೂ ಕಂಡುಬರುವುದಿಲ್ಲ. 'ಞ' ವರ್ಣದ ಅಗತ್ಯವಿಲ್ಲ ಅನುಸ್ವಾರಗಳೇ 'ಞ' ವರ್ಣದ ಕಾರ್ಯ ನಿರ್ವಹಿಸುತ್ತವೆ ಆದ್ದರಿಂದ ವರ್ಣಮಾಲೆಯಿಂದ ತೆಗೆದುಹಾಕಬೇಕು ಎನ್ನುವವಾದವೂ ಇದೆ. ಉದಾ: 'ವಾಙ್ಮಯ' ಎನ್ನುವಪದವನ್ನು 'ವಾಂಕ್ಮಯ' ಎಂದು ಬರೆಯಬಹುದಲ್ಲವೇ? 'ಞ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಲ್ಲಿ ಕಾಣಸಿಗಲಿಲ್ಲ. ಕದಂಬರ ಕಾಲದಲ್ಲಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಚಿತ್ರಸಂಖ್ಯೆ-18ರ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಅರಿಯಬಹುದಾಗಿದೆ. 'ಞ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ವೀಕ್ಷಿಸಬಹುದು. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಬಾಯಿ ಮತ್ತಿ ನಾಸಿಕ ದ್ವಾರ ಎರಡರಿಂದಲೂ ಏಕಕಾಲದಲ್ಲಿ ಹೊರಹೊಮ್ಮಿಸಿದಾಗ 'ಞ' ವರ್ಣವು ಉಚ್ಚಾರಗೊಳ್ಳುತ್ತದೆ.**

---

152 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಐದನೇ ಸಾಲು.




ಚಿತ್ರ ಸಂಖ್ಯೆ 18

[153]

## 'ಚ' ವರ್ಣ

'ಚ' ವರ್ಣ 'ತಾಲವ್ಯ'ವರ್ಣವಾಗಿದೆ. 'ತಾಲವ್ಯ' ಧ್ವನಿಗಳೆಂದರೆ ಮುಖವಿವರದಲ್ಲಿ ಕಂಠದ ತರುವಾಯ ಮೇಲ್ಭಾಗದಲ್ಲಿ (ಚಿತ್ರ19 ರಲ್ಲಿ ತೋರಿಸಿದಂತೆ) ಇರುವ ಸ್ಥಾನಕ್ಕೆ ಜಿಹ್ವೆಯ ಮಧ್ಯಭಾಗ ಸ್ಪರ್ಶಿಸಿ, ಹವೆಯನ್ನು ಒಮ್ಮೆ ತಡೆಹಿಡಿದು ಒಮ್ಮೆಲೇ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಧ್ವನಿಉತ್ಪಾದನೆಯಾದರೆ ಅದನ್ನು 'ತಾಲವ್ಯ' ಧ್ವನಿಗಳೆಂದು ಕರೆಯುತ್ತಾರೆ. 'ಚ' ವರ್ಣ ತಾಲವ್ಯ, ಅಘೋಷ, ಅಲ್ಪಪ್ರಾಣ ಸ್ಪರ್ಶ ವರ್ಣವಾಗಿದೆ, ಪಾಣಿನಿಯ ಮಾಹೇಶ್ವರ ಸೂತ್ರಗಳಲ್ಲಿ 'ಚ' ವರ್ಣವನ್ನು ವರ್ಣಮಾಲೆಯ ಪ್ರಮುಖ

---

[153] ಕನ್ನಡ 'ಜ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 58 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಜ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ. ಪುಟ 272.

ವರ್ಣವನ್ನಾಗಿ ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಖ,ಫ,ಛ,ಠ,ಥ,ಚ,ಟ,ತ[154] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ವರ್ಗೀಯ ವ್ಯಂಜನಗಳ ಎರಡನೇವರ್ಗದ ಮೊದಲ ವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ 'ಚ' ವರ್ಣವನ್ನು 'ತಾಲವ್ಯ'ವರ್ಣವೆಂದು ಕರೆಯಲಾಗುತ್ತದೆ. 'ಚ' ವರ್ಣವನ್ನು ಸ್ಪರ್ಶವ್ಯಂಜನಗಳಲ್ಲಿ ಎರಡನೇ ವರ್ಗದ ಮೊದಲ ವರ್ಣವಾಗಿ ಹೇಳಲು ಕಾರಣವನ್ನು ಹುಡುಕಹೊರಟರೆ ಸಿಗುವ ಉತ್ತರವೂ ಕೂಡ ಇದನ್ನೆ ಸ್ಪಷ್ಟಪಡಿಸುತ್ತದೆ. ಪಾಣಿನಿಯ ಶಿಕ್ಷಾಗ್ರಂಥದಲ್ಲಿ "ಇಚುಯಶಾನಾಂತಾಲು" ಎಂದು ಹೇಳಿದ್ದಾನೆ ಅಂದರೆ ಇ,ಚವರ್ಗ,ಯ,ಶಗಳು ತಾಲವ್ಯದಲ್ಲಿ ಉತ್ಪತ್ತಿಯಾಗುವ ವರ್ಣಗಳಾಗಿವೆ. ಉತ್ಪಾದನಾ ಸ್ಥಾನದ ದೃಷ್ಟಿಯಿಂದ 'ಚ' ವರ್ಣವು ಮುಖವಿವರದ 'ಕ' ವರ್ಣ ಉಚ್ಚಾರಣಾಸ್ಥಾನದ ನಂತರ ಬರುವ ಕಾರಣ 'ಚ' ವರ್ಗವನ್ನು ಎರಡನೇ ಪಂಕ್ತಿಯಲ್ಲಿ ವರ್ಣಮಾಲೆಯಲ್ಲಿ ಸೇರಿಸಲಾಗಿದೆ. ಪ್ರಾಚೀನಕಾಲದಿಂದ ಮೈಸೂರು ಅರಸರ ಕಾಲದವರೆಗೆ 'ಚ' ವರ್ಣವು ಯಾವ ರೀತಿಯಲಿ ತನ್ನ ರೂಪವ್ಯತ್ಯಾಸ ಮಾಡುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಚ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಚ' ವರ್ಣವು ಉಚ್ಚಾರಗೊಳ್ಳುತ್ತದೆ..**

---

[154] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.




ಚಿತ್ರ ಸಂಖ್ಯೆ 19

155

## 'ಛ' ವರ್ಣ

ಕನ್ನಡವರ್ಣಮಾಲೆಯಲ್ಲಿ ವರ್ಗೀಯವ್ಯಂಜನದ ಎರಡನೇವರ್ಗದ ಎರಡನೇ ವರ್ಣವಾಗಿದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಛ' ವರ್ಣವನ್ನು ಸೇರಿಸಿದ್ದಾನೆ. ಮಾಹೇಶ್ವರ ಸೂತ್ರದ ಖ,ಫ,ಛ,ಠ,ಥ,ಚ,ಟ,ತ[156] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ

155 ಕನ್ನಡ 'ಚ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 60 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಚ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

156 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್

ಬಂದಿದೆ. 'ಛ' ವರ್ಣವನ್ನು ಉಚ್ಚಾರಮಾಡುವಾಗ ಸ್ವಲ್ಪ ಉಸಿರನ್ನು ತೆಗೆದುಕೊಂಡು ಉಚ್ಚಾರಮಾಡಿದರೆ 'ಛ' ವರ್ಣವನ್ನು ಉಚ್ಚಾರ ಮಾಡುವಾಗ ಹೆಚ್ಚು ಉಸಿರನ್ನು ತೆಗೆದುಕೊಂಡು ಉಚ್ಚಾರ ಮಾಡಬೇಕಾಗುತ್ತದೆ. ಆದ್ದರಿಂದ 'ಛ' ವರ್ಣವನ್ನು ಮಹಾಪ್ರಾಣ ಧ್ವನಿಯೆಂದು ಕರೆಯುತ್ತಾರೆ. 'ಛ' ವರ್ಣವು ತಾಲವ್ಯ, ಅಘೋಷ, ಸ್ಪರ್ಶ, ಮಹಾಪ್ರಾಣಧ್ವನಿಯಾಗಿದೆ. ತಾಲವ್ಯ ಧ್ವನಿಗಳ ಬಗ್ಗೆ ಈಗಾಗಲೇ ವಿವರಿಸಲಾಗಿದೆ. ಸ್ವರಗಳ ರಚನಾಕ್ರಮದಲ್ಲಿ ಹ್ರಸ್ವದೀರ್ಘಎನ್ನುವ ಕಲ್ಪನೆಯೇ ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ರೂಪಕ್ಕೆ ಕಾರಣವಾಗಿರಬೇಕು ಈ ಕುರಿತು ಇನ್ನಷ್ಟು ಅಧ್ಯಯನ ನಡೆಯಬೇಕಾಗಿದೆ. ಕನ್ನಡ ಭಾಷೆಯಲ್ಲಿ 'ಛ' ವರ್ಣ ಇಂದು ಹೆಚ್ಚಾಗಿ ಗ್ರಾಂಥಿಕಭಾಷೆಯಲ್ಲಿ ಉಳಿದುಕೊಂಡಿದೆ. ಆಡುಭಾಷೆಯಲ್ಲಿ ಕ್ರಮೇಣವಾಗಿ ನಶಿಸಿಹೋಗುತ್ತಿದೆ. ಮಹಾಪ್ರಾಣ 'ಛ' ವರ್ಣವನ್ನು 'ಚ' ವರ್ಣದಂತೆ ವ್ಯವಹರಿಸಿ ಉಚ್ಚರಿಸುವ ಜಾಯಮಾನ ಬಂದು ಬಿಟ್ಟಿದೆ. 'ಛ' ವರ್ಣವು ಬ್ರಾಹ್ಮಿಲಿಪಿಯ ಕಾಲದಲ್ಲಿ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನು ಚಿತ್ರದಲ್ಲಿ ತೋರಿಸಲಾಗಿದೆ. 'ಛ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಛ' ವರ್ಣವು ಉಚ್ಚಾರಗೊಳ್ಳುತ್ತದೆ.**

---

ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.




ಚಿತ್ರ ಸಂಖ್ಯೆ 20

157

## 'ಜ' ವರ್ಣ

'ಜ' ವರ್ಣ ತಾಲವ್ಯ ವರ್ಣವಾಗಿದೆ. ವರ್ಗೀಯ ವ್ಯಂಜನಗಳ ಎರಡನೆಯ ವರ್ಗದ ಮೂರನೇವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ 'ಜ' ವರ್ಣವನ್ನು ತಾಲವ್ಯವರ್ಣವೆಂದು ಕರೆಯಲಾಗುತ್ತದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಜ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ

[157] ಕನ್ನಡ 'ಛ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 61 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಛ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಜ,ಬ,ಗ,ಡ,ದ[158] ಸೂತ್ರದಲ್ಲಿ 'ಜ' ವರ್ಣವನ್ನು ಉಲ್ಲೇಖಿಸಿದ್ದಾನೆ. 'ಜ' ವರ್ಣವು ಕನ್ನಡ ಹಾಗೂ ಸಂಸ್ಕೃತಭಾಷೆಗಳಲ್ಲಿ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಚಿತ್ರಸಂಖ್ಯೆ 21ರಲ್ಲಿ ಸಂಗ್ರಹಿಸಲಾಗಿದೆ. 'ಜ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರ ದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ.




ಚಿತ್ರ ಸಂಖ್ಯೆ 21

159

---

[158] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

[159] ಕನ್ನಡ 'ಜ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 63 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಜ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

'ಜ' ವರ್ಣವು ತಾಲವ್ಯ ಘೋಷ, ಸ್ಪರ್ಶ, ಅಲ್ಪಪ್ರಾಣಧ್ವನಿಯಾಗಿದೆ. 'ಜ' ವರ್ಣವನ್ನು ಉಚ್ಚಾರ ಮಾಡುವಾಗ 'ಚ' ಮತ್ತು 'ಛ' ವರ್ಣಗಳ ಉಚ್ಚಾರಣೆಗಿಂತಲೂ ಭಿನ್ನವಾಗಿ ಒಂದು ರೀತಿಯ ಘರ್ಷಣೆ ನಡೆಯುವುದನ್ನು ಅರಿಯಬಹುದಾಗಿದೆ. 'ಜ' ವರ್ಣವು ಅಲ್ಪಪ್ರಾಣ ಧ್ವನಿಯಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಜ' ವರ್ಣವು ಉಚ್ಚಾರಗೊಳ್ಳುತ್ತದೆ.**

## 'ಝ' ವರ್ಣ

'ಝ' ವರ್ಣವು ತಾಲವ್ಯ, ಘೋಷ, ಮಹಾಪ್ರಾಣ, ಸ್ಪರ್ಶ ಧ್ವನಿಯಾಗಿದೆ. 'ಚ' ವರ್ಣ ಮತ್ತು 'ಛ' ವರ್ಣಗಳ ನಡುವಿನ ಸಂಬಂಧವನ್ನು 'ಜ' ಮತ್ತು 'ಝ' ವರ್ಣಗಳಿಗೆ ಹೋಲಿಸಬಹುದಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಝ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರಸೂತ್ರದಲ್ಲಿ ಝ,ಭ[160] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಮೂಲತಃ ಕನ್ನಡ ಭಾಷೆಯಲ್ಲಿ ಮಹಾಪ್ರಾಣಾಕ್ಷರಗಳಿಲ್ಲ ಆದರೂ ಸಂಸ್ಕೃತದ ಸಂಪರ್ಕದಿಂದ ಬಂದಿದೆ ಎನ್ನುವುದನ್ನು ಈಗಾಗಲೇ ಅರಿಯಲಾಗಿದೆ. 'ಝ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. ಝ ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. ಆಡುಭಾಷೆಯಲ್ಲಿ 'ಛ' ವರ್ಣದ ಬಳಕೆ ಕ್ಷೀಣಿಸುತ್ತಿರುವಂತೆ 'ಝ' ವರ್ಣದ ಬಳಕೆಯೂ

---

[160] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ಕ್ಷೀಣಿಸುತ್ತಿದೆ. ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೋಗುವಂತೆ ಮಾಡುತ್ತವೆ. ಆಗ 'ಝ' ವರ್ಣವು ಉಚ್ಚಾರಗೊಳ್ಳುತ್ತದೆ.




ಚಿತ್ರ ಸಂಖ್ಯೆ 22

[161]

## 'ಞ' ವರ್ಣ

'ಞ' ವರ್ಣವು ವರ್ಗೀಯವ್ಯಂಜನದ ಎರಡನೆಯವರ್ಗದ ಕೊನೆಯ ವರ್ಣವಾಗಿದೆ. ಅಂದರೆ 'ಚ' ವರ್ಗದ ಕೊನೆಯವರ್ಣವಾಗಿದೆ. ಆದರೆ ಉಳಿದ ನಾಲ್ಕು

---

[161] ಕನ್ನಡ 'ಝ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 64 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಝ' ವರ್ಣದ ವಿಕಾಸ ಚಿತ್ರವನ್ನು [161] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ. ಪುಟ 272.

ವರ್ಣಗಳಿಗಿಂತ ಭಿನ್ನವಾಗಿದೆ. ಅಂದರೆ ಚ,ಛ,ಜ,ಝ ವರ್ಣಗಳನ್ನು ಉಚ್ಚಾರ ಮಾಡುವಾಗ ನಾಸಿಕಮಾರ್ಗವು ಮುಚ್ಚಿದ್ದರೆ 'ಞ' ವರ್ಣವನ್ನು ಉಚ್ಚಾರಮಾಡುವಾಗ ನಾಸಿಕ ಮಾರ್ಗವು ತೆರೆದಿರುತ್ತದೆ. ಮತ್ತು ಅವಶ್ಯವಾಗಿ ನಾಸಿಕಮಾರ್ಗ ತೆರೆದಿರಲೇ ಬೇಕು. ಆದ್ದರಿಂದ 'ಞ' ವನ್ನು ನಾಸಿಕ್ಯಧ್ವನಿ ಎಂದು ಕರೆಯಲಾಗುತ್ತದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಞ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಞ,ಮ,ಙ,ಣ,ನ[162] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. 'ಞ' ವರ್ಣವು ಘೋಷ,ಅಲ್ಪಪ್ರಾಣ,ಸ್ಪರ್ಶ,ನಾಸಿಕ್ಯಧ್ವನಿಯಾಗಿದೆ. 'ಞ' ವರ್ಣದಬಳಕೆ ಕನ್ನಡಭಾಷೆಯಲ್ಲಿ ತೀರಾವಿರಳವಾಗಿದೆ. ಕನ್ನಡಬಾಷೆಯ ಶಬ್ದಾರಂಭದಲ್ಲಿ 'ಞ' ವರ್ಣ ಎಲ್ಲಿಯೂ ಕಂಡುಬರುವುದಿಲ್ಲ. 'ಞ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಲ್ಲಿ ಕಾಣಸಿಗಲಿಲ್ಲ. ಕದಂಬರ ಕಾಲದಲ್ಲಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಞ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಬಾಯಿ ಮತ್ತಿ ನಾಸಿಕ ದ್ವಾರ ಎರಡರಿಂದಲೂ ಏಕಕಾಲದಲ್ಲಿ ಹೊರಹೊಮ್ಮಿಸಿದಾಗ 'ಞ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[162] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜೆ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.



ಚಿತ್ರ ಸಂಖ್ಯೆ 23

163

## ‘ಟ’ ವರ್ಣ

‘ಟ’ ವರ್ಣ ‘ಮೂರ್ಧನ್ಯ’ ವರ್ಣವಾಗಿದೆ. ‘ಮೂರ್ಧನ್ಯ’ ಧ್ವನಿಗಳೆಂದರೆ ಮುಖವಿವರದಲ್ಲಿ ಕಂಠ ಮತ್ತು ತಾಲುವಿನ ತರುವಾಯ ಮೇಲ್ಭಾಗದಲ್ಲಿ (ಚಿತ್ರ24ರಲ್ಲಿ ತೋರಿಸಿದಂತೆ) ಇರುವ ಸ್ಥಾನಕ್ಕೆ ಜಿಹ್ವೆಯ ಮುಂಭಾಗ ಸ್ಪರ್ಶಿಸಿ, ಹವೆಯನ್ನು ಒಮ್ಮೆ ತಡೆಹಿಡಿದು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಧ್ವನಿ ಉತ್ಪಾದನೆಯಾದರೆ ಅದನ್ನು ಮೂರ್ಧನ್ಯ ಧ್ವನಿಗಳೆಂದು ಕರೆಯುತ್ತಾರೆ. ವರ್ಗೀಯ ವ್ಯಂಜನಗಳ ಮೂರನೇ ವರ್ಗದ ಮೊದಲವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ

---

[163] ಕನ್ನಡ ‘ಞ ’ ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 65 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ ‘ಞ ’ ವರ್ಣದ ವಿಕಾಸ ಚಿತ್ರವನ್ನು [163] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ‘ದೇವನಾಗರಿಲಿಪಿ’ ಶಬ್ದದ ಅರ್ಥ ವಿವರಣೆ, ಪುಟ 272.

'ಟ' ವರ್ಣವನ್ನು ಮೂರ್ಧನ್ಯವರ್ಣವೆಂದು ಕರೆಯಲಾಗುತ್ತದೆ. 'ಟ' ವರ್ಣವನ್ನು ಸ್ಪರ್ಶವ್ಯಂಜನಗಳಲ್ಲಿ ಮೂರನೆಯಪಂಕ್ತಿಯಲ್ಲಿ ಹೇಳಲು ಕಾರಣವನ್ನು ಹುಡುಕಿಹೊರಟರೆ ಸಿಗುವ ಉತ್ತರವೂ ಕೂಡ ಇದನ್ನೆ ಸ್ಪಷ್ಟಪಡಿಸುತ್ತದೆ. ಪಾಣಿನಿಯು ಶಿಕ್ಷಾಗ್ರಂಥದಲ್ಲಿ "ಋಟುರಷಾಣಾಂ ಮೂರ್ಧಾ"[164] ಎಂದು ಹೇಳಿದ್ದಾನೆ ಅಂದರೆ ಋ,ಟವರ್ಗ,ರ,ಷ ಗಳು ಮೂರ್ಧನ್ಯದಲ್ಲಿ ಉತ್ಪತ್ತಿಯಾಗುವ ವರ್ಣಗಳಾಗಿವೆ. 'ಟ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರಿತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಟ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ಟ' ವರ್ಣ ಅಘೋಷ, ಅಲ್ಪಪ್ರಾಣ, ಸ್ಪರ್ಶ, ಮೂರ್ಧನ್ಯ ವರ್ಣವಾಗಿದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಟ' ವರ್ಣವನ್ನು ಪ್ರಮುಖ ವರ್ಣಗಳ ಸಾಲಿಗೆ ಸೇರಿಸಿದ್ದಾನೆ. ಮಾಹೇಶ್ವರ ಸೂತ್ರದ ಖ,ಫ,ಛ,ಠ,ಥ,ಚ,ಟ,ತ[165] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಕನ್ನಡದಲ್ಲಿ ಟ ವರ್ಣದ ಬಳಕೆ ವಿರಳ ವಾಗಿದೆ. 'ಟ' ವರ್ಣವು ಅನ್ಯ ಭಾಷಾ ಪ್ರಭಾವ ಬಂದಿರಬಹುದೆಂದು ಹೇಳಬಹುದಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ**

---

[164] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 25 ಎಂಟನೆಯ ಸಾಲು.

[165] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು. ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು. ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಟ' ವರ್ಣವು ಉಚ್ಚಾರಗೊಳ್ಳುತ್ತದೆ.




ಚಿತ್ರ ಸಂಖ್ಯೆ 24

[166]

## ಠ ವರ್ಣ

ವರ್ಗೀಯವ್ಯಂಜನದ ಮೂರನೇವರ್ಗದ ಎರಡನೇವರ್ಣವಾಗಿದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಛ' ವರ್ಣವನ್ನು ಸೇರಿಸಿದ್ದಾನೆ. ಮಾಹೇಶ್ವರ ಸೂತ್ರದ

---

[166] ಕನ್ನಡ 'ಟ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 67 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಟ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272

ಖ,ಫ,ಛ,ಠ,ಥ,ಚ,ಟ,ತ[167] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. 'ಟ' ವರ್ಣವನ್ನು ಉಚ್ಚಾರಮಾಡುವಾಗ ಸ್ವಲ್ಪ ಉಸಿರನ್ನು ತೆಗೆದುಕೊಂಡು ಉಚ್ಚಾರಮಾಡಿದರೆ 'ಠ' ವರ್ಣವನ್ನು ಉಚ್ಚಾರಮಾಡುವಾಗ ಹೆಚ್ಚು ಉಸಿರನ್ನು ತೆಗೆದುಕೊಂಡು ಉಚ್ಚಾರ ಮಾಡಬೇಕಾಗುತ್ತದೆ. ಆದ್ದರಿಂದ 'ಠ' ವರ್ಣವನ್ನು ಮಹಾಪ್ರಾಣ ಧ್ವನಿಯೆಂದು ಕರೆಯುತ್ತಾರೆ. 'ಠ' ವರ್ಣವು ಮೂರ್ಧನ್ಯ ಅಘೋಷ,ಸ್ಪರ್ಶ ಧ್ವನಿಯಾಗಿದೆ. ಮೂರ್ಧನ್ಯ ಧ್ವನಿಗಳ ಬಗ್ಗೆ ಈಗಾಗಲೇ ವಿವರಿಸಲಾಗಿದೆ. 'ಠ' ವರ್ಣವೂ ಸಂಸ್ಕೃತಭಾಷೆಯಿಂದ ಬಂದಿವೆ. ಮೇಲೆವಿವರಿಸಲಾದ ಇತರ ಮಹಾಪ್ರಾಣ ಅಕ್ಷರಗಳಂತೆ 'ಠ' ವರ್ಣವೂ ಇಂದು ಹೆಚ್ಚಾಗಿ ಗ್ರಾಂಥಿಕಭಾಷೆಯಲ್ಲಿ ಉಳಿದುಕೊಂಡಿದೆ. ಹಾಗು ತುಂಬ ವಿರಳವಾಗಿ ಬಳಕೆಯಾಗುವ ವರ್ಣವಾಗಿದೆ. ಆಡುಭಾಷೆಯಲ್ಲಿ ಕ್ರಮೇಣವಾಗಿ ನಶಿಸಿಹೋಗುತ್ತಿದೆ. ಮಹಾಪ್ರಾಣ 'ಠ' ವರ್ಣವನ್ನು 'ಟ' ವರ್ಣದಂತೆ ವ್ಯವಹರಿಸಿ ಉಚ್ಚರಿಸುವ ಜಾಯಮಾನ ಬಂದು ಬಿಟ್ಟಿದೆ. 'ಠ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಠ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಠ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[167] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.




ಚಿತ್ರ ಸಂಖ್ಯೆ 23

168

## 'ಡ' ವರ್ಣ

'ಡ' ವರ್ಣ ಮೂರ್ಧನ್ಯವರ್ಣವಾಗಿದೆ. ವರ್ಗೀಯ ವ್ಯಂಜನಗಳ ಮೂರನೇ ವರ್ಗದ ಮೂರನೇ ವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ 'ಡ' ವರ್ಣವನ್ನು ಮೂರ್ಧನ್ಯವರ್ಣವೆಂದು ಕರೆಯಲಾಗುತ್ತದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಡ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಜ,ಬ,ಗ,ಡ,ದ[169] ಸೂತ್ರದಲ್ಲಿ 'ಡ' ವರ್ಣವನ್ನು ಉಲ್ಲೇಖಿಸಿದ್ದಾನೆ. 'ಡ' ವರ್ಣವು

---

[168] ಕನ್ನಡ 'ಠ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 68 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಠ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[169] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್




ಚಿತ್ರ ಸಂಖ್ಯೆ 26

[170]

ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಡ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ**

---

ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

[170] ಕನ್ನಡ 'ಡ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 69 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಡ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

**ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಡ' ವರ್ಣವು ಉಚ್ಚಾರಗೊಳ್ಳುತ್ತದೆ.** 'ಡ' ವರ್ಣವು ಮೂರ್ಧನ್ಯ, ಘೋಷ, ಸ್ಪರ್ಶ,ಅಲ್ಪಪ್ರಾಣಧ್ವನಿಯಾಗಿದೆ. ವರ್ಣವನ್ನು ಉಚ್ಚಾರ ಮಾಡುವಾಗ 'ಟ' ಮತ್ತು 'ಠ' ವರ್ಣಗಳ ಉಚ್ಚಾರಣೆಗಿಂತಲೂ ಭಿನ್ನವಾಗಿ ಒಂದು ರೀತಿಯ ಘರ್ಷಣೆ ನಡೆಯುವುದನ್ನು ಅರಿಯ ಬಹುದಾಗಿದೆ. 'ಡ' ವರ್ಣವು ಅಲ್ಪಪ್ರಾಣ ಧ್ವನಿಯಾಗಿದೆ. 'ಕ' ಮತ್ತು 'ಗ' ವರ್ಣಗಳನಡುವೆ ಇರುವ ಸಂಬಂಧವು 'ಟ' ವರ್ಣ ಮತ್ತು 'ಡ' ವರ್ಣಗಳ ನಡುವೆ ಕಂಡುಬರುತ್ತದೆ.

### 'ಢ' ವರ್ಣ

'ಢ' ವರ್ಣವು ಮೂರ್ಧನ್ಯ, ಘೋಷ, ಮಹಾಪ್ರಾಣ, ಸ್ಪರ್ಶಧ್ವನಿಯಾಗಿದೆ. 'ಟ' ವರ್ಣ ಮತ್ತು 'ಠ' ವರ್ಣಗಳ ನಡುವಿನ ಸಂಭಧವನ್ನು 'ಡ' ಮತ್ತು 'ಢ' ವರ್ಣಗಳಿಗೆ ಹೋಲಿಸಬಹುದಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ, ಮಾಹೇಶ್ವರ ಸೂತ್ರಗಳಲ್ಲಿ ಢ ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಘ,ಢ,ಧ.ಶ್[171] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಮೂಲತಃ 'ಢ' ವರ್ಣವೂ ಸಂಸ್ಕೃತಸಂಪರ್ಕದಿಂದಬಂದಿದೆ ಎನ್ನುವುದನ್ನು ಈಗಾಗಲೇ ಅರಿಯಲಾಗಿದೆ. 'ಢ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಚಿತ್ರ27ರ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಢ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರಸಂಖ್ಯೆ 27ರಲ್ಲಿ ತೋರಿಸಲಾಗಿದೆ. ಆಡುಭಾಷೆಯಲ್ಲಿ 'ಠ' ವರ್ಣದ ಬಳಕೆ ಕ್ಷೀಣಿಸುತ್ತಿರುವಂತೆ 'ಢ' ವರ್ಣದ ಬಳಕೆಯೂ ಕ್ಷೀಣಿಸುತ್ತಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು**

---

[171] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಢ' ವರ್ಣವು ಉಚ್ಚಾರಗೊಳ್ಳುತ್ತದೆ.




ಚಿತ್ರ ಸಂಖ್ಯೆ 27

172

## 'ಣ' ವರ್ಣ

ಕನ್ನಡವರ್ಣಮಾಲೆಯಲ್ಲಿ 'ಣ'ವರ್ಣವು 'ಟ' ವರ್ಗದ ಕೊನೆಯವರ್ಣವಾಗಿದೆ. ಆದರೆ ಉಳಿದ ನಾಲ್ಕು ವರ್ಣಗಳಿಗಿಂತ ಭಿನ್ನವಾಗಿದೆ. ಟ,ಠ,ಡ,ಢ ವರ್ಣಗಳನ್ನು

---

172 ಕನ್ನಡ 'ಢ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 71 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಢ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಉಚ್ಚಾರಮಾಡುವಾಗ ನಾಸಿಕ ಮಾರ್ಗವು ಮುಚ್ಚಿದ್ದರೆ 'ಣ' ವರ್ಣವನ್ನು ಉಚ್ಚಾರಮಾಡುವಾಗ ನಾಸಿಕಮಾರ್ಗವು ತೆರೆದಿರುತ್ತದೆ. ಅವಶ್ಯವಾಗಿ ನಾಸಿಕಮಾರ್ಗ ತೆರೆದಿರಲೇಬೇಕು. ಆದ್ದರಿಂದ 'ಣ' ವರ್ಣವನ್ನು ನಾಸಿಕ್ಯಧ್ವನಿ ಎಂದು ಕರೆಯಲಾಗುತ್ತದೆ. 'ಣ' ವರ್ಣವು ಮೂರ್ಧನ್ಯ ಘೋಷ, ಅಲ್ಪಪ್ರಾಣ, ಸ್ಪರ್ಶ, ನಾಸಿಕ ವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಣ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಞ,ಮ,ಙ,ಣ,ನ[173] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. 'ಣ' ವರ್ಣದ ಬಳಕೆ ಕನ್ನಡ ಭಾಷೆಯಲ್ಲಿ ತೀರಾ ವಿರಳವಾಗಿದೆ. ಕನ್ನಡಭಾಷೆಯ ಶಬ್ದಾರಂಭದಲ್ಲಿ ಣ ವರ್ಣ ಎಲ್ಲಿಯೂ ಕಂಡುಬರುವುದಿಲ್ಲ, ಮಧ್ಯ ಮತ್ತು ಅಂತ್ಯಗಳಲ್ಲಿ ಬರುತ್ತದೆ. ಙ,ಞ ವರ್ಣಗಳಂತೆ ಣ ವರ್ಣ ಅಗತ್ಯವಿಲ್ಲ ಅನುಸ್ವಾರಗಳೇ ಣ ವರ್ಣದ ಕಾರ್ಯ ನಿರ್ವಹಿಸುತ್ತವೆ ಆದ್ದರಿಂದ ವರ್ಣಮಾಲೆಯಿಂದ ತೆಗೆದು ಹಾಕಬೇಕು ಎನ್ನುವ ವಾದವೂ ಇದೆ. ಣ ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಲ್ಲಿ ಕಾಣಸಿಗಲಿಲ್ಲ. ಕದಂಬರ ಕಾಲದಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಣ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಬಾಯಿ ಮತ್ತಿ ನಾಸಿಕ ದ್ವಾರ ಎರಡರಿಂದಲೂ ಏಕಕಾಲದಲ್ಲಿ ಹೊರಹೊಮ್ಮಿಸಿದಾಗ 'ಣ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[173] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.




ಚಿತ್ರ ಸಂಖ್ಯೆ 28

[174]

## 'ತ' ವರ್ಗ

'ತ' ವರ್ಣ ದಂತ್ಯವರ್ಣ ವಾಗಿದೆ. ಪಾಣಿನಿಯು "ಲೃತುಲಸಾನಾಂ ದಂತಾಃ"[175] ಎಂದು ಹೇಳಿರುವುದು ಇದಕ್ಕೆ ಕಾರಣವಾಗಿದೆ. ಅಂದರೆ ಲೃ,ತವರ್ಗ,ಲ,ಸ ವರ್ಣಗಳು ದಂತದಲ್ಲಿ ಉತ್ಪತ್ತಿಯಾಗುವ ವರ್ಣಗಳಾಗಿವೆ. ಕನ್ನಡವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನಗಳ

---

[174] ಕನ್ನಡ 'ಣ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 72 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಣ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[175] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 24, ಎಂಟನೇ ಸಾಲು.

ನಾಲ್ಕನೇ ವರ್ಗದ ಮೊದಲವರ್ಣವಾಗಿದೆ. ಉಚ್ಚಾರಣೆಯ ದೃಷ್ಟಿಯಿಂದ 'ತ' ವರ್ಣವನ್ನು ದಂತ್ಯವರ್ಣವೆಂದು ಕರೆಯಲಾಗುತ್ತದೆ. 'ತ' ವರ್ಣವನ್ನು ಸ್ಪರ್ಶವ್ಯಂಜನಗಳಲ್ಲಿ ನಾಲ್ಕನೇವರ್ಗದಲ್ಲಿ ಹೇಳಲು ಕಾರಣವನ್ನು ಹುಡುಕಿಹೊರಟರೆ ಸಿಗುವ ಉತ್ತರವೂ ಕೂಡ ಇದನ್ನೆಸ್ಪಷ್ಟಪಡಿಸುತ್ತದೆ. ದಂತ್ಯ ಧ್ವನಿಗಳೆಂದರೆ ದಂತ ಅಥವಾ ಮೇಲ್ದಂತದ ಹಿಂಭಾಗದ ಸ್ಥಾನಕ್ಕೆ ನಾಲಗೆಯ ತುದಿಯು ಸ್ಪರ್ಶಿಸುವುದರ ಮೂಲಕ ಧ್ವನಿ ಉತ್ಪಾದನೆಯಾದರೆ ಅಂತಹ ಧ್ವನಿಗಳನ್ನು ದಂತ್ಯಧ್ವನಿಗಳೆನ್ನುತ್ತವೆ. ದಂತ್ಯ ಸ್ಥಾನವು ಮುಖವಿವರದಲ್ಲಿ ಮೂರ್ಧನ್ಯ ಭಾಗದ ನಂತರ ಬರುವ ಕಾರಣ 'ತ'ವರ್ಗವನ್ನು 'ಟ'ವರ್ಗದ ತರುವಾಯದ ಪಂಕ್ತಿಯಲ್ಲಿ ವರ್ಣಮಾಲೆಯಲ್ಲಿ ಸೇರಿಸಲಾಗಿದೆ.




ಚಿತ್ರ ಸಂಖ್ಯೆ 29

176

---

[176] ಕನ್ನಡ 'ತ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 74 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ತ' ವರ್ಣದ ವಿಕಾಸ ಚಿತ್ರವನ್ನು [176] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

'ತ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಮೇಲಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ತ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರ ದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ತ' ವರ್ಣ ಅಘೋಷ, ಅಲ್ಪಪ್ರಾಣ, ದಂತ್ಯ, ಸ್ಪರ್ಶವರ್ಣವಾಗಿದೆ, ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ತ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಖ,ಫ,ಛ,ಠ,ಥ,ಚ,ಟ,ತ[177] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ.ಕನ್ನಡ ಭಾಷೆಯಲ್ಲಿಯೂ 'ತ' ವರ್ಣದ ಬಳಕೆ ಅಶೋಕನಕಾಲದಿಂದಲೂ ಬಳಕೆಯಲ್ಲಿರುವುದನ್ನು ಚಿತ್ರದ ಮೂಲಕ ಅರಿಯಬಹುದಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ತ' ವರ್ಣವು ಉಚ್ಚಾರಗೊಳ್ಳುತ್ತದೆ.**

## 'ಥ' ವರ್ಣ

ಕನ್ನಡ ವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನದ ನಾಲ್ಕನೇವರ್ಗದ ಎರಡನೇ ವರ್ಣವಾಗಿದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಥ' ವರ್ಣವನ್ನು ಸೇರಿಸಿದ್ದಾನೆ. ಮಾಹೇಶ್ವರ ಸೂತ್ರದ ಖ,ಫ,ಛ,ಠ,ಥ,ಚ,ಟ,ತ[178] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ

---

[177]ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

[178] ಅದೇ.

ಬಂದಿದೆ. 'ತ' ವರ್ಣವನ್ನು ಉಚ್ಚಾರಮಾಡುವಾಗ ಸ್ವಲ್ಪ ಉಸಿರನ್ನು ತೆಗೆದುಕೊಂಡು ಉಚ್ಚಾರಮಾಡಿದರೆ 'ಥ' ವರ್ಣವನ್ನು ಉಚ್ಚಾರ ಮಾಡುವಾಗ ಹೆಚ್ಚು ಉಸಿರನ್ನು ತೆಗೆದುಕೊಂಡು ಉಚ್ಚಾರಮಾಡಬೇಕಾಗುತ್ತದೆ. ಆದ್ದರಿಂದ 'ಥ' ವರ್ಣವನ್ನು ಮಹಾಪ್ರಾಣ ಧ್ವನಿಯೆಂದು ಕರೆಯುತ್ತಾರೆ. 'ಥ' ವರ್ಣವು ದಂತ್ಯ ಅಘೋಷ ಸ್ಪರ್ಶಧ್ವನಿಯಾಗಿದೆ. ದಂತ್ಯ ಧ್ವನಿಗಳ ಬಗ್ಗೆ ಈಗಾಗಲೇ ವಿವರಿಸಲಾಗಿದೆ. ಉಳಿದ ಮಹಾಪ್ರಾಣಾಕ್ಷರಗಳಂತೆ ಥ ವರ್ಣವೂ ಕನ್ನಡ ಭಾಷೆಯಲ್ಲಿ ಇಂದು ಹೆಚ್ಚಾಗಿ ಗ್ರಾಂಥಿಕ ಭಾಷೆಯಲ್ಲಿ ಉಳಿದುಕೊಂಡಿದೆ. ಆಡುಭಾಷೆಯಲ್ಲಿ ಕ್ರಮೇಣವಾಗಿ ನಶಿಸಿಹೋಗುತ್ತಿದೆ. ಮಹಾಪ್ರಾಣ 'ಥ' ವರ್ಣವನ್ನು 'ತ' ವರ್ಣದಂತೆವ್ಯವಹರಿಸಿ ಉಚ್ಚರಿಸುವ ಜಾಯಮಾನ ಬಂದು ಬಿಟ್ಟಿದೆ. 'ಥ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. ಥ ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಥ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 30

[179]

## 'ದ' ವರ್ಣ

'ದ' ವರ್ಣ ದಂತ್ಯ ವರ್ಣವಾಗಿದೆ. ಕನ್ನಡ ವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನಗಳ ನಾಲ್ಕನೇ ವರ್ಗದ ಮೂರನೇ ವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ದ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ

---

[179] ಕನ್ನಡ 'ಥ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 75 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಥ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಜ,ಬ,ಗ,ಡ,ದ[180] ಸೂತ್ರದಲ್ಲಿ 'ದ' ವರ್ಣವನ್ನು ಉಲ್ಲೇಖಿಸಿದ್ದಾನೆ. ಉಚ್ಚಾರಣೆಯ ದೃಷ್ಟಿಯಿಂದ 'ದ' ವರ್ಣವನ್ನು ದಂತ್ಯವರ್ಣವೆಂದು ಕರೆಯಲಾಗುತ್ತದೆ. 'ದ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರುಅರಸರ ಕಾಲದವರೆಗೆ ಯಾವರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ದ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ದ' ವರ್ಣವು ದಂತ್ಯ, ಘೋಷ, ಸ್ಪರ್ಶ,ಅಲ್ಪಪ್ರಾಣಧ್ವನಿಯಾಗಿದೆ. 'ದ' ವರ್ಣವನ್ನು ಉಚ್ಚಾರ ಮಾಡುವಾಗ 'ತ' ಮತ್ತು 'ಥ' ವರ್ಣಗಳ ಉಚ್ಚಾರಣೆಗಿಂತಲೂ ಭಿನ್ನವಾಗಿ ಒಂದು ರೀತಿಯ ಘರ್ಷಣೆ ನಡೆಯುವುದನ್ನು ಅರಿಯಬಹುದಾಗಿದೆ. 'ತ' ಮತ್ತು 'ದ' ವರ್ಣಗಳ ನಡುವೆ ಒಂದು ಸಾದೃಶ್ಯ ಸಾಮೀಪ್ಯ ಸಂಬಂಧವಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ದ' ವರ್ಣವು ಉಚ್ಚಾರಗೊಳ್ಳುತ್ತದೆ.**

---

180 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.




ಚಿತ್ರ ಸಂಖ್ಯೆ 31

[181]

## 'ಧ' ವರ್ಣ

'ಧ'ವರ್ಣವು ದಂತ್ಯ,ಘೋಷ,ಮಹಪ್ರಾಣ,ಸ್ಪರ್ಶಧ್ವನಿಯಾಗಿದೆ. ಕನ್ನಡ ವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನಗಳ ನಾಲ್ಕನೇ ವರ್ಗದ ನಾಲ್ಕನೇವರ್ಣವಾಗಿದೆ. 'ತ' ವರ್ಣ ಮತ್ತು 'ಥ' ವರ್ಣಗಳ ನಡುವಿನ ಸಂಭಧವನ್ನು 'ದ' ಮತ್ತು 'ಧ' ವರ್ಣಗಳಿಗೆ ಹೋಲಿಸಬಹುದಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರಸೂತ್ರಗಳಲ್ಲಿ

[181] ಕನ್ನಡ 'ದ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 77 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ದ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

'ಧ'ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಘ,ಢ,ಧ.ಶ್[182] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. 'ಧ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರಕಾಲದವರೆಗೆ ಯಾವರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಧ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರ ದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಧ' ವರ್ಣವು ಉಚ್ಚಾರಗೊಳ್ಳುತ್ತದೆ.**

---

182 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.



ಚಿತ್ರ ಸಂಖ್ಯೆ 32

[183]

## 'ನ' ವರ್ಗ

'ನ' ವರ್ಣವು ಕನ್ನಡ ವರ್ಣಮಾಲೆಯಲ್ಲಿ ವರ್ಗೀಯವ್ಯಂಜನದ ನಾಲ್ಕನೇ ವರ್ಗದ ಕೊನೆಯವರ್ಣವಾಗಿದೆ. ಅಂದರೆ 'ತ' ವರ್ಗದ ಕೊನೆಯ ವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ನ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಞ,ಮ,ಙ,ಣ,ನ[184] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ.

---

[183] ಕನ್ನಡ 'ಧ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 78 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಧ ' ವರ್ಣದ ವಿಕಾಸ ಚಿತ್ರವನ್ನು [183] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[184] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ತನ್ನ ವರ್ಗದ ಉಳಿದ ನಾಲ್ಕುವರ್ಣಗಳಿಗಿಂತ 'ನ' ವರ್ಣವು ಭಿನ್ನವಾಗಿದೆ. ತ,ಥ,ದ,ಧ ವರ್ಣಗಳನ್ನು ಉಚ್ಚಾರ ಮಾಡುವಾಗ ನಾಸಿಕಮಾರ್ಗವು ಮುಚ್ಚಿದ್ದರೆ 'ನ' ವರ್ಣವನ್ನು ಉಚ್ಚಾರಮಾಡುವಾಗ ನಾಸಿಕಮಾರ್ಗವು ತೆರೆದಿರುತ್ತದೆ. ಮತ್ತು ಅವಶ್ಯವಾಗಿ ನಾಸಿಕಮಾರ್ಗ ತೆರೆದಿರಲೇಬೇಕು. ಆದ್ದರಿಂದ 'ನ' ವರ್ಣವನ್ನು ನಾಸಿಕ್ಯಧ್ವನಿ ಎಂದು ಕರೆಯಲಾಗುತ್ತದೆ. 'ನ' ವರ್ಣವು ಘೋಷ,ಅಲ್ಪಪ್ರಾಣ,ಸ್ಪರ್ಶ,ನಾಸಿಕ್ಯಧ್ವನಿಯಾಗಿದೆ. ಈಗಾಗಲೇ ಮೇಲಿನ ಪ್ಯಾರಾಗಳಲ್ಲಿ ವಿವರಿಸಲಾದ ಙ,ಞ,ಣ ವರ್ಣಗಳಿಗಿಂತ ಭಿನ್ನವಾದ ನಾಸಕ್ಯ ವರ್ಣವಾಗಿದೆ. 'ನ' ವರ್ಣವು ಶಬ್ದಾದಿ, ಮಧ್ಯ ಮತ್ತು ಅಂತ್ಯಗಳಲ್ಲಿ ಬಳಕೆಯಾಗಬಲ್ಲ ವರ್ಣವಾಗಿದೆ. ಭಾಷೆಯಲ್ಲಿ ಹೆಚ್ಚು ಪ್ರಯೋಗವನ್ನೂ ಹೊಂದಿದೆ.




ಚಿತ್ರ ಸಂಖ್ಯೆ 33

185

[185] ಕನ್ನಡ 'ನ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 80 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ನ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

'ನ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳ ಕಾಲದಲ್ಲಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಈ ಮೇಲಿನ ಚಿತ್ರದಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ನ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಬಾಯಿ ಮತ್ತಿ ನಾಸಿಕ ದ್ವಾರ ಎರಡರಿಂದಲೂ ಏಕಕಾಲದಲ್ಲಿ ಹೊರಹೊಮ್ಮಿಸಿದಾಗ 'ನ' ವರ್ಣವು ಉಚ್ಚಾರಗೊಳ್ಳುತ್ತದೆ.**

**'ಪ' ವರ್ಣ**

**'ಪ'** ವರ್ಣವು ಕನ್ನಡವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನಗಳ ಐದನೇ ಹಾಗು ಕೊನೆಯವರ್ಗದ ಮೊದಲವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಪ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಕ,ಪಯ್[186] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಉಚ್ಚಾರಣೆಯ ದೃಷ್ಟಿಯಿಂದ 'ಪ' ವರ್ಣವನ್ನು 'ಓಷ್ಠ್ಯ' ವರ್ಣವೆಂದು ಕರೆಯಲಾಗುತ್ತದೆ. 'ಪ' ವರ್ಣವನ್ನು ಸ್ಪರ್ಶವ್ಯಂಜನಗಳಲ್ಲಿ ಕೊನೆಯವರ್ಗದಲ್ಲಿ ಹೇಳಲು ಕಾರಣವನ್ನು ಹುಡುಕಿಹೊರಟರೆ ಸಿಗುವ ಉತ್ತರವೂ ಕೂಡ ಇದನ್ನೆ ಸ್ಪಷ್ಟಪಡಿಸುತ್ತದೆ. ಪಾಣಿನಿಯು

---

[186] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ಶಿಕ್ಷಾಗ್ರಂಥದಲ್ಲಿ "ಉಪೂಪಧ್ಮನೀಯಾನಾಂ ಓಷ್ಠೌ"[187] ಎಂದು ಹೇಳಿದ್ದಾನೆ. ಅಂದರೆ ಉ,ಪವರ್ಗ,ಪಧ್ಮಾನೀಯ ಓಷ್ಠ್ಯದಲ್ಲಿ ಅಂದರೆ ತುಟಿಗಳಸಹಾಯದಿಂದ ಉತ್ಪತ್ತಿಯಾಗುವ ವರ್ಣಗಳಾಗಿವೆ. ಶ್ವಾಸವನ್ನು ಹೊರಸೂಸುವಾಗ ಎರಡು ತುಟಿಗಳಿಂದ ಒಮ್ಮೆ ಹವೆಯನ್ನುತಡೆದು ಒಮ್ಮೇಲೆ ಸ್ಫೋಟಿಸುವಂತೆ ಮಾಡಿ ಧ್ವನಿ ಉತ್ಪಾದನೆಮಾಡಿದರೆ ಅಂತಹ ಧ್ವನಿಗಳನ್ನು 'ಓಷ್ಠ್ಯ' ಧ್ವನಿಗಳೆಂದು ಕರೆಯಲಾಗುತ್ತದೆ. 'ಪ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಪ'ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ಪ' ವರ್ಣ ಅಘೋಷ, ಅಲ್ಪಪ್ರಾಣ, ಓಷ್ಠ್ಯ, ಸ್ಪರ್ಶ,ವರ್ಣವಾಗಿದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಪ' ವರ್ಣವನ್ನು ಹೆಸರಿಸದ್ದಾನೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಪ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[187] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 24.




ಚಿತ್ರ ಸಂಖ್ಯೆ 34

188

## 'ಫ' ವರ್ಣ

'ಫ' ವರ್ಣವು ಕನ್ನಡವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನದ ಐದನೇ ವರ್ಗದ ಎರಡನೇವರ್ಣವಾಗಿದೆ. ಪಾಣಿನಿಯು ಮಾಹೇಶ್ವರ ಸೂತ್ರಗಳಲ್ಲಿ 'ಫ' ವರ್ಣವನ್ನು ಸೇರಿಸಿದ್ದಾನೆ. ಮಾಹೇಶ್ವರ ಸೂತ್ರದ ಖ,ಫ,ಛ,ಠ,ಥ,ಚ,ಟ,ತ[189] ಎನ್ನುವ ಸೂತ್ರದಲ್ಲಿ ಇದರ

---

188. ಕನ್ನಡ 'ಪ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 81 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಪ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

189 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ಉಲ್ಲೇಖ ಬಂದಿದೆ. 'ಫ' ವರ್ಣವನ್ನು ಉಚ್ಚಾರಮಾಡುವಾಗ ಸಲ್ಪ ಉಸಿರನ್ನು ತೆಗೆದುಕೊಮಡು ಉಚ್ಚಾರಮಾಡಿದರೆ 'ಫ' ವರ್ಣವನ್ನು ಉಚ್ಚಾರಮಾಡುವಾಗ ಹೆಚ್ಚು ಉಸಿರನ್ನು ತೆಗೆದುಕೊಂಡು ಉಚ್ಚಾರಮಾಡಬೇಕಾಗುತ್ತದೆ. ಆದ್ದರಿಂದ 'ಫ' ವರ್ಣವನ್ನು ಮಹಾಪ್ರಾಣ ಧ್ವನಿಯೆಂದು ಕರೆಯುತ್ತಾರೆ. 'ಫ' ವರ್ಣವು ಓಷ್ಠ್ಯ, ಅಘೋಷ, ಮಹಾಪ್ರಾಣ, ಸ್ಪರ್ಶಧ್ವನಿಯಾಗಿದೆ. ಓಷ್ಠ್ಯ ಧ್ವನಿಗಳ ಬಗ್ಗೆ ಈಗಾಗಲೇ ವಿವರಿಸಲಾಗಿದೆ. ಕನ್ನಡ ಭಾಷೆಯಲ್ಲಿ 'ಫ' ವರ್ಣ ಇಂದು ಹೆಚ್ಚಾಗಿ ಗ್ರಾಂಥಿಕಭಾಷೆಯಲ್ಲಿ ಉಳಿದುಕೊಂಡಿದೆ. ಆಡುಬಾಷೆಯಲ್ಲಿ ಕ್ರಮೇಣವಾಗಿ ನಶಿಸಿಹೋಗುತ್ತಿದೆ. ಮಹಾಪ್ರಾಣ 'ಫ' ವರ್ಣವನ್ನು 'ಪ' ವರ್ಣದಂತೆ ವ್ಯವಹರಿಸಿ ಉಚ್ಚರಿಸುವ ಜಾಯಮಾನ ಬಂದು ಬಿಟ್ಟಿದೆ. 'ಫ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಫ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಫ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 35

190

## 'ಬ' ವರ್ಣ

'ಬ' ಕನ್ನಡವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನಗಳ ಐದನೇ ವರ್ಗದ ಮೂರನೇ ವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಬ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಜ,ಬ,ಗ,ಡ,ದ[191] ಸೂತ್ರದಲ್ಲಿ 'ಬ' ವರ್ಣವನ್ನು ಉಲ್ಲೇಖಿಸಿದ್ದಾನೆ ಉಚ್ಚಾರಣೆಯ ದೃಷ್ಟಿಯಿಂದ 'ಬ' ವರ್ಣವನ್ನು ಓಷ್ಠ್ಯ

---

[190] ಕನ್ನಡ 'ಫ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 83 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಫ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[191] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾದ ಆರನೇ ಸಾಲು.

ವರ್ಣವೆಂದುಕರೆಯಲಾಗುತ್ತದೆ.




ಚಿತ್ರ ಸಂಖ್ಯೆ 36

[192]

'ಬ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರಿತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಮೇಲಿನ ಚಿತ್ರದಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಬ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. 'ಬ' ವರ್ಣವು ಓಷ್ಠ್ಯ, ಘೋಷ, ಸ್ಪರ್ಶ, ಅಲ್ಪಪ್ರಾಣ ಧ್ವನಿಯಾಗಿದೆ. 'ಬ' ವರ್ಣವನ್ನು ಉಚ್ಚಾರ ಮಾಡುವಾಗ 'ಪ' ಮತ್ತು 'ಫ' ವರ್ಣಗಳ ಉಚ್ಚಾರಣೆಗಿಂತಲೂ ಭಿನ್ನವಾಗಿ ಒಂದುರೀತಿಯ ಘರ್ಷಣೆ ನಡೆಯುತ್ತದೆ.

---

[192] ಕನ್ನಡ 'ಬ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 84 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಬ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಬ' ವರ್ಣವು ಉಚ್ಚಾರಗೊಳ್ಳುತ್ತದೆ.

**'ಭ' ವರ್ಣ**

'ಭ' ವರ್ಣವು ಕನ್ನಡವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನಗಳ ಐದನೇ ವರ್ಗದ ನಾಲ್ಕನೇ ವರ್ಣವಾಗಿದೆ. 'ಭ' ವರ್ಣವು ಓಷ್ಠ್ಯ,ಘೋಷ,ಮಹಪ್ರಾಣ, ಸ್ಪರ್ಶಧ್ವನಿಯಾಗಿದೆ. 'ಪ' ವರ್ಣ ಮತ್ತು 'ಫ' ವರ್ಣಗಳ ನಡುವಿನ ಸಂಭಧವನ್ನು 'ಬ' ಮತ್ತು 'ಭ' ವರ್ಣಗಳಿಗೆಹೋಲಿಸಬಹುದಾಗಿದೆ.




ಚಿತ್ರ ಸಂಖ್ಯೆ 37

[193]

[193] ಕನ್ನಡ 'ಭ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 86 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಭ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ

ಪಾಣಿನಿಯು ವರ್ಣಸಮಾಮ್ನಾಯದಲ್ಲಿ, ಮಾಹೇಶ್ವರಸೂತ್ರಗಳಲ್ಲಿ ಧವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಘ,ಢ,ಧ.ಶ್[194] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಭ ವರ್ಣವು ' ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಭ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಹೊರಹೊಮ್ಮಿಸಿದಾಗ 'ಭ' ವರ್ಣವು ಉಚ್ಚಾರಗೊಳ್ಳುತ್ತದೆ.**

**ಮ ವರ್ಣ**

ಮ ವರ್ಣವು ಕನ್ನಡವರ್ಣಮಾಲೆಯಲ್ಲಿ ವರ್ಗೀಯ ವ್ಯಂಜನದ ಐದನೇವರ್ಗದ ಕೊನೆಯವರ್ಣವಾಗಿದೆ. ಅಂದರೆ 'ಪ' ವರ್ಗದ ಕೊನೆಯವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ನ' ವರ್ಣವನ್ನು ಹೆಸರಿಸಿದ್ದಾನೆ.

---

(ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[194] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ್ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾ.

ಮಾಹೇಶ್ವರ ಸೂತ್ರದ ಞ,ಮ,ಙ,ಣ,ನ[195] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. 'ಪ'ವರ್ಗದ ಉಳಿದನಾಲ್ಕುವರ್ಣಗಳಿಗಿಂತ ಭಿನ್ನವಾಗಿದೆ. ಪ,ಫ,ಬ,ಭ ವರ್ಣಗಳನ್ನು ಉಚ್ಚಾರ ಮಾಡುವಾಗ ನಾಸಿಕ ಮಾರ್ಗವು ಮುಚ್ಚಿದ್ದರೆ 'ಮ' ವರ್ಣವನ್ನು ಉಚ್ಚಾರಮಾಡುವಾಗ ನಾಸಿಕಮಾರ್ಗವು ತೆರೆದಿರುತ್ತದೆ. ಮತ್ತು ಅವಶ್ಯವಾಗಿ ನಾಸಿಕಮಾರ್ಗ ತೆರೆದಿರಲೇಬೇಕು. ಆದ್ದರಿಂದ 'ಮ' ವನ್ನು ನಾಸಿಕ್ಯಧ್ವನಿ ಎಂದು ಕರೆಯಲಾಗುತ್ತದೆ, 'ಮ' ವರ್ಣವು ಓಷ್ಠ್ಯ, ಘೋಷ,ಅಲ್ಪಪ್ರಾಣ,ಸ್ಪರ್ಶ,ನಾಸಿಕ ಧ್ವನಿಯಾಗಿದೆ. ಈಗಾಗಲೇ ಮೇಲಿನ ಪ್ಯಾರಾಗಳಲ್ಲಿ ವಿವರಿಸಲಾದ ಞ,ಙ,ಣ ಗಳಿಗಿಂತ ಭಿನ್ನವಾದ ನಾಸಿಕ್ಯ ವರ್ಣವಾಗಿದೆ. ಕಾರಣ ಉಳಿದ ಅನುನಾಸಿಕಗಳಿಗಿಂತ (ಞ,ಙ,ಣ) ಹೊರತುಪಡಿಸಿ)ಭಿನ್ನವಾಗಿ 'ನ' ವರ್ಣದಂತೆ ಶಬ್ದಾದಿ, ಮಧ್ಯ ಮತ್ತು ಅಂತ್ಯಗಳಲ್ಲಿ ಬಳಕೆಯಾಗಬಲ್ಲ ವರ್ಣವಾಗಿದೆ. ಭಾಷೆಯಲ್ಲಿ ಹೆಚ್ಚು ಪ್ರಯೋಗವನ್ನೂ ಹೊಂದಿದೆ. 'ಮ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳ ಕಾಲದಲ್ಲಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. ಮ ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗ ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಗೊಂಡು ಒಮ್ಮೆಲೆ ಸ್ಫೋಟಗೊಳ್ಳುವಂತೆ ಮಾಡುವುದರ ಮೂಲಕ ಹವೆಯನ್ನು ಬಾಯಿ ಮತ್ತಿ ನಾಸಿಕ ದ್ವಾರ ಎರಡರಿಂದಲೂ ಏಕಕಾಲದಲ್ಲಿ ಹೊರಹೊಮ್ಮಿಸಿದಾಗ 'ಮ' ವರ್ಣವು ಉಚ್ಚಾರಗೊಳ್ಳುತ್ತದೆ.**

---

195 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು. ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾ.




ಚಿತ್ರ ಸಂಖ್ಯೆ 38

[196]

## ಯ ವರ್ಣ

ಯ ವರ್ಣವನ್ನು ಅಂತಃಸ್ಥಗಳ ಗುಂಪಿನ ಮೊದಲ ವರ್ಣವಾಗಿ ಪರಿಗಣಿಸಲಾಗಿದೆ. ಯ ವರ್ಣವು ಅಂತಸ್ಥವರ್ಣಗಳೆಂದರೆ ಸ್ವರ ಮತ್ತು ವ್ಯಂಜನಗಳ ಮಧ್ಯವರ್ತಿಯೆಂದೂ, ಅರ್ಧಸ್ವರಗಳೆಂದೂ, ಅರ್ಧವ್ಯಂಜನಗಳೆಂದೂ, ಸ್ವರಮತ್ತು ವ್ಯಂಜನಗಳ ಲಕ್ಷಣಗಳನ್ನು ಸೇರಿಸಿಕೊಂಡವುಗಳೆಂದೂ ಕರೆಯುತ್ತಾರೆ. ಏಕೆಂದರೆ 'ಯ' ವರ್ಣವು ಪೂರ್ಣವ್ಯಂಜನವೂ ಅಲ್ಲ ಪೂರ್ಣಸ್ವರವೂ ಅಲ್ಲ. ಉಚ್ಚಾರಣೆಯ ದೃಷ್ಟಿಯಿಂದ

---

[196] ಕನ್ನಡ 'ಮ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 87 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಮ ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಗಮನಿಸುವುದಾದರೆ ಸ್ವರದ ಲಕ್ಷಣವನ್ನುಹೊಂದಿದೆ. ಕಾರಣ ವ್ಯಂಜನಗಳನ್ನು ಉಚ್ಚಾರ ಮಾಡುವಾಗ ಸ್ಥಾನ ಮತ್ತು ಕರಣಗಳ ನಡುವೆ ಪರಸ್ಪರ ಸ್ಪರ್ಶ ಸಂಭವಿಸಿದರೆ 'ಯ'ವರ್ಣವನ್ನು ಉಚ್ಚಾರ ಮಾಡುವಾಗ ಸ್ಥಾನ ಮತ್ತು ಕರಣಗಳ ನಡುವೆ ಪರಸ್ಪರ ಸ್ಪರ್ಶಸಂಭವಿಸುವುದಿಲ್ಲ. ಭಾಷೆಯಲ್ಲಿ 'ಯ' ವರ್ಣವನ್ನು ಬಳಸುವುದನ್ನು ಗಮನಿಸಿದರೆ ಇದು ವ್ಯಂಜನಾಕ್ಷರಗಳಿಗೆ ಹೋಲುತ್ತದೆ. ಕಾರಣ ಸ್ವರಗಳು ಸ್ವತಂತ್ರ ಬಳಕೆಯನ್ನು ಹೊಂದಿದ್ದರೂ ಅವು ಶಬ್ದದ ಆದಿಯಲ್ಲಿ ಮತ್ತು ವ್ಯಂಜನಾಕ್ಷರಗಳ ಜೊತೆಗೆ ಬರುತ್ತವೆಯೆ ಹೊರತು ಶಬ್ದದ ಮಧ್ಯ ಮತ್ತು ಅಂತ್ಯಗಳಲ್ಲಿ ಸ್ವತಂತ್ರವಾಗಿ ಅಥವಾ ಬಿಡಿಬಿಡಿಯಾಗಿ ಬರಲಾರವು. ಆದ್ದರಿಂದ ಭಾಷಾ ಪ್ರಯೋಗದ ದ್ರಷ್ಟಿಯಿಂದ ಇವು ಸ್ವರಗಳ ಲಕ್ಷಣ ಹೊಂದಿಲ್ಲ. 'ಅಂತಃಸ್ಥ' ಎನ್ನುವ ಹೆಸರೇ ಸೂಚಿಸುವಂತೆ ಇದು 'ಅಂತಃಸ್ಥ' ಅಂದರೆ ಎರಡರ ನಡುವೆ ಇರುವ ಎಂದರ್ಥ "ಸ್ವರ ಮತ್ತು ವ್ಯಂಜನಗಳ ನಡುವೆ ಅಥವಾ ಅವೆರಡರ ಲಕ್ಷಣವನ್ನು ಹೊಂದಿರುವ" ಎಂದು ಅರ್ಥ. 'ಯ' ವರ್ಣವನ್ನು ಪಾಣಿನಿಯು ತನ್ನ ಮಾಹೇಶ್ವರ ಸೂತ್ರದಲ್ಲಿ ಉಲ್ಲೇಖಿಸಿದ್ದಾನೆ. ಹ,ಯ,ವ,ರಟ್ ಎನ್ನುವ ಸೂತ್ರದಲ್ಲಿ ಇದನ್ನು ಗಮನಿಸಬಹುದಾಗಿದೆ. 'ಯ'ವರ್ಣವನ್ನು ಅಂತಃಸ್ಥ ವರ್ಣಗಳ ಸಾಲಿನಲ್ಲಿ ಮೊದಲ ಅಕ್ಷರವನ್ನಾಗಿ ಬಳಸಲು ಕಾರಣ ಯವರ್ಣ ಉತ್ಪಾದನಾ ಸ್ಥಾನವಾಗಿದೆ. 'ಇಚುಯಶಾನಾಂ ತಾಲು'[197] ಎಂದು ಪಾಣಿನಿಯು ಉಚ್ಚಾರಣಾ ಸ್ಥಾನದ ಕುರಿತು ಹೇಳಿದ್ದಾನೆ. 'ಯ'ವರ್ಣವನ್ನು ತಾಲವ್ಯ ಭಾಗದಲ್ಲಿ ಉಚ್ಚರಿಸಲಾಗುತ್ತದೆ, ತಾಲವ್ಯ ಸ್ಥಾನದ ಕುರಿತು ಈಗಾಗಲೇ ವಿವರಿಸಲಾಗಿದೆ. ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಇಕೋಯಣಚಿ[198] ಎಂಬ ಸೂತ್ರವಿದೆ. ಇದು ಸಂಧಿಪ್ರಕ್ರಿಯೆ ಕುರಿತು ಹೇಳಲಾದ ಸೂತ್ರವಾಗಿದ್ದರೂ ವ್ಯಾಕರಣ ದೃಷ್ಟಿಯಿಂದ ಬಹುಮಹತ್ತ್ವ ಪಡೆದುಕೊಂಡಿರುವ ಸೂತ್ರವಾಗಿದೆ. ಇಕೋ+ಯಣ್=ಅಚಿ ಎಂದು ಬಿಡಿಸಿದಾಗ 'ಇಕ್'ವರ್ಣಗಳಿಗೆ (ಇ.ಉ.ಋ.ಲೃ) ಅಚ್‌ವರ್ಣಗಳು(ಸ್ವರಗಳು) ಪರವಾದಾಗ ಕ್ರಮವಾಗಿ

---

[197] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 24 ಆರನೇ ಸಾಲು.

[198] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು. ಪ್ರಥಮ ಮುದ್ರಣ 1965. ಪುಟ ಸಂಖ್ಯೆ :56. ಎರಡನೇ ಪ್ಯಾರಾದ ಉಪ ಶೀರ್ಷಿಕೆ

ಯಣ್,(ಯ,ವ,ರ,ಲ) ಆದೇಶ ಹೊಂದುತ್ತವೆ ಎನ್ನುವುದು ಸೂತ್ರಾರ್ಥವಾಗಿದೆ. ಉದಾಹರಣೆಗೆ ಮಧು+ ಅರಿ= ಮಧ್ವರಿ , ಅತಿ+ಅಂತ= ಅತ್ಯಂತ. ಇತ್ಯಾದಿ. ಇಲ್ಲಿ ಗಮನಿಸಬೇಕಾದ ಮುಖ್ಯವಿಚಾರಗಳೆಂದರೆ ಸಂಧಿಪ್ರಕ್ರಿಯೆಯಲ್ಲಿ ಯಣ್ ಆದೇಶವಾಗಿರುವುದು. ಈ ಹಿನ್ನೆಲೆಯಲ್ಲಿ 'ಯ'ವರ್ಣವು ಮೇಲಿನ 'ಇಕ್' ವರ್ಣಗಳಲ್ಲಿ 'ಇ' ವರ್ಣದ ಸಂಕುಚಿತತೆಯನ್ನು ಹೊಂದಿದೆ ಎನ್ನುಬಹುದಾಗಿದೆ. 'ಇ' ವರ್ಣವನ್ನು ಸಂಕುಚಿತವಾಗಿ ಉಚ್ಚಾರಮಾಡಿದರೆ ಅದು 'ಯ' ವರ್ಣದಂತೆ ಕೇಳುತ್ತದೆ. ಈ ಹಿನ್ನೆಲೆಯಲ್ಲಿ 'ಯ' ವರ್ಣವು 'ಇ' ವರ್ಣದ ಸಂಕುಚಿತರೂಪವಾಗಿದೆ. ಈ ಆಧಾರದ ಮೇಲೆ 'ಯ'ರ್ಣವನ್ನು ಅರ್ಧಸ್ವರ ಎಂದು ಕರೆಯಲುಕಾರಣ 'ಇ'ವರ್ಣದ ಉಚ್ಚಾರಣಾ ಸಾಮೀಪ್ಯವಾಗಿದೆ.




ಚಿತ್ರ ಸಂಖ್ಯೆ 39

199

'ಯ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಮೇಲಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಯ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ**

---

[199] ಕನ್ನಡ 'ಯ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 89 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಯ ' ವರ್ಣದ ವಿಕಾಸ ಚಿತ್ರವನ್ನು [199] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ. ಪುಟ 272

ಭಾಗಗಳು ಪರಸ್ಪರ ಸಮೀಪ ಬಂದು ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಯ' ವರ್ಣವು ಉಚ್ಚಾರಗೊಳ್ಳುತ್ತದೆ.

## 'ರ' ವರ್ಣ

'ರ' ವರ್ಣವನ್ನು ಅಂತಃಸ್ಥಗಳ ಗುಂಪಿನ ಎರಡನೆಯ ವರ್ಣವಾಗಿಯೂ ಮತ್ತು ಮೂರನೆಯ ವರ್ಣವಾಗಿಯೂ ಪರಿಗಣಿಸಲಾಗಿದೆ. ಪಾಣಿನಿಯು 'ರ' ವರ್ಣವನ್ನು ಸ್ವರಗಳ ಅನುಕ್ರಮಣಿಕೆಯ ದೃಷ್ಟಿಯಿಂದ ಯ,ವ,ರ,ಲ ಎಂದು 'ರ' ವರ್ಣವನ್ನು ಅಂತಃಸ್ಥವರ್ಣಗಳ ಗುಂಪಿನಲ್ಲಿ ಮೂರನೆಯ ವರ್ಣವಾಗಿ ಹೇಳಿದ್ದಾನೆ. ಅದೇರೀತಿ ಉಚ್ಚಾರಣೆಯದೃಷ್ಟಿಯಿಂದ ಅಂತಃಸ್ಥವರ್ಣಗಳ ಸಾಲಿನಲ್ಲಿ ಎರಡನೇವರ್ಣವಾಗಿ ಪರಿಗಣಿಸಿದ್ದಾನೆ. 'ರ' ವರ್ಣವನ್ನು ಪಾಣಿನಿಯು ಮಾಹೇಶ್ವರ ಸೂತ್ರದಲ್ಲಿ ಉಲ್ಲೇಖಿಸಿದ್ದಾನೆ. ಹ,ಯ,ವ,ರಟ್ ಎನ್ನುವಸೂತ್ರದಲ್ಲಿ ಇದನ್ನು ಗಮನಿಸಬಹುದಾಗಿದೆ. 'ಋಟುರಷಾಣಾಂ ಮೂರ್ಧಾ' ಎಂದು ಪಾಣಿನಿಯು 'ರ' ವರ್ಣ ಉಚ್ಚಾರಣಾಸ್ಥಾನದ ಕುರಿತು ಹೇಳಿದ್ದಾನೆ. 'ರ' ವರ್ಣವನ್ನು ಮೂರ್ಧನ್ಯ ಭಾಗದಲ್ಲಿ ಉಚ್ಚರಿಸಲಾಗುತ್ತದೆ, ಮೂರ್ಧನ್ಯ ಸ್ಥಾನದಕುರಿತು ಈಗಾಗಲೇ ವಿವರಿಸಲಾಗಿದೆ. ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ 'ಇಕೋಯಣಚಿ' ಎನ್ನುವ ಸೂತ್ರದ ಆಧಾರದಮೇಲೆ 'ಯ' ವರ್ಣವನ್ನು ವಿವರಿಸಿದಂತೆ 'ರ' ವರ್ಣವು 'ಇಕ್' ವರ್ಣಗಳಲ್ಲಿ 'ಋ'ವರ್ಣದ ಸಂಕುಚಿತತೆಯನ್ನು ಹೊಂದಿದೆ. 'ಋ' ವರ್ಣವನ್ನು ಸಂಕುಚಿತವಾಗಿ ಉಚ್ಚಾರಮಾಡಿದರೆ ಅದು 'ರ' ವರ್ಣದಂತೆ ಕೇಳುತ್ತದೆ. ಈ ಹಿನ್ನೆಲೆಯಲ್ಲಿ 'ರ' ವರ್ಣವು 'ಋ' ವರ್ಣದ ಸಂಕುಚಿತರೂಪವಾಗಿದೆ.




ಚಿತ್ರ ಸಂಖ್ಯೆ 40

200

'ರ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ರ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಿಸಿ, ಘರ್ಷಣೆಗೆ ಒಳಪಡುವಂತೆ ಮಾಡಿ ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ರ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[200] ಕನ್ನಡ 'ರ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 91 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ರ' ವರ್ಣದ ವಿಕಾಸ ಚಿತ್ರವನ್ನು [200] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272

## 'ವ' ವರ್ಣ

ವ ವರ್ಣವನ್ನು ಅಂತಃಸ್ಥಗಳ ಗುಂಪಿನ ಎರಡನೆಯ ವರ್ಣವಾಗಿಯೂ ಮತ್ತು ಮೂರನೆಯ ವರ್ಣವಾಗಿಯೂ ಪರಿಗಣಿಸಲಾಗಿದೆ. ಪಾಣಿನಿಯು 'ವ' ವರ್ಣವನ್ನು ಸ್ವರಗಳ ಅನುಕ್ರಮಣಿಕೆಯ ದೃಷ್ಟಿಯಿಂದ ಯ,ವ,ರ,ಲ ಎಂದು 'ವ' ವರ್ಣವನ್ನು ಅಂತಃಸ್ಥವರ್ಣಗಳ ಗುಂಪಿನಲ್ಲಿ ಎರಡನೆಯವರ್ಣವಾಗಿ ಹೇಳಿದ್ದಾನೆ. ಅದೇರೀತಿ ಉಚ್ಚಾರಣೆಯ ದೃಷ್ಟಿಯಿಂದ ಅಂತಃಸ್ಥಗಳ ಸಾಲಿನಲ್ಲಿ ಮೂರನೇವರ್ಣವಾಗಿ ಪರಿಗಣಿಸಿದ್ದಾನೆ. 'ವ' ವರ್ಣವನ್ನು ಪಾಣಿನಿಯು ತನ್ನ ಮಾಹೇಶ್ವರ ಸೂತ್ರದಲ್ಲಿ ಉಲ್ಲೇಖಿಸಿದ್ದಾನೆ. ಹ,ಯ,ವ,ರಟ್ ಎನ್ನುವಸೂತ್ರದಲ್ಲಿ ಇದನ್ನು ಗಮನಿಸಬಹುದಾಗಿದೆ. ವಕಾರಸ್ಯ ದಂತೋಷ್ಠಂ[201] ಎಂದು ಪಾಣಿನಿಯು ಉಚ್ಚಾರಣಾ ಸ್ಥಾನದ ಕುರಿತು ಹೇಳಿದ್ದಾನೆ. 'ವ' ವರ್ಣವನ್ನು ದಂತ ಮತ್ತು ಓಷ್ಠ ಎರಡರ ಸಹಯೋಗದೊಂದಿಗೆ ಉಚ್ಚರಿಸಲಾಗುತ್ತದೆ. ಈಗಾಗಲೇ ವಿವರಿಸಿದಂತೆ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ 'ಇಕೋಯಣಚಿ' ಎನ್ನುವ ಸೂತ್ರದ ಹಿನ್ನೆಲೆಯಲ್ಲಿ 'ವ' ವರ್ಣವು ಮೆಲಿನ ಇಕ್[202] ವರ್ಣಗಳಲ್ಲಿ 'ಉ' ವರ್ಣದ ಸಂಕುಚಿತತೆಯನ್ನು ಹೊಂದಿದೆ. 'ಉ' ವರ್ಣವನ್ನೆ ಸಂಕುಚಿತವಾಗಿ ಉಚ್ಚಾರಮಾಡಿದರೆ ಅದು 'ವ ವರ್ಣದಂತೆ ಕೇಳುತ್ತದೆ. ಈ ಹಿನ್ನೆಲೆಯಲ್ಲಿ 'ವ' ವರ್ಣವು 'ಉ' ವರ್ಣದ ಸಂಕುಚಿತ ರೂಪವಾಗಿದೆ. 'ವ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ

---

[201]ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ:25. 7 ನೇ ಸಾಲು.

[202] ಅಷ್ಟಾಧ್ಯಾಯಿ, ಪಾಣಿನಿ, 6।1।77 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :56, ಮೂರನೇ ಪ್ಯಾರಾ ಆರನೇ ಸಾಲು.

ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ವ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸಮೀಪ ಬಂದು ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ವ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 42

[203]

---

[203] ಕನ್ನಡ 'ವ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 93 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ವ' ವರ್ಣದ ವಿಕಾಸ ಚಿತ್ರವನ್ನು [203] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

**ಲ ವರ್ಣದ ಚರಿತ್ರೆ**

ಲ ವರ್ಣವನ್ನು ಅಂತಃಸ್ಥಗಳ ಗುಂಪಿನ ನಾಲ್ಕನೆಯ ಅಥವಾ ಮೂರನೆಯ ವರ್ಣವಾಗಿ ಸ್ವೀಕರಿಸಲಾಗಿದೆ. ಪಾಣಿನಿಯು 'ಲ' ವರ್ಣವನ್ನು ಸ್ವರಗಳ ಅನುಕ್ರಮಣಿಕೆಯ ದೃಷ್ಟಿಯಿಂದ ಯ,ವ,ರ,ಲ ಎಂದು 'ಲ' ವರ್ಣವನ್ನು ಅಂತಃಸ್ಥವರ್ಣಗಳ ಗುಂಪಿನಲ್ಲಿ ನಾಲ್ಕನೆಯ ವರ್ಣವಾಗಿ ಹೇಳಿದ್ದಾನೆ. ಅದೆ ರೀತಿ ಉಚ್ಚಾರಣೆಯ ದೃಷ್ಟಿಯಿಂದ ಅಂತಸ್ಥಗಳ ಸಾಲಿನಲ್ಲಿ ಮೂರನೇ ವರ್ಣವಾಗಿ ಪರಿಗಣಿಸಿದ್ದಾನೆ. 'ಲ' ವರ್ಣವನ್ನು ಪಾಣಿನಿಯು ತನ್ನ ಮಾಹೇಶ್ವರ ಸೂತ್ರದಲ್ಲಿ ಉಲ್ಲೇಖಿಸಿದ್ದಾನೆ. 'ಹ,ಯ,ವ,ರಟ್' ಎನ್ನುವ ಸೂತ್ರದಲ್ಲಿ ಇದನ್ನು ಗಮನಿಸಬಹುದಾಗಿದೆ. 'ಲೃತುಲಸಾನಾಂ ದಂತಾಃ'[204] ಎಂದು ಪಾಣಿನಿಯು ಉಚ್ಚಾರಣಾ ಸ್ಥಾನದ ಕುರಿತು ಹೇಳಿ ದಂತ್ಯವರ್ಣವನ್ನಾಗಿ ಪರಿಗಣಿಸಿದ್ದಾನೆ. 'ಲ' ವರ್ಣವನ್ನು ಈಗಾಗಲೇ ವಿವರಿಸಿದಂತೆ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ 'ಇಕೋಯಣಚಿ' ಎನ್ನುವ ಸೂತ್ರದಹಿನ್ನೆಲೆಯಲ್ಲಿ 'ಲ' ವರ್ಣವು ಮೆಲಿನ 'ಇಕ್' ವರ್ಣಗಳ ಸಂಕುಚಿತತೆಯನ್ನು ಹೊಂದಿದೆ ಎನ್ನುಬಹುದಾಗಿದೆ, 'ಲೃ' ವರ್ಣವನ್ನೆ ಸಂಕುಚಿತವಾಗಿ ಉಚ್ಚಾರಮಾಡಿದರೆ ಅದು 'ಲ' ವರ್ಣದಂತೆ ಕೇಳುತ್ತದೆ. ಈ ಹಿನ್ನೆಲೆಯಲ್ಲಿ 'ಲ' ವರ್ಣವು 'ಲೃ'ವರ್ಣದ ಸಂಕುಚಿತರೂಪವಾಗಿದೆ. 'ಲ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಲ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಿಸಿ ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಲ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[204] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 48.




ಚಿತ್ರ ಸಂಖ್ಯೆ 41

[205]

## ಶ ವರ್ಣ

ಶ ವರ್ಣವು ಊಷ್ಮ ವರ್ಣದ ಪಂಕ್ತಿಯಲ್ಲಿ ಮೊದಲವರ್ಣವಾಗಿದೆ. ಪಾಣಿನಿಯ ಅಷ್ಟಾಧ್ಯಾಯಿ ಶ,ಷ,ಸ,ಹ ಗಳನ್ನು ಊಷ್ಮವರ್ಣಗಳನ್ನಾಗಿ ಹೇಳಲಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಶ' ವರ್ಣವನ್ನು ಹೆಸರಿಸಿದ್ದಾನೆ.

---

[205] ಕನ್ನಡ 'ಲ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 92 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಲ' ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಮಾಹೇಶ್ವರ ಸೂತ್ರದ ಶ,ಷ,ಸ[206] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. 'ಹ'ವರ್ಣವನ್ನು ಮಾಹೇಶ್ವರ ಸೂತ್ರಗಳಲ್ಲಿ ಎರಡುಕಡೆ ಉಲ್ಲೇಖಮಾಡಲಾಗಿದೆ ಇದರ ವಿವರಣೆಯನ್ನು ಮುಂದಿನ 'ಹ' ವರ್ಣದ ವಿವರಣೆಯಲ್ಲಿ ನೀಡಲಾಗಿದೆ. ಪ್ರಸ್ತುತ 'ಶ' ವರ್ಣದ ವಿವರಣೆಯನ್ನು ವಿವರಿಸುವುದಾದರೆ 'ಶ' ವರ್ಣವು ಊಷ್ಮವರ್ಣಗಳ ಸಾಲಿನಲ್ಲಿ ಮೊದಲ ವರ್ಣವಾಗಿರುವುದಕ್ಕೆ ಕಾರಣ ವೇನೆಂದರೆ ಧ್ವನ್ಯುತ್ಪಾದನಾಸ್ಥಾನವಾಗಿದೆ. ಶ, ಷ, ಸ ವರ್ಣಗಳ ಧ್ವನ್ಯುತ್ಪಾದನಾ ಸ್ಥಾನಗಳನ್ನು ಗಮನಿಸಿದಾಗ 'ಶ' ವರ್ಣದ ಉತ್ಪಾದನಾ ಸ್ಥಾನವು ಮುಖವಿವರದಲ್ಲಿ ತಾಲವ್ಯ ಭಾಗವಾಗಿರುವುದರಿಂದ(ಇಚುಯಶಾನಾಂ ತಾಲು) 'ಷ' ಮತ್ತು 'ಸ' ವರ್ಣಗಳ ಮೊದಲಿಗೆ ಇರುವುದರಿಂದ 'ಶ' ವರ್ಣವನ್ನು ಊಷ್ಮ ವರ್ಣಗಳ ಸಾಲಿನಲ್ಲಿ ಮೊದಲ ವರ್ಣವಾಗಿ ಹೇಳಲಾಗಿದೆ. ಕನ್ನಡ ಭಾಷೆಯಲ್ಲಿ ಕೇಶಿರಾಜ ಕನ್ನಡವರ್ಣಮಾಲೆಯನ್ನು ಕುರಿತು ಹೇಳುವಾಗ 'ಶ' ವರ್ಣವನ್ನು ಹೆಸರಿಸಿದ್ದಾನೆ. 'ಶ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಶ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಿಸಿ ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಶ' ವರ್ಣವು ಉಚ್ಚಾರಗೊಳ್ಳುತ್ತದೆ.**

---

[206] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾ.




ಚಿತ್ರ ಸಂಖ್ಯೆ 43

207

## 'ಷ' ವರ್ಣ

'ಷ' ವರ್ಣವು ಅಂತಸ್ಥವರ್ಣದ ಸಾಲಿನಲ್ಲೆ ಎರಡನೇವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ 'ಷ' ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಶ,ಷ,ಸ[208] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖಬಂದಿದೆ. 'ಷ' ವರ್ಣದ ಉತ್ಪಾದನಾಸ್ಥಾನವು ಮುಖವಿವರದಲ್ಲಿ ಮೂರ್ಧನ್ಯಭಾಗವಾಗಿರುವುದರಿಂದ

---

[207] ಕನ್ನಡ 'ಶ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 95 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಶ ' ವರ್ಣದ ವಿಕಾಸ ಚಿತ್ರವನ್ನು [207] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

[208] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾ.

(ಖಟುರಷಾಣಾಂ ಮೂರ್ಧಾ) ಶ ಮತ್ತು ಸ ವರ್ಣಗಳ ಉಚ್ಚಾರಣಾಸ್ಥಾನಗಳ ನಡುವೆ ಮೂರ್ಧನ್ಯ ಭಾಗವಾಗಿರುವುದರಿಂದ 'ಷ' ವರ್ಣವನ್ನು 'ಶ' ಮತ್ತು 'ಸ' ವರ್ಣಗಳ ನಡುವೆ ಸೇರಿಸಲಾಗಿದೆ. ಅಂದರೆ ಊಷ್ಮ ವರ್ಣಪಂಕ್ತಿಯ ಎರಡನೆಯ ವರ್ನವನ್ನಾಗಿ ಹೇಳಲಾಗಿದೆ. ಕೇಶಿರಾಜ ಕನ್ನಡ ವರ್ಣಮಾಲೆಯನ್ನು ಕುರಿತು ಹೇಳುವಾಗ 'ಷ' ವರ್ಣವನ್ನು ಹೆಸರಿಸಿದ್ದಾನೆ. 'ಷ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಸಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದಮೂಲಕ ಅರಿಯ ಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. ಷ ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಧ್ವನ್ಯಂಗಗಳ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಿಸಿ ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಷ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 44

209

## ‘ಸ’ ವರ್ಣ

‘ಸ’ ವರ್ಣವು ಅಂತಃಸ್ಥವರ್ಣದ ಸಾಲಿನಲ್ಲಿ ಮೂರನೇ ವರ್ಣವಾಗಿದೆ. ಪಾಣಿನಿಯು ವರ್ಣಸಮಾಮ್ನಾಯದಲ್ಲಿ ಮಾಹೇಶ್ವರ ಸೂತ್ರಗಳಲ್ಲಿ ‘ಸ’ ವರ್ಣವನ್ನು ಹೆಸರಿಸಿದ್ದಾನೆ. ಮಾಹೇಶ್ವರ ಸೂತ್ರದ ಶ,ಷ,ಸ[210] ಎನ್ನುವ ಸೂತ್ರದಲ್ಲಿ ಇದರ ಉಲ್ಲೇಖ ಬಂದಿದೆ. ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ‘ಸ’ ವರ್ಣವನ್ನು ಹೇಳಲಾಗಿದೆ. ‘ಸ’ ವರ್ಣದ

---

209 ಕನ್ನಡ ‘ಷ ’ ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 96 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ ‘ಷ ’ ವರ್ಣದ ವಿಕಾಸ ಚಿತ್ರವನ್ನು ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ‘ದೇವನಾಗರಿಲಿಪಿ’ ಶಬ್ದದ ಅರ್ಥ ವಿವರಣೆ, ಪುಟ 272.

210 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :56, ಎರಡನೇ ಪ್ಯಾರಾ.

ಉತ್ಪಾದನಾ ಸ್ಥಾನವು ಮುಖವಿವರದಲ್ಲಿ ದಂತ್ಯಭಾಗವಾಗಿರುವುದರಿಂದ ( ಲೃತುಲಸಾನಾಂ ದಂತಾಃ) 'ಶ' ಮತ್ತು 'ಷ' ವರ್ಣಗಳ ಉಚ್ಚಾರಣಾಸ್ಥಾನಗಳ ನಂತರ ದಂತ್ಯ ಭಾಗವಾಗಿರುವುದರಿಂದ 'ಸ' ವರ್ಣವನ್ನು 'ಶ' ಮತ್ತು 'ಷ' ವರ್ಣಗಳ ತರುವಾಯ ಸೇರಿಸಲಾಗಿದೆ. ಅಂದರೆ ಊಷ್ಮವರ್ಣಪಂಕ್ತಿಯ ಕೊನೆಯ ವರ್ಣವನ್ನಾಗಿ ಹೇಳಲಾಗಿದೆ. ಕೇಶಿರಾಜ ಕನ್ನಡ ವರ್ಣಮಾಲೆಯನ್ನು ಕುರಿತು ಹೇಳುವಾಗ 'ಸ' ವರ್ಣಕ್ಕೆ ಅವಕಾಶ ಕಲ್ಪಿಸಿದ್ದಾನೆ. 'ಸ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಸ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಿಸಿ ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಸ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 45

211

## 'ಹ' ವರ್ಣ

'ಹ' ವರ್ಣವು ಅಂತಃಸ್ಥವರ್ಣದ ಸಾಲಿನಲ್ಲಿ ಮೊದಲ ಮತ್ತು ಕೊನೆಯವರ್ಣ ಹೀಗೆ ಎರಡು ರೀತಿಯಲ್ಲಿ ಸ್ಥಾನಕಲ್ಪಿಸುವ ಪದ್ಧತಿಯಿದೆ. ಹಾಗೆಯೇ 'ಹ' ವರ್ಣದ ಕುರಿತು ಮೊದಲಿನಿಂದಲೂ ಗೊಂದಲಗಳು ಇದ್ದಂತೆ ತೊರುತ್ತದೆ. ಇದಕ್ಕೆ ಪ್ರಮುಖ ಕಾರಣ ಪಾಣಿನಿಯು ಹೇಳಿದ ಮಾಹೇಶ್ವರ ಸೂತ್ರಗಳಲ್ಲಿ ಎರಡು 'ಹ' ವರ್ಣಗಳ ಉಲ್ಲೇಖವಿದೆ.

---

[211] ಕನ್ನಡ 'ಸ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 98 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಸ ' ವರ್ಣದ ವಿಕಾಸ ಚಿತ್ರವನ್ನು [211] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಹ,ಯ,ವ,ರ,ಟ್[212] ಮತ್ತು ಹಲ್[213] ಎನ್ನುವ ಎರಡು ಸೂತ್ರಗಳಲ್ಲಿ ಇದರ ಉಲ್ಲೇಖ ಕಂಡುಬಂದಿದೆ. 'ಹ' ವರ್ಣವನ್ನು ಉಚ್ಚಾರಣಾಸ್ಥಾನದ ದೃಷ್ಟಿಯಿಂದ ಉಚ್ಚಾರಣಾ ಸ್ಥಾನವು ಕಂಠವಾಗಿರುವ ಕಾರಣ ಊಷ್ಮ ವರ್ಣಗಳ ಸ್ಥಾನದ ದೃಷ್ಟಿಯಿಂದ ಮೊದಲ ವರ್ಣವಾಗುತ್ತದೆ. ಅದೇರೀತಿ 'ಹ' ವರ್ಣವು ಅಂತಸ್ಥವರ್ಣಗಳ ಗುಣಲಕ್ಷಣಗಳನ್ನು ಹೊಂದಿರುವುದರಿಂದ, ಇದು ಭಾಗಶಃ ಊಷ್ಮವರ್ಣಗಳಲಕ್ಷಣ ಹೊಂದಿರುವುದರಿಂದ, ಊಷ್ಮವರ್ಣಗಳ ಪಂಕ್ತಿಯಲ್ಲಿ ಕೊನೆಯವರ್ಣವನ್ನಾಗಿ ಸೇರಿಸಲಾಗಿದೆ. 'ಹ' ವರ್ಣವು ಬ್ರಾಹ್ಮಿಲಿಪಿಯ ಅಶೋಕನ ಶಾಸನಗಳಿಂದ ಆರಂಭವಾಗಿ ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. ಅದೇರೀತಿ ಸಂಸ್ಕೃತ ಭಾಷೆಯಲ್ಲಿ ಅದರ ವಿಕಾಸ ಪಥವನ್ನೂ ಚಿತ್ರದಲ್ಲಿ ಸಂಗ್ರಹಿಸಲಾಗಿದೆ. 'ಹ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸಮೀಪಬಂದು ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಹ' ವರ್ಣವು ಉಚ್ಚಾರಗೊಳ್ಳುತ್ತದೆ.**

---

212 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :2, ಎರಡನೇ ಪ್ಯಾರಾ.

213 ಅದೇ.




ಚಿತ್ರ ಸಂಖ್ಯೆ ೪೬

[214]

## 'ಳ' ವರ್ಣ

ಸಂಸ್ಕೃತದಲ್ಲಿ ಪ್ರತ್ಯೇಕ 'ಳ' ಕಾರದ ಉಲ್ಲೇಖ ವಿಲ್ಲ. ಇದು ಕನ್ನಡ ಭಾಷೆಯಲ್ಲಿ ಪ್ರತ್ಯೇಕ ವಾಗಿ ಬಳಕೆಯಾದ ಅಕ್ಷರವಾಗಿದೆ. ಕೇಶಿರಾಜ ಕನ್ನಡದಅಸಾಧಾರಣ ಲಕ್ಷಣವಾಗಿ ಇದನ್ನು ಪರಿಗಣಿಸಿದ್ದಾನೆ. ವಾಸ್ತವವಾಗಿ 'ಳ' ಕರವು 'ಲ' ಕಾರದ ಪ್ರಭೇದವಲ್ಲ. ಇದಕ್ಕೆ ಪ್ರಮುಖ ಕಾರಣ ಉಚ್ಚಾರಣಾಸ್ಥಾನ 'ಲ' ಕಾರದ ಧ್ವನ್ಯುತ್ಪಾದನಾ ಸ್ಥಾನ ದಂತ್ಯಸ್ಪರ್ಶಧ್ವನಿಯಾಗಿದ್ದರೆ 'ಳ' ಕಾರವು ಪಾರ್ಶ್ವಿಕಮೂರ್ಧನ್ಯಸ್ಪರ್ಶ ಧ್ವನಿಯಾಗಿದೆ. ಎರಡು ವಿಭಿನ್ನತೆರನಾದ ಧ್ವನಿಗಳೆನ್ನಬೇಕಾಗುತ್ತದೆ. ಕನ್ನಡದಲ್ಲಿ ಮಾತ್ರ ಬಳಕೆಯಲ್ಲಿರುವ 'ಳ' ವರ್ಣವು ಪಾರ್ಶ್ವಿಕಮೂರ್ಧನ್ಯಸ್ಪರ್ಶ ವರ್ಣವಾಗಿದೆ. 'ಳ' ವರ್ಣವು ಮೈಸೂರು ಅರಸರ ಕಾಲದವರೆಗೆ ಯಾವ ರೀತಿಯಲ್ಲಿ ವಿಕಾಸವಾಗುತ್ತ ಬಂದಿದೆ ಎನ್ನುವುದನ್ನು

---

[214] ಕನ್ನಡ 'ಹ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ,ಎರಡನೆಯಮುದ್ರಣ,1975, ಡಾ.ಎ.ವಿ.ನರಸಿಂಹಮೂರ್ತಿ. ಪುಟ 99 ಮತ್ತು ಭಾಷಾವಿಜ್ಞಾನ ಕೋಶದ ದೇವನಾಗರಿಲಿಪಿ ಅರ್ಥವಿವರಣೆ: ಹಾಗೂ ಸಂಸ್ಕೃತ 'ಹ ' ವರ್ಣದ ವಿಕಾಸ ಚಿತ್ರವನ್ನು [214] ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) 'ದೇವನಾಗರಿಲಿಪಿ' ಶಬ್ದದ ಅರ್ಥ ವಿವರಣೆ, ಪುಟ 272.

ಈ ಕೆಳಗಿನ ಚಿತ್ರದ ಮೂಲಕ ಅರಿಯಬಹುದಾಗಿದೆ. 'ಳ' ವರ್ಣದ ಉಚ್ಚಾರಣೆಯ ಸಂದರ್ಭದಲ್ಲಿ ಮುಖವಿವರದಲ್ಲಾಗುವ ಸ್ವರೂಪವನ್ನು ಚಿತ್ರದಮೂಲಕ ತೋರಿಸಲಾಗಿದೆ. **ಮುಖವಿವರದಲ್ಲಿ ಹವೆಯನ್ನು ಹೊರದಬ್ಬುವಾಗ ನೀಲಿ ಬಣ್ಣದಿಂದ ತೋರಿಸಲ್ಪಟ್ಟ ಭಾಗಕ್ಕೆ (ನಾಲಗೆಯ ಮುಂಭಾಗ) ಮತ್ತು ಕೆಂಪು ಬಣ್ಣದಿಂದ ತೋರಿಸಲ್ಪಟ್ಟ ಭಾಗಗಳು ಪರಸ್ಪರ ಸ್ಪರ್ಶಿಸಿ ಹವೆಯನ್ನು ಹೊರಹೊಮ್ಮುವಂತೆ ಮಾಡಿದಾಗ 'ಳ' ವರ್ಣವು ಉಚ್ಚಾರಗೊಳ್ಳುತ್ತದೆ.**




ಚಿತ್ರ ಸಂಖ್ಯೆ 47

[215]

---

[215] ಕನ್ನಡ 'ಳ ' ವರ್ಣದ ವಿಕಾಸವನ್ನು ಕನ್ನಡಲಿಪಿಯಉಗಮವಿಕಾಸ.ಎರಡನೆಯಮುದ್ರಣ.1975. ಡಾ.ಎ.ವಿ.ನರಸಿಂಹಮೂರ್ತಿ. ಪುಟ 101.

ಈ ಮೇಲಿನ ಎಲ್ಲ ವರ್ಣಗಳ ಉಚ್ಚಾರಣೆ ಮಾಡುವಾಗ ಧ್ವನ್ಯಂಗದ ಸ್ವರೂಪವನ್ನು ಗಮನಿಸುವುದರ ಮೂಲಕ ತಮ್ಮ ಉಚ್ಚಾರಣಾ ವಿಧಾನದ ಸತ್ಯಾಸತ್ಯತೆಯನ್ನು ಅರಿಯಯಬೇಕು. ಮತ್ತು ಅವುಗಳನ್ನು ಕನ್ನಡಿಗರೆಲ್ಲ ಏಕರೀತಿಯಲ್ಲಿ ರೂಢಿಸಿಕೊಳ್ಳಲು ಬಳಸಿಕೊಳ್ಳಬಹುದಾಗಿದೆ.

---

# ಅಧ್ಯಾಯ 6 ವರ್ಣಮಾಲೆ/ವರ್ಣಸಮಾಮ್ನಾಯ

## 6.1 ಅರ್ಥ:

ವರ್ಣಮಾಲೆ/ ವರ್ಣಸಮಾಮ್ನಾಯವೆಂದರೆ ಒಂದುಭಾಷೆಯಲ್ಲಿ ಬಳಸಲು ಅತ್ಯಂತ ಅಗತ್ಯವಿರುವ ಧ್ವನಿಗಳನ್ನು ನಿಯಮಾನುಸಾರ ಅಥವಾ ಶಾಸ್ತ್ರೀಯದೃಷ್ಟಿಕೋನದಡಿಯಲ್ಲಿ ಒಂದುಕಡೆ ಪೋಣಿಸುವಂತದ್ದು. 'ವರ್ಣಮಾಲೆ' ಎಂಬಲ್ಲಿ ಅದರ ಹೆಸರೇ ಸೂಚಿಸುವಂತೆ 'ವರ್ಣಗಳ ಮಾಲೆ' ವರ್ಣಮಾಲೆಯಾಗಿದೆ. ಇದಕ್ಕಿರುವ ಇನ್ನೊಂದು ಪಾರಿಭಾಷಿಕ ಹೆಸರು ವರ್ಣಸಮಾಮ್ನಾಯ ಎಂಬುದಾಗಿದೆ. ಪಾಣಿನಿಯು 'ವರ್ಣಸಮಾಮ್ನಾಯ' ಎಂಬ ಪರಿಭಾಷೆಯನ್ನು ಬಳಸಿದ್ದನು. ವರ್ಣಮಾಲೆಯೆನ್ನುವುದು ಪಾಣಿನಿಯ ನಂತರದ ಪರಿಭಾಷೆಯಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ವರ್ಣಮಾಲೆಯರಚನೆಯ ಕುರಿತುಅನೇಕ ವಾದವಿವಾದಗಳು ನಡೆದಿರುವುದು ಕಂಡುಬರುತ್ತದೆ. ಅಂದರೆ ವರ್ಣಮಾಲೆಯಲ್ಲಿ ಯಾವಯಾವ ವರ್ಣಗಳಿಗೆ ಅವಕಾಶ ಕಲ್ಪಿಸಿಕೊಡಬೇಕು? ಅದು ಎಷ್ಟರಮಟ್ಟಿಗೆ ಅರ್ಥಪೂರ್ಣವಾದುದು? ಎಂಬ ಬಗ್ಗೆ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ವ್ಯಾಕರಣ ಮತ್ತು ಭಾಷಾವಿಜ್ಞಾನಿಗಳಲ್ಲಿ ತಮ್ಮದೇ ಆದ ಅಭಿಪ್ರಾಯಗಳು ವ್ಯಕ್ತವಾಗುತ್ತ ಬಂದಿವೆ. ಮುಖ್ಯವಾಗಿ ಎರಡು ಶೀರ್ಷಿಕೆಗಳಲ್ಲಿ ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## 6.2 ಸಂಸ್ಕೃತದ ವಿವಿಧವರ್ಣಮಾಲೆಗಳು

ಭಾರತೀಯಭಾಷಾ ಪರಂಪರೆಯ ಶ್ರೀಮಂತಿಕೆಯಲ್ಲಿ ಸಂಸ್ಕೃತಭಾಷಾ ಪ್ರಭಾವ ಅಪಾರವಾದುದು. ಬಹುತೇಕ ಭಾರತೀಯ ಭಾಷೆಗಳ ಸಾಹಿತ್ಯ ಮತ್ತು ವ್ಯಾಕರಣಗ್ರಂಥಗಳೆಲ್ಲ ಸಂಸ್ಕೃತಭಾಷೆಯಸಾಹಿತ್ಯ ಮತ್ತು ವ್ಯಾಕರಣಗ್ರಂಥಗಳ ಆಧಾರದಲ್ಲಿಯೇ ರಚಿತವಾಗಿವೆ. ಸಂಸ್ಕೃತಭಾಷೆಯ ವ್ಯಾಕರಣಗ್ರಂಥಗಳು

ಚಿರಸ್ಥಾಯಿಯಾಗುವಂತೆ ಮಾಡಿದ್ದು ಸಂಸ್ಕೃತದ ಪ್ರಸಿದ್ಧ ವ್ಯಾಕರಣಕಾರ ಪಾಣಿನಿ. ಏಕೆಂದರೆ ನಮಗೆ ದೊರೆತ ಅತ್ಯಂತ ಶಾಸ್ತ್ರೀಯ, ಪರಿಪೂರ್ಣ, ವ್ಯಾಕರಣದ ಉಲ್ಲೇಖ ಪಾಣಿನಿಯ 'ಅಷ್ಟಾಧ್ಯಾಯಿ' ಮತ್ತು ಆತನದೇ ಆದ 'ಶಿಕ್ಷಾಗ್ರಂಥ'. ಸುಮಾರು 2500 ವರ್ಷ ಗತಿಸಿದರೂ ವರ್ಣಗಳ ಸ್ವರೂಪ ಮತ್ತು ಬಳಕೆಯಲ್ಲಿ ವ್ಯತ್ಯಾಸಕಂಡುಬರದೇ ಇರುವದು ಪಾಣಿನಿಯ ಭಾಷಾ ಚಿಂತನೆಯ ವೈಖರಿಯನ್ನು ತೋರಿಸುತ್ತದೆ. ವರ್ಣ-ಸಮಾಮ್ನಾಯದ ಉಲ್ಲೇಖ ನಮಗೆ ಮೊದಲು ದೊರಕುವುದು 'ಪಾಣಿನಿಯ ಉತ್ಕೃಷ್ಟಗ್ರಂಥವಾದ ಅಷ್ಟಾಧ್ಯಾಯಿಯಲ್ಲಿ. ಇದನ್ನು ಪಾಣಿನಿಯ 'ಮಾಹೇಶ್ವರ ಸೂತ್ರಗಳೆಂದು' ಕರೆಯಲಾಗಿದೆ. ಸ್ವತಃ ಶಿವ/ದೇವರಿಂದಲೇ ಅಕ್ಷರಗಳು/ಧ್ವನಿಗಳು ಹುಟ್ಟಿಕೊಂಡಿವೆ ಎಂಬುದನ್ನು ಆತನಮತವಾಗಿದೆ.

**ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಹೇಳಿದ ಮಾಹೇಶ್ವರ ಸೂತ್ರಗಳು ಈ ಕೆಳಕಂಡಂತಿವೆ.**[216]

1. ಅ.ಇ.ಉಣ್
2. ಋ,ಲೃಕ್
3. ಏ,ಓಙ್
4. ಐ,ಔಚ್
5. ಹ,ಯ,ವ,ರ,ಟ್
6. ಲಣ್
7. ಞ,ಮ,ಙ,ಣ,ನಮ್,
8. ಝ,ಭ,ಞ್
9. ಘ,ಢ,ಧ,ಷ್
10. ಜ,ಬ,ಗ,ಡ,ದ,ಶ್
11. ಖ,ಫ,ಛ,ಠ,ಥ,ಚ,ಟ,ತವ್

[216] ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು, ಪ್ರಥಮ ಮುದ್ರಣ 1965, ಪುಟ ಸಂಖ್ಯೆ :56, ಎರಡನೇ ಪ್ಯಾರಾ

12. ಕ,ಪ,ಯ್

13. ಶ,ಷ,ಸ,ರ್

14. ಹಲ್

ಒಟ್ಟಾರೆ 14 ಸೂತ್ರಗಳನ್ನು ಹೇಳಿದ್ದಾನೆ. ಈ ಸೂತ್ರಗಳ ಪ್ರತಿಯೊಂದು ಸೂತ್ರದ ಕೊನೆಯಲ್ಲಿರುವ ವರ್ಣಗಳು ಇತ್[217] ಸಂಜ್ಞೆಯನ್ನು ಹೊಂದುತ್ತವೆ. ಅಂದರೆ ಪ್ರತಿ ಸೂತ್ರದ ಕೊನೆಯಲ್ಲಿರುವ ವ್ಯಂಜನಾಕ್ಷರಗಳಮನ್ನು ವರ್ಣ ಸಂಖ್ಯಾಲೆಕ್ಕಾಚಾರದಲ್ಲಿ ಕೈಬಿಬಿಡಬೇಕು ಎಂದು ಹೇಳಿದ್ದಾನೆ. ಒಟ್ಟು 43 ಪ್ರಧಾನ ವರ್ಣಗಳನ್ನು ಹೇಳಿದ್ದಾನೆ. ಅಂದರೆ ಒಟ್ಟು 9 ಸ್ವರಗಳು ಮತ್ತು 34 ವ್ಯಂಜನಗಳನ್ನು ಸ್ವತಂತ್ರವರ್ಣಗಳನ್ನಾಗಿ ಹೇಳಿದ್ದಾನೆ. ಒಟ್ಟಾರೆ 43 ವರ್ಣಗಳನ್ನು ಹೇಳಿ ಅವು ಹ್ರಸ್ವ,ದೀರ್ಘ,ಪ್ಲುತ ಇತ್ಯಾದಿ ಭೇದಗಳಿಂದ 83 ಅಥವಾ 92 ರೂಪದಲ್ಲಿ ಬಳಕೆಯಾಗುತ್ತವೆ ಎನ್ನುವುದನ್ನು ಸವಿಸ್ತಾರವಾಗಿ ವಿವರಿಸಿದ್ದಾನೆ.

ಪಾಣಿನಿಯು ಹೇಳಿದ ವರ್ಣಮಾಲೆಯು ಅರ್ಥಪೂರ್ಣವೂ, ಔಚಿತ್ಯದಿಂದಲೂ ಕೂಡಿದೆ. ಭಾಷೆ ದೇವ ನಿರ್ಮಿತ ಎಂದು ಹೇಳಿದ್ದರೂ ಸುಮಾರು ಕ್ರಿ.ಪೂ. 2500ಗಳ ಹಿಂದೆಯೇ ಇಷ್ಟೊಂದು ವ್ಯವಸ್ಥಿತ ರೀತಿಯಲ್ಲಿ ವರ್ಣಗಳನ್ನು ಕ್ರೋಡೀಕರಿಸಿದ ಕೀರ್ತಿ ಪಾಣಿನಿಗೆ ಸಲ್ಲುತ್ತದೆ. ಸಂಸ್ಕೃತ ವರ್ಣಮಾಲೆಯಲ್ಲಿ ಈತ ಹೇಳಿದ ಎಲ್ಲ ಅಕ್ಷರಗಳು ಯಥಾವತ್ತಾಗಿ ಇಂದಿಗೂ ಹಾಗೆಯೇ ಉಳಿದುಕೊಂಡು ಬಂದಿವೆ. ಸಂಸ್ಕೃತ ಪ್ರಭಾವದಿಂದಾಗಿ ಕನ್ನಡಭಾಷೆಯು ದ್ರಾವಿಡಪರಿವಾರದ ಭಾಷೆಯಾಗಿದ್ದರೂ ಪಾಣಿನಿಯು ಹೇಳಿದ ವರ್ಣಗಳನ್ನು ತನ್ನ ವರ್ಣಮಾಲೆಯಲ್ಲಿ ಧರಿಸಿಕೊಂಡು ಬರುತ್ತಿದೆ. ಅದರ ಜೊತೆಗೆ ಕನ್ನಡ ವರ್ಣಮಾಲೆಯಲ್ಲಿ ಕೆಲವು ಪ್ರಾದೇಶಿಕ ವರ್ಣಗಳು ಸೇರಿ ಕನ್ನಡವರ್ಣಮಾಲೆ ಸಿದ್ಧವಾಯಿತು.

---

217 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜೆ.ಕೃಷ್ಣಮೂರ್ತಿ ಭಟ್ಟ,ಅಲಂಕಾರ ಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರ ಪ್ರಿಂಟರ್ಸ ಬಸವೇಶ್ವರ ರಸ್ತೆ ಮೈಸೂರು. ಪ್ರಥಮ ಮುದ್ರಣ 1965, ಪುಟ ಸಂಖ್ಯೆ :3 ಎರಡನೇ ಪ್ಯಾರಾ ಒಂದನೇ ಸಾಲು.

**ಪಾಣಿನಿಯು ಶಿಕ್ಷಾಗ್ರಂಥದಲ್ಲಿ ಹೇಳಿದ ವರ್ಣಗಳು**

ಹ್ರಸ್ವಾದಿ ಭೇದೈಶ್ಚತ್ವಾರಃ ಪ್ರಥಮಾ ದ್ವಾದಶಾಸ್ಮೃತಾಃ

ಲೃಕಾರೋ ಹೃಸ್ವವಿವೈಶ್ಚಅಷ್ಟೌ ಸ್ವರಾ ಏಕವಿಂಶತಿಃ[218]

**ಸ್ವರಗಳು 21 :**

ಅ,ಆ,ಆ3 ಇ,ಈ,ಈ3,ಉ,ಊ,ಊ, ಋ,ೠ,

ೠ3,ಲೃ,ಏ,ಏ3,ಓ,ಓ3,ಐ,ಐ3,ಔ,ಔ

ಅಂದರೆ ಅ,ಇ,ಉ,ಋ, ಕಾರಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹ್ರಸ್ವ ದೀರ್ಘ ಪ್ಲುತ ಮೂರು ಭೇದಗಳನ್ನು ಹೇಳಿದ್ದಾನೆ. ಲೃ ಕಾರಕ್ಕೆ ಹ್ರಸ್ವಮಾತ್ರ, ಏ,ಓ,ಐ,ಔ ವರ್ಣಗಳಿಗೆ ಪ್ರತ್ಯೇಕ ದೀರ್ಘ ಪ್ಲುತ ಭೇದಗಳನ್ನು ಹೇಳಿದ್ದಾನೆ.

**ಸ್ಪರ್ಶವರ್ಣಗಳು** 25: ಕವರ್ಗ,ಚವರ್ಗ,ಟವರ್ಗ, ತವರ್ಗ,ಪವರ್ಗಗಳು,

**ಅಂತಸ್ಥ ವರ್ಣಗಳು** 4: ಯ,ರ,ಲ,ವ

**ಊಷ್ಮವರ್ಣಗಳು** 4: ಶ,ಷ,ಸ,ಹ,

**ಯಮ 4**: ಕುಂ.ಖುಂ,ಗುಂ,ಘುಂ.

**ಅನುಸ್ವಾರ 1,** ವಿಸರ್ಗ 1, ಜಿಹ್ವಾಮೂಲೀಯ1, ಉಪಧ್ಮಾನೀಯ 1,ದುಸ್ಪೃಷ್ಟ 1[219]

ಇವುಗಳನ್ನೇ ಶ್ಲೋಕ ರೂಪದಲ್ಲಿ

---

218 "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 71 ರಲ್ಲಿ ಅಡಿ ಟಿಪ್ಪಣಿ 3.

219 ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಏ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಭೂಮಿಕಾ ಭಾಗ, ಪುಟ ಸಂಖ್ಯೆ: 12, ಎರಡನೇ ಪ್ಯಾರಾ. ಮೊದಲ ಸಾಲು.

ಸ್ವರಾ ವಿಂಶತಿ ರೇಕಶ್ಚ ಸ್ಪರ್ಶಾನಾಂ ಪಂಚವಿಂಶತಿಃ
ಯಾದಯಶ್ಚ ಸ್ಮೃತಾಹ್ಯಷ್ಟೌ ಚತ್ವಾರಶ್ಚ ಯಮಾಃ ಸ್ಮೃತಾಃ
ಅನುಸ್ವಾರೋ ವಿಸರ್ಗಶ್ಚ :ಕ ,:ಪೌ ಚಾಪಿ ಪರಾಶ್ರಿತೌ
ದುಃಸ್ಪೃಷ್ಟಶ್ಚೇತಿ ವಿಜ್ಞೇಯೋ ಲೃಕಾಃ ಪ್ಲುತ ಏವಚ[220]

ಎಂದು ಹೇಳಿದ್ದಾನೆ.

**ಇವುಗಳಿಗೆ ಪಂಜಿಕಾ ಭಾಷ್ಯದಲ್ಲಿ[221]**

ಹೃಸ್ವಾದಿ ಬೇದೈಶ್ಚತ್ವಾರಃ ಪ್ರಥಮಾ ದ್ವಾದಶಸ್ಮೃತಾಃ
ಲೃಕಾರೋ ಹ್ರಸ್ವೈವೈಚೋಽಷ್ಟೌ ಸ್ವರಾ ಏಕವಿಂಶತಿಃ
ಪಂಚವಿಂಶತಿ ರಷ್ಟಾಭ್ಧಿಃ ಸ್ಪರ್ಶಾಃಸ್ಯುಯಾದಯೋ ಯಮಾಃ
ಅನುಸ್ವಾರೋ ವಿಸರ್ಗಶ್ಚ ಕ ಪೌ ಪ್ಲುತ ಲೃಕಾರಕಃ
ಷಷ್ಟಿರೇವಂ ವರ್ಣಾಃಸ್ಯುರ್ಹ್ರಸ್ವದೀರ್ಘಾಧಿ ಭೇದತಃ
ಅನುಸ್ವಾರದ್ವಯಾದ್ ವರ್ಣಾಃ ಚತುಃಷಷ್ಟಿರಿತೀರಿತಾಃ

ಅಂದರೆ ಲೃಕಾರಕ್ಕೆ ಪ್ಲುತ ಭೇದವಿದೆಯೇ ಅಥವಾ ಇಲ್ಲವೇ ಎನ್ನುವಲ್ಲಿ ಚರ್ಚೆ ನಡೆದಿರುವುದು ಕಂಡುಬರುತ್ತದೆ. ಹಾಗೆಯೇ ಪಂಜಿಕಾ ಭಾಷ್ಯದಲ್ಲಿ ಅನುಸ್ವಾರವನ್ನು ಹ್ರಸ್ವ ಮತ್ತು ದೀರ್ಘಗಳನ್ನಾಗಿ ವಿಭಜಿಸಿರುವುದು ಕಂಡುಬರುತ್ತದೆ.

**ಯಾಜ್ಞವಲ್ಕ್ಯ ಶಿಕ್ಷಾ[222]**

---

220 "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ".ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ :75 ರಲ್ಲಿ ಎರಡನೇ ಪ್ಯಾರಾ.

221 ಅದೇ, ಮೂರನೇ ಪ್ಯಾರಾ.

222 ಅದೇ, ಪುಟ ಸಂಖ್ಯೆ : 247, ಮೊದಲ ಪ್ಯಾರಾ.

ಯಾಜ್ಞವಲ್ಕ್ಯ ಶಿಕ್ಷಾದಲ್ಲಿ ಪಾಣಿನಿ ಶಿಕ್ಷಾದಲ್ಲಿ ಹೇಳಿದಂತೆ ವರ್ಣಗಳ ಸಂಖ್ಯೆ 63 ಅಥವಾ 64 ಎಂದು ಸ್ಪಷ್ಟವಾಗಿ ಹೇಳಿಲ್ಲ. ಸ್ವರಗಳ ಸಂಖ್ಯೆಯನ್ನು ಹೇಳಿಲ್ಲ ಆದರೆ ವ್ಯಂಜನಗಳನ್ನು ಕುರಿತು ತ್ರಯಸ್ತ್ರಿಂಶದ್ ವ್ಯಂಜನಾನಿ,[223] ಸ್ಪರ್ಶಾ, ಅಂತಸ್ಥಾ ಊಷ್ಮಾಣಶ್ಚೇತಿ ಎಂದು ಹೇಳಿರುವುದರಿಂದ ಒಟ್ಟು ವ್ಯಂಜನಗಳ ಸಂಖ್ಯೆ 33 ಎಂದು ಉಲ್ಲೇಖವಾಗಿದೆ. ಈ ಹಿನ್ನೆಲೆಯಲ್ಲಿ ಯಾಜ್ಞವಲ್ಕ್ಯ ಶಿಕ್ಷಾದಲ್ಲಿ ಹೇಳಿದ ವ್ಯಂಜನಾಕ್ಷರಗಳು:

**ಸ್ಪರ್ಶವರ್ಣಗಳು** 25: ಕವರ್ಗ,ಚವರ್ಗ,ಟವರ್ಗ, ತವರ್ಗ,ಪವರ್ಗಗಳು,

**ಅಂತಸ್ಥ ವರ್ಣಗಳು** 4: ಯ,ರ,ಲ,ವ

**ಊಷ್ಮವರ್ಣಗಳು** 4: ಶ,ಷ,ಸ,ಹ.

ಶಿಕ್ಷಾಗ್ರಂಥಗಳಲ್ಲಿ ಅನೇಕಶಿಕ್ಷಾ ಗ್ರಂಥಗಳು ಸಂಸ್ಕೃತಭಾಷೆಯಲ್ಲಿ ಕಂಡು ಬರುತ್ತವೆ. ಆದರೆ ಇವುಗಳಲ್ಲಿ ಪಾಣಿನಿ ಮತ್ತು ಯಾಜ್ಞವಲ್ಕ್ಯ ಶಿಕ್ಷಾಗ್ರಂಥಗಳು ಮುಖ್ಯವಾದವಾಗಿವೆ. ಆದ್ದರಿಂದ ಅವುಗಳನ್ನಿಲ್ಲಿ ಆಯ್ಕೆಮಾಡಲಾಗಿದೆ. ಶಿಕ್ಷಾಗ್ರಂಥಗಳ ತರುವಾಯ ಬಂದತಹವುಗಳು ಪ್ರಾತಿಶಾಖ್ಯಗಳು ಇವು ಶಿಕ್ಷಾಗ್ರಂಥಗಳ ಮುಂದುವರಿದ ಭಾಗಗಳಾಗಿವೆ. ಭಾಷಾವಿಜ್ಞಾನಿಗಳಮತದಂತೆ ಶಿಕ್ಷಾಗ್ರಂಥವು ಸಾಮನ್ಯ ಧ್ವನಿವಿಜ್ಞಾನವಾದರೆ (ಜನರಲ್ ಫೋನೆಟಿಕ್ಸ್) ಪ್ರಾತಿಶಾಖ್ಯಗಳು ಆನ್ವಯಿಕ ಧ್ವನಿವಿಜ್ಞಾನಗಳಾಗಿವೆ. (ಅಪ್ಲೈಡ್ ಫೋನೆಟಿಕ್ಸ ಗಳಾಗಿವೆ.). ಪ್ರಾತಿಶಾಖ್ಯಗಳಲ್ಲಿ ಅನೇಕಶಾಖೆಗಳಿರುವುದು ಕಂಡುಬಂದಿದೆ. ಆಯಾ ಶಾಖಾನುಸಾರ ಬೇರೆಬೇರೆ ಪ್ರಾತಿಶಾಖ್ಯಗ್ರಂಥಗಳು ಸಂಗ್ರಹಿತವಾಗಲ್ಪಟ್ಟಿದೆ. ಮುಖ್ಯವಾಗಿ 'ಋಕ್'ಪ್ರಾತಿಶಾಖ್ಯ, ತೈತ್ತಿರೀಯಪ್ರಾತಿಶಾಖ್ಯ, ಶುಕ್ಲಯಜುಃ ಪ್ರಾತಿಶಾಖ್ಯ, ಶೌನಕೀಯಪ್ರಾತಿಶಾಖ್ಯ, ಅಥರ್ವ ಪ್ರಾತಿಶಾಖ್ಯ , ಸಾಮ ಪ್ರಾತಿಶಾಖ್ಯ ಇತ್ಯಾದಿ. ಇವುಗಳಲ್ಲಿ ಪರಿಪೂರ್ಣವಾದ ಮತ್ತು ಅತ್ಯಂತವಿಶದವಾಗಿ ವಿವರಿಸಲ್ಪಟ್ಟದ್ದು 'ಋಕ್' ಪ್ರಾತಿಶಾಖ್ಯವಾಗಿದೆ.

**'ಋಕ್ಪ್ರಾತಿಶಾಖ್ಯ'ದಲ್ಲಿ ವರ್ಣಮಾಲೆ** [224]

---

[223] **ಅದೇ, ಮೂರನೇ ಪ್ಯಾರಾ.**

[224] **ಅದೇ, ಪುಟ ಸಂಖ್ಯೆ : 247, ಎರಡನೇ ಪ್ಯಾರಾ.**

'ಋಕ್‌ಪ್ರಾತಿಶಾಖ್ಯ'ಕ್ಕೆ ವೃತ್ತಿಯನ್ನು ಬರೆದ ವಿಷ್ಣುಮಿತ್ರನ ಪ್ರಕಾರ ವರ್ಣಮಾಲೆ ಈ ಕೆಳಗಿನಂತಿದೆ.

ಅ,ಋ,ಇ,ಉ,

ಏ,ಓ,ಐ,ಔ

ಲೃ

ಆ,ೠ,ಈ,ಊ, ಲೃ

ಕ ವಗ, ಚ ವರ್ಗ, ಟ ವರ್ಗ, ತ ವರ್ಗ,ಪ ವರ್ಗ ಒಟು 25 ವರ್ಣಗಳು.

ಅಂತಸ್ಥ ಯ,ರ,ಲ,ವ 4

ಊಷ್ಮ ಹ,ಶ,ಷ,ಸ

ಅಂ,ಅಃ, ಜಿಹ್ವಾಮೂಲೀಯ, ಉಪಧ್ಮಾನೀಯ

ಒಟ್ಟು 51 ವರ್ಣಗಳನ್ನು ಲೆಕ್ಕ ಹಾಕಲಾಗಿದೆ.

**ಶೌನಕ ಎಂಬವನು 'ಋಕ್‌ಪ್ರಾತಿಶಾಖ್ಯ'ಕ್ಕೆ ಬರೆದ ವೃತ್ತಿ ಪ್ರಕಾರ ವರ್ಣಮಾಲೆ[225]**

ಎಂಟು ಸಮಾನ ವರ್ಣಗಳು ಅ, ಆ,ಋ,ೠ,ಇ,ಈ,ಉ,ಊ,

ನಾಲ್ಕು ಸಂಧ್ಯಕ್ಷರಗಳು ಏ,ಓ,ಐ,ಔ

ಉಭಯ ವ್ಯಂಜನ ಅನುಸ್ವಾರ

ಉಳಿದವು ವ್ಯಂಜನ ಬಗಳು

ಕ ವರ್ಗ,ಚ ವರ್ಗ, ಟ ವರ್ಗ,ತ ವರ್ಗ, ಪ ವರ್ಗ= 25 ವರ್ಣಗಳು

ಅಂತಸ್ಥ ಯ,ರ,ಲ,ವ 4

ಊಷ್ಮ ಹ,ಶ,ಷ,ಸ ಅಃ, ಜಿಹ್ವಾನಮೂಲೀಯ, ಉಪಧ್ಮಾನೀಯ

ಒಟ್ಟಿಗೆ 49 ವರ್ಣಗಳಾದವು

---

[225] **ಅದೇ, ಪುಟ ಸಂಖ್ಯೆ : 247, ಎರಡನೇ ಪ್ಯಾರಾ.**

ವಿಷ್ಣುಮಿತ್ರನ ವೃತ್ತಿಯಲ್ಲಿ 'ಲೃ' ಕಾರದ ಹ್ರಸ್ವ ಮತ್ತ ದೀರ್ಘಭೇದಗಳನ್ನು ಲೆಕ್ಕಾಚಾರ ಮಾಡಿ ಒಟ್ಟಿಗೆ 51 ವರ್ಣಗಳ ಲೆಕ್ಕಾಹಾಕಲ್ಪಟ್ಟಿದ್ದರೆ ಕೌಶಿನಕ ಮತದ ಪ್ರಕಾರ 'ಲೃ' ಕಾರ ವನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ. ಆಗಿನಕಾಲದಲ್ಲಿ 'ಲೃ' ಕಾರದ ಕುರಿತು ವಿಭಿನ್ನತೆರನಾದ ನಿಲುವುಗಳು ಹೊರ ಹೊಮ್ಮುತ್ತಿದ್ದವು ಎಂಬುದಾಗಿ ಕಂಡುಬರುತ್ತದೆ. ಪ್ರಾತಿಶಾಖ್ಯ ಗ್ರಂಥಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಿದಾಗ ಪ್ಲುತ, ಯಮ, ದುಸ್ಪೃಷ್ಟ[226] ವರ್ಣಗಳ ಉಲ್ಲೇಖ ಕಂಡುಬರುವುದಿಲ್ಲ. ಶೌನಕನು ವರ್ಣಮಾಲೆಯನ್ನು ಮೊದಲು ಮೂರು ವಿಭಾಗ ಮಾಡಿದ್ದಾನೆ. ಅವುಗಳೆಂದರೆ ಸ್ವರ, ಉಭಯಸಾಧಾರಣ ಮತ್ತು ವ್ಯಂಜನಗಳು.

## ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಉಲ್ಲೇಖಿತವಾದ ವರ್ಣಮಾಲೆ[227]

ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಈ ಕೆಳಗಿನಂತೆ ವರ್ಣಮಾಲೆ ಉಲ್ಲೇಖವಾಗಿದೆ.

ಸ್ವರಗಳು 16.[1]

ಸಮಾನಾಕ್ಷರಗಳು .9 ಅ,ಆ,ಆ3, ಇ,ಈ,ಈ3, ಉ,ಊ,ಊ3,

ಋ,ೠ,ಲೃ, ಏ,ಐ,ಓ,ಔ ಇವುಗಳಲ್ಲಿ ಸಮಾನಾಕ್ಷರಗಳು .9 ಇವೆ.

ವ್ಯಂಜನಗಳು 35 ಇವುಗಳಲ್ಲಿ

ಸ್ಪರ್ಶಗಳು ಕವರ್ಗ,ಚ ವರ್ಗ, ಟ ವರ್ಗ,ತ ವರ್ಗ,

ಪ ವರ್ಗ, ಒಟು 25 ವರ್ಣಗಳು

ಅಂತಃಸ್ಥ ಯ,ರ,ಲ,ವ 4

---

[226] ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990, ಪುಟ ಸಂಖ್ಯೆ: 12 ಭೂಮಿಕಾ ಭಾಗ

[227] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ :176 ರಲ್ಲಿ ಒಂದನೇ ಪ್ಯಾರಾ.

ಊಷ್ಮ : ಹ,ಶ,ಷ,ಸ ಜಿಹ್ವಾಮೂಲೀಯ-

ಉಪಧ್ಮಾನೀಯ 6 ವರ್ಣಗಳು

ಒಟ್ಟಿಗೆ 51 ವರ್ಣಗಳು ತೈತ್ತಿರೀಯ ಪ್ರಾತಿಶಾಖ್ಯದಲ್ಲಿ ಉಲ್ಲೇಖಗೊಂಡಿದೆ.

ಆದರೆ ಈ ತೈತ್ತಿರೀಯ ಪ್ರಾತಿಶಾಖ್ಯಕ್ಕೆ ವ್ಯಾಖ್ಯಾನ ಬರೆದ 'ಮಾಹಿನ' ಎಂಬವನು ಯಮಗಳನ್ನು ಕಂ,ಖಂ,ಗಂ,ಘಂ, ನಾಲ್ಕು ಅಕ್ಷರಗಳನ್ನು ಸೇರಿಸಿ 55 ವರ್ಣಗಳನ್ನು ಹೇಳಿದ್ದಾನೆ. ಆದರೆ ಮೂಲತಃ ವರ್ಣಮಾಲೆಯಲ್ಲಿ ಇರುವ ವರ್ಣಗಳ ಸಂಖ್ಯೆ 51 ಮಾತ್ರ. ಅದಲ್ಲದೇ ತೈತ್ತರೀಯ ಪ್ರಾತಿಶಾಖ್ಯ ಗ್ರಂಥದಲ್ಲಿ ಅನುಸ್ವಾರ, ವಿಸರ್ಗಗಳ ಮತ್ತು ನಾಲ್ಕು ಯಮಾಕ್ಷರಗಳನ್ನು ಉಲ್ಲೇಖಮಾಡದಿರುವುದು ಗಮನಿಸಬೇಕಾದ ಅಂಶವಾಗಿದೆ. ಆಗಿನ ಕಾಲಕ್ಕೆ ಇವುಗಳ ಬಳಕೆಯ ಬಗ್ಗೆ ಸಮಸ್ಯೆ ಇತ್ತೆಂಬುದಕ್ಕೆ ಸಾಕ್ಷಿಯನ್ನು ಒದಗಿಸುತ್ತದೆ.

## ಶುಕ್ಲಯಜುಃ ಪ್ರಾತಿಶಾಖ್ಯದಲ್ಲಿ ವರ್ಣಮಾಲೆ[228]

ಶುಕ್ಲಯಜುಃ ಪ್ರಾತಿಶಾಖ್ಯದಲ್ಲಿ ಈ ಕೆಳಗಿನಂತೆ ವರ್ಣಮಾಲೆ ಇದೆ.

ಸ್ವರಗಳು ಅ,ಆ,ಆ3, ಇ,ಈ,ಈ3, ಉ,ಊ,ಊ3,

ಋ,ೠ, ೠ3, ಌ,ೡ, ೡ3, =15

ಸಂಧ್ಯಕ್ಷರಗಳು: ಏ, ಏ3,ಐ, ಐ3, ಓ, ಓ3, ಔ,ಔ3 =8

ವ್ಯಂಜನಗಳು 33 ಇವುಗಳಲ್ಲಿ

ಸ್ಪರ್ಶಗಳುಕವರ್ಗ,ಚವರ್ಗ,ಟವರ್ಗ,ತ ವರ್ಗ, ಪ ವರ್ಗ, ಒಟು 25 ವರ್ಣಗಳು

ಅಂತಃಸ್ಥ ಯ,ರ,ಲ,ವ 4

ಊಷ್ಮ ಹ,ಶ,ಷ,ಸ 4

ಅಯೋಗವಾಹಗಳು: ಜಿಹ್ವಾಮೂಲೀಯ, ಉಪಧ್ಮಾನೀಯ

---

[228] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮೀಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 247 ರಲ್ಲಿ ಒಂದನೇ ಪ್ಯಾರಾ.

ಯಮ 4: ಕುಂ.ಖುಂ,ಗುಂ,ಘುಂ.

ಅನುಸ್ವಾರ 1 ವಿಸರ್ಗ 1 ಹುಂ ನಾಸಿಕ್ಯ 1

ಒಟ್ಟು 65 ಅಕ್ಷರಗಳನ್ನು ಹೇಳಲಾಗಿದೆ. ಇವುಗಳ ಜೊತೆಗೆ ಳ ಮತ್ತು ಹ್ ಸೇರಿಸಿ ಒಟ್ಟು 67 ಅಕ್ಷರಗಳು ಎನ್ನುವ ವಾದವೂ ಇದೆ.

## ಸಾಮ ಪ್ರಾತಿಶಾಖ್ಯದಲ್ಲಿ ವರ್ಣಮಾಲೆ[229]

ಸಾಮಪ್ರಾತಿಶಾಖ್ಯವು 'ಋಕ್‌ತಂತ್ರ ವ್ಯಾಕರಣವೆಂದೂ ಕರೆಯಿಸಲ್ಪಟ್ಟಿದೆ ಇದಕ್ಕೆ ಕಾರಣ ಋಗ್ವೇದದ ಋಕ್‌ಗಳಿಗೆ ಅನುಸಾರವಾಗಿ ಸಾಮಗಾನವನ್ನು ಮಾಡಲಾಗುತ್ತದೆ. ಸಾಮ ಪ್ರಾತಿಶಾಖ್ಯದಲ್ಲಿ ವರ್ಣಸಮಾಮ್ನಾಯದಕ್ರಮ ಉಳಿದ ಪ್ರಾತಿಶಾಖ್ಯಗಳಿಗಿಂತ ಭಿನ್ನವಾಗಿದೆ,

ಏ,ಓ,ಐ,ಔ,ಆ,ಋೂ,ಲೃೂ,ಈ,ಊ,ಋ,ಲೃ,ಇ,ಉ,ಅ= 14

ಯ,ರ,ಲ,ವ 4

ಙ,ಞ,ಣ,ನ,ಮ,ಫ,ಝ,ಢ,ಧ,ಭ,ಗ,ಜ,ಡ,ದ,ಬ,ಖ,ಛ,ಠ,ಥ,ಫ,ಕ,ಚ,ಟ,ತ,ಪ= 25

ಹ,ಷ.ಶ,ಸ,=4

ಅಃ, :ಕ,ಃಪ=3

ಹುಂ,ಕುಂ.ಖುಂ,ಗುಂ,ಘುಂ,ಅಂ,ಆಂ=7

ಒಟ್ಟು 57 ವರ್ಣಗಳು.

---

229 "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 247 ರಲ್ಲಿ ಎರಡನೆಯ ಪ್ಯಾರಾ.

ಸಾಮ ಪ್ರಾತಿಶಾಖ್ಯದಲ್ಲಿ ಉಲ್ಲೇಖಿತವಾದ ವರ್ಣಮಾಲೆ ಪ್ರಾತಿಶಾಖ್ಯ ಮತ್ತು ಶಿಕ್ಷಾಗ್ರಂಥಗಳಿಗಿಂತ ವಿಭಿನ್ನವಾಗಿದೆ. ವ್ಯಂಜನಗಳ ಕ್ರಮದಲ್ಲಿ ಪಾಣಿನಿಯ ವರ್ಣ ಸಮಾಮ್ನಾಯ ವಿಧಾನವನ್ನು ಅನುಸರಿಸಿದಂತಿದೆ. ಸ್ವರಗಳಕ್ರಮದಲ್ಲಿ ತದ್ವಿರುದ್ಧವಾದ ಕ್ರಮವನ್ನು ಅನುಸರಿಸಿದೆ. ಪಾಣಿನಿಯು ಹೇಳಿದ ಪ್ಲುತ, ಳ, ಹಾಗು ಹ, ವರ್ಣಗಳನ್ನು ಈ ವರ್ಣಮಾಲೆಯಲ್ಲಿ ಉಲ್ಲೇಖಿಸಿರುವುದಿಲ್ಲ.

## ಅಥರ್ವ ಪ್ರಾತಿಶಾಖ್ಯದಲ್ಲಿ ವರ್ಣಮಾಲೆ [230]

ಅಥರ್ವ ಪ್ರಾತಿಶಾಖ್ಯದಲ್ಲಿ ವರ್ಣಗಳ ಸಂಖ್ಯೆಯನ್ನು ನಿರ್ದಿಷ್ಟವಾಗಿ ಎಲ್ಲಿಯೂ ಉಲ್ಲೇಖಿಸಿರುವುದಿಲ್ಲ. ಇದರ ಪ್ರಾತಿಶಾಖ್ಯ ಗ್ರಂಥವಾದ 'ಚತುರಧ್ಯಾಯಿಕಾ'ದಲ್ಲಿ ಈ ಕೆಳಗಿನಂತೆ ವರ್ಣಗಳ ಕುರಿತು ಚರ್ಚೆಬಂದಿದೆ.

ಅ,ಕವರ್ಗ,ಹ,ವಿಸರ್ಗ= 8

ಜಿಹ್ವಾಮೂಲೀಯ=1

ಇ,ಚವರ್ಗ,ಯ,ಶ=8

ಋ,ಟವರ್ಗ,ರೇಫ,ಷ=8

ಲೃ,ತವರ್ಗ,ಲ,ಸ=8

ಓಷ್ಠ್ಯ(ಉ,ಪವರ್ಗ,ವ,ಉಪಧ್ಮಾನೀಯ=8)?

ನಾಸಿಕ್ಯ: ( ನಾಲ್ಕು ಯಮಗಳು, ಅನುಸ್ವಾರ ಅನುನಾಸಿಕ =6)?

ಹೀಗೆ ಸಂಸ್ಕೃತ ವರ್ಣಮಾಲೆಯಲ್ಲಿ ವಿವಿಧ ಬಗೆಯ ಶಾಖೆಗಳಿಗನುಸಾರ ಅನೇಕ ವೈವಿಧ್ಯತೆಗಳು ಕಂಡುಬಂದರೂ ಬಹುತೇಕ ವರ್ಣಗಳು ಎಲ್ಲ ವರ್ಣಮಾಲೆಗಳಲ್ಲಿ

---

[230] "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ-ರಾಷ್ಟ್ರಭಾಷಾ-ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977 ಪುಟ ಸಂಖ್ಯೆ : 247 ರಲ್ಲಿ ಮೂರನೇ ಪ್ಯಾರಾ.

ಹಾಗೆಯೇ ಉಳಿದುಕೊಂಡು ಬಂದಿವೆ. ಇದಕ್ಕೆ ಕಾರಣ ಸಂಸ್ಕೃತ ಭಾಷೆಯಲ್ಲಿ ವರ್ಣಮಾಲಾ ಕಲಿಕೆಯಿಂದ ಆರಂಭಿಸಿ ಪ್ರತಿಯೊಂದು ವಿಚಾರವನ್ನು ಚರ್ಚಿಸುವಾಗಲೂ ಭಾಷೆಯ ಉಚ್ಚಾರಣೆಗೆ ಅತ್ಯಂತ ಹೆಚ್ಚಿನ ಪ್ರಾಶಸ್ತ್ಯನೀಡಿರುವುದಾಗಿದೆ.

## 6.3 ಕನ್ನಡದ ವಿವಿಧವರ್ಣಮಾಲೆಗಳು

ಕನ್ನಡಭಾಷೆ ದ್ರಾವಿಡ ಪರಿವಾರದ ಭಾಷೆಯಾಗಿದೆ. ಆದಾಗ್ಯೂ ಕನ್ನಡದ ಸಾಹಿತ್ಯ ಮತ್ತು ವ್ಯಾಕರಣ ಪರಂಪರೆಯಲ್ಲವೂ ಸಂಸ್ಕೃತಮಯವಾದುದು. ಪ್ರಾಚೀನಕಾಲದಲ್ಲಿಯೇ ಸಂಸ್ಕೃತದ ಪ್ರಭಾವಕ್ಕೆ ಒಳಗಾಗಿ ವರ್ಣಮಾಲೆಯಿಂದ ವ್ಯಾಕರಣದ ಪ್ರತಿಯೊಂದು ಅಂಶದಲ್ಲಿ ಸಂಸ್ಕೃತಕ್ಕೆ ಋಣಿಯಾಗಿದೆ. ಕನ್ನಡಭಾಷೆಯಲ್ಲಿ ದೊರೆತ ಮೊದಲಗ್ರಂಥ ಕವಿರಾಜಮಾರ್ಗ. ಇದೊಂದು ಅಲಂಕಾರಗ್ರಂಥ. ಇದರ ಆರಂಭದ ಅಧ್ಯಾಯದಲ್ಲಿ ದೋಷಾನುವರ್ಣ ನಿರ್ಣಯದಲ್ಲಿ ಭಾಷೆ ಶುದ್ಧಿಬಗ್ಗೆ ಕೆಲವು ವಿಚಾರಗಳು ಪ್ರಸ್ತಾವ ವಾಗುತ್ತವೆಯೆ ಹೊರತು ವರ್ಣಮಾಲೆಯ ಕುರಿತು ಯಾವುದೇ ಪ್ರಸ್ತಾಪ ಕಂಡುಬರುವುದಿಲ್ಲ. ಈತನಕ ದೊರೆತಿರುವ ಮಾಹಿತಿಯಂತೆ ಕನ್ನಡದ ಮೊದಲ ವ್ಯಾಕರಣಗ್ರಂಥ 'ಕರ್ನಾಟಕಭಾಷಾಭೂಷಣ'. ಇದು ಕನ್ನಡ ವ್ಯಾಕರಣವನ್ನು ಸಂಸ್ಕೃತ ಭಾಷೆಯಲ್ಲಿ ಅಥವಾ ಲಿಪಿಯಲ್ಲಿ ಬರೆದುದಾಗಿದೆ. ಇದರ ಕರ್ತೃ ನಾಗವರ್ಮನಾಗಿದ್ದಾನೆ. ಈತನದೇ ಆದ ಇನ್ನೊಂದು ಕೃತಿ 'ಕಾವ್ಯಾವಲೋಕನ' ಇದರಪ್ರಸ್ತಾವನಾಭಾಗವನ್ನು ಶಬ್ದಸ್ಮೃತಿಯೆಂದು ಕರೆದಿದ್ದಾನೆ. ಅಲ್ಲಿ ಕೆಲವು ವ್ಯಾಕರಣ ವಿಚಾರಗಳನ್ನು ಪ್ರಸ್ತಾಪಿಸುತ್ತಾನೆ.

### ನಾಗವರ್ಮನ ಶಬ್ದಸ್ಮೃತಿಯಲ್ಲಿ ವರ್ಣಮಾಲೆ [231]

ಅಕ್ಷರಗಳ ಸಂಖ್ಯೆ ಸ್ಪಷ್ಟವಾಗಿದೆಯೆ ಹೊರತು ಯಾವಯಾವ ಅಕ್ಷರಗಳನ್ನು ಸ್ವೀಕರಿಸಲಾಗಿದೆ ಎಂಬುದು ಉಲ್ಲೇಖವಾಗಿಲ್ಲ.

ಸ್ವರಗಳ ಕುರಿತಾಗಿ

"ಆದ್ಯಕ್ಷರದಿಂದ ಬರೆಪದಿನಾಲ್ಕುಂ ಸ್ವರ"[232] ಎಂದು ಹೇಳಿದ್ದಾನೆ.

---

[231] ಪ್ರಾಚೀನ ಕನ್ನಡ ವ್ಯಾಕರಣಗಳು, ಎಂ.ವಿ.ಸೀತಾರಾಮಯ್ಯ,ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮೈಸೂರು ವಿಶ್ವ ವಿದ್ಯಾಲಯ,1988, ಎರಡನೇ ಆವೃತ್ತಿ. ಪುಟ 124, ನಾಲ್ಕನೇ ಪ್ಯಾರಾ.

[232] ಅದೇ, ನಾಲ್ಕನೇ ಪ್ಯಾರಾ. ಕೊನೆಯ ಸಾಲು.

ಅಕಾರಾದಿಯಾಗಿ 14 ಸ್ವರಗಳು.

ವ್ಯಂಜನಗಳ ಕುರಿತಾಗಿಯೂ ಸ್ಪಷ್ಟ ಉಲ್ಲೇಖವಿಲ್ಲ.

ವ್ಯಂಜನಗಳು: ವರ್ಗೀಯಗಳು 25 ಮತ್ತು ಅವರ್ಗೀಯಗಳು 11

ಹೀಗೆ ಒಟ್ಟಿಗೆ 50 ವರ್ಣಗಳಿವೆ ಎಂದು ಹೇಳಿದ್ದಾನೆ.

## ಕರ್ನಾಟಕಭಾಷಾಭೂಷಣದಲ್ಲಿ ವರ್ಣಮಾಲೆ[233]

ಶಬ್ದಸ್ಮೃತಿಯಲ್ಲಿ ಪ್ರಸ್ತಾಪಿಸಿದ ವರ್ಣಮಾಲೆಗಿಂತ ಭಾಷಾಭೂಷಣದಲ್ಲಿ ಪ್ರಸ್ತಾಪಿತವಾದ ವರ್ಣಮಾಲೆ ಸ್ಪಷ್ಟವಾಗಿದೆ.

ಸ್ವರಗಳು 14

ಅ,ಆ,ಇ,ಈ,ಉ,ಊ, , ಎ,ಏ,ಐ,ಒ,ಓ,ಔ, (ಸೂತ್ರ 3)[234]

ವ್ಯಂಜನಗಳು 33

ಕಾದಯ ತ್ರಯಸ್ತ್ರಿಂಶದ್ ವ್ಯಂಜನಾನಿ[235]

ಕವರ್ಗ,ಚ ವರ್ಗ,ಟ ವರ್ಗ,ತ ವರ್ಗ,ಪ ವರ್ಗಒಟ್ಟು 25 ವರ್ಣಗಳು

ಯ,ರ,ಲ,ವ,ಸ,ಹ, ಳ,ವ,ಲ

ಅನುಸ್ವಾರ1 ವಿಸರ್ಗ1

ಒಟ್ಟು 47 ವರ್ಣಗಳನ್ನು ಹೇಳಿದ್ದಾನೆ.

## ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ವರ್ಣಮಾಲೆ

---

[233] ಪ್ರಾಚೀನ ಕನ್ನಡ ವ್ಯಾಕರಣಗಳು, ಎಂ.ವಿ.ಸೀತಾರಾಮಯ್ಯ,ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮೈಸೂರು ವಿಶ್ವ ವಿದ್ಯಾಲಯ,1988, ಎರಡನೇ ಆವೃತ್ತಿ. ಪುಟ 125, ಎರಡನೇ ಪ್ಯಾರಾ.

[234] ಅದೇ.

[235] ಅದೇ.

ಕನ್ನಡದವ್ಯಾಕರಣವನ್ನು ಕನ್ನಡಭಾಷೆಯಲ್ಲಿ ಸಮಗ್ರವಾಗಿ ವಿವರಿಸಿದಕೀರ್ತಿ ಕೇಶಿರಾಜನಿಗೆ ಸಲ್ಲುತ್ತದೆ. ಈತ ಕನ್ನಡ ವರ್ಣಮಾಲೆಯನ್ನು ಹೇಳುವಾಗ ಸಂಸ್ಕೃತವರ್ಣಮಾಲೆಯನ್ನು ಮೊದಲುಹೇಳಿ ಅನಂತರ ಕನ್ನಡವರ್ಣಮಾಲೆಯನ್ನು ಹೇಳಿದ್ದಾನೆ. ಈತ ವರ್ಣಮಾಲೆಗೆ ಶುದ್ಧಗೆ ಎಂದು ಕರೆದಿದ್ದಾನೆ.

**ಕೇಶಿರಾಜ ಹೇಳಿದ ಸಂಸ್ಕೃತ ವರ್ಣಮಾಲೆ.[236]**

**ತರದಿ ಪದಿನಾಲ್ಕಕ್ಕುಂ**
**ಸ್ವರಮಿರ್ಪತ್ತೈದು ವರ್ಣಮವು ವರ್ಗಂ ತ ।**
**ತ್ವರದೊಂಬತ್ತುಮವರ್ಗಂ**
**ಪರಿಭಾವಿಸೆ ಯೋಗವಾಹಮವು ನಾಲ್ಕೆ ಪಲಂ ॥**

**ವಿವರ: ಸ್ವರಗಳು 14**

ಅ,ಆ,ಇ,ಈ,ಉ,ಊ,ಋ ,ೠ,ಲೃ, ಲೄ,ಏ,ಐ,,ಓ,ಔ

ವರ್ಗೀಯವ್ಯಂಜನಗಳು 25

ಕವರ್ಗ,ಚ ವರ್ಗ,ಟ ವರ್ಗ,ತ ವರ್ಗ,ಪ ವರ್ಗ(ಒಟ್ಟು 25 ವರ್ಣಗಳು)

ವರ್ಗೀಯವ್ಯಂಜನಗಳು 9

ಯ,ರ,ಲ,ವ,ಶ,ಷ,ಸ,ಹ,ಳ.

ಯೋಗವಾಹಗಳು 4

ಬಿಂದು ೦ ,ವಿಸರ್ಗ ಃ, ಜಿಹ್ವಾಮೂಲೀಯ ೱಕ, ಉಪಧ್ಮಾನೀಯ ೲಪ.

ಒಟ್ಟು 52 ವರ್ಣಗಳು.

**ಕೇಶಿರಾಜ ಹೇಳಿದ ಕನ್ನಡ ಶುದ್ಧಗೆ.[237]**

**ತಿಳಿ ದೇಶೀಯಮುವ್ವೆದಂ**

---

[236] ಶಬ್ದಮಣಿದರ್ಪಣ ಸಂಗ್ರಹ,ಸಂಪಾದಕರು ಪ್ರೊ. ಬಿ.ಟಿ.ಸಾಸನೂರ ಹಾಗೂ ಡಾ. ಎಂ. ಎಂ. ಕಲಬುರ್ಗಿ,ಪ್ರಕಾಶಕರು : ಮನೋಹರ ಘಾಣೇಕರ್ ಸಮಾಜ ಪುಸ್ತಕಾಲಯ ಧಾರವಾಡ, ಪುಟ ಸಂಖ್ಯೆ: 16–17 ಸೂತ್ರ 42.

[237] ಅದೇ ಸೂತ್ರ 43

ಕಳೆ ನೀಂಋಲ್ಲವರ್ಣ ಶಷವಿಸರ್ಗಳ್ಕಿ ಬ್ಬ।
ಕ್ಷಳನಂ ಸಾಲ್ವತ್ತೇಳಾ
ಯ್ತಳೆ ಶುದ್ಧಗೆಯಚ್ಚಗನ್ನಡಕ್ಕೀ ಕ್ರಮದಿಂ ॥

**ಸ್ವರಗಳು 10**

ಅ,ಆ,ಇ,ಈ,ಉ,ಊ,ಎ,ಐ,ಓ,ಔ

ವರ್ಗೀಯವ್ಯಂಜನಗಳು 25

ಕವರ್ಗ,ಚ ವರ್ಗ,ಟ ವರ್ಗ,ತ ವರ್ಗ,ಪ ವರ್ಗ(ಒಟ್ಟು 25 ವರ್ಣಗಳು)

ಅವರ್ಗೀಯವ್ಯಂಜನಗಳು 6

ಯ,ರ,ಲ,ವ,ಸ,ಹ.

ದೇಶಿವರ್ಣಗಳು 5

ಎ,ಒ,ళ, ರಳ, ಕುಳ,

ಯೋಗವಾಹಗಳು 1

ಬಿಂದು ೦.

ಒಟ್ಟು 47 ವರ್ಣಗಳು.

**ಭಟ್ಟಾಕಳಂಕನ 'ಶಬ್ದಾನುಶಾಸನದಲ್ಲಿ' ವರ್ಣಮಾಲೆ.[238]**

ಭಟ್ಟಾಕಳಂಕನು ಕನ್ನಡವರ್ಣಮಾಲೆಯನ್ನು ಸಂಸ್ಕೃತದಲ್ಲಿವಿವರಿಸಿದ್ದಾನೆ. ಸಂಸ್ಕೃತದ ಮಾದರಿಯನ್ನು ಯಥಾವತ್ತಾಗಿ ಅನುಕರಿಸಿರುವಂತೆ ಕಂಡುಬರುತ್ತದೆ. ಈತ ಹೇಳಿದ ಕನ್ನಡವರ್ಣಮಾಲೆಯನ್ನು ಈಕೆಳಗಿನಂತೆ ಕ್ರೋಡೀಕರಿಸಬಹುದಾಗಿದೆ.

ಸ್ವರಗಳು 25

---

[238] ಪ್ರಾಚೀನ ಕನ್ನಡ ವ್ಯಾಕರಣಗಳು, ಎಂ.ವಿ.ಸೀತಾರಾಮಯ್ಯ,ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮೈಸೂರು ವಿಶ್ವ ವಿದ್ಯಾಲಯ,1988, ಎರಡನೇ ಆವೃತ್ತಿ. ಪುಟ 133, ಒಂದನೇ ಪ್ಯಾರಾ.

ಅ,ಆ,ಆ3ಇ,ಈ,ಈ3,ಉ,ಊ,ಊ3

ಋ,ೠ,ೠ3,ಌ,ಌ,ೡ,

ಎ,ಏ,ಏ3,ಒ,ಓ,ಓ3,ಏಐ,ಓ,ಓ,

ವ್ಯಂಜನಗಳು (ವರ್ಗೀಯ) 25

ಕವರ್ಗ,ಚ ವರ್ಗ,ಟ ವರ್ಗ,ತ ವರ್ಗ,ಪ ವರ್ಗಒಟ್ಟು 25 ವರ್ಣಗಳು

ಅವರ್ಗೀಯಗಳು 10,

ಯ,ವ,ರ,ಲ,ಶ,ಷ,ಸ,ಹ,ರಳ ಕುಳ.

ಯೋಗವಾಹಗಳು 4 ಅಂ,ಅಃ, ಜಿಹ್ವಾಮೂಲೀಯ, ಉಪಧ್ಮಾನೀಯ

ಒಟ್ಟು 64 ವರ್ಣಗಳನ್ನು ಹೇಳಿದ್ದಾನೆ.

## ಮೂಲದ್ರಾವಿಡ ಭಾಷೆಯಲ್ಲಿ ವರ್ಣಮಾಲೆ

ದ್ರಾವಿಡ ಭಾಷಾ ವರ್ಣಮಾಲೆ

'ದ್ರಾವಿಡಭಾಷೆಯ ವರ್ಣಮಾಲೆಯು ಮೂಲದಲ್ಲಿಹೇಗಿತ್ತು' ಎಂದು ಹೇಳುವಲ್ಲಿ ಬಹುತೇಕ ದ್ರಾವಿಡ ಭಾಷಾವಿಜ್ಞಾನಿಗಳ ಅಭಿಮತ ಒಂದೇತೆರನಾಗಿಕಾಣುತ್ತದೆ. ದ್ರಾವಿಡ ಭಾಷಾ ವರ್ಣಮಾಲೆ ಈ ಕೆಳಗಿನಂತಿದೆ.

ಸ್ವರಗಳು: 10( 5 ಹ್ರಸ್ವ+ 5ದೀರ್ಘ)[239]

ಅ,ಆ,ಇ,ಈ,ಉ,ಊ,ಎ,ಏ,ಒ,ಓ,

ವ್ಯಂಜನಗಳು ಒಟ್ಟು 16[240]

---

239 ದ್ರಾವಿಡ ಭಾಷಾವ್ಯಾಸಂಗ , ಡಾ. ಸಂಗಮೇಶ ಸವದತ್ತಿಮಠ, ರೂಪರಶ್ಮಿ ಪ್ರಕಾಶನ ಕಲ್ಬುರ್ಗಿ, ಆರನೇ ಆವೃತ್ತಿ 1996, ಪುಟ ಸಂಖ್ಯೆ 54, 15 ಮತ್ತು 16 ನೇ ಸಾಲು.

240 ದ್ರಾವಿಡ ಭಾಷಾವ್ಯಾಸಂಗ , ಡಾ. ಸಂಗಮೇಶ ಸವದತ್ತಿಮಠ, ರೂಪರಶ್ಮಿ ಪ್ರಕಾಶನ ಕಲ್ಬುರ್ಗಿ, ಆರನೇ ಆವೃತ್ತಿ 1996, ಪುಟ ಸಂಖ್ಯೆ 55, 12 ರಿಂದ 15 ನೇ ಸಾಲುಗಳು.

ಕ್,ಚ್,ಟ್,ತ್,ಪ್, ವರ್ಗೀಯ ಅನನುನಾಸಿಕಗಳು

ಬ್,ಙ್,ಮ್,ಣ್,ನ್ ಅನುನಾಸಿಕಗಳು

ಯ್,ರ್,ಲ್,ವ್,ಳ್, ಳ್. ಅವರ್ಗೀಯಗಳು.

ಒಟ್ಟಾರೆಯಾಗಿ ಕನ್ನಡ ಭಾಷೆಯ ವರ್ಣಮಾಲೆಯು ನಡೆದು ಬಂದ ದಾರಿಯನ್ನು ಗಮನಿಸಿದಾಗ ಸಂಸ್ಕೃತದ ಪಡಿಯಚ್ಚಿನಲ್ಲಿಯೇ ಸಾಗಿಬಂದಿರುವುದು ಸ್ಪಷ್ಟ. ಮೂಲತಃ ಕನ್ನಡ ಭಾಷೆಯು ದ್ರಾವಿಡ ಪರಿವಾರದ ಭಾಷೆಗಳಿಗೆ ಸೇರಿದ್ದು. ಆದಾಗ್ಯೂ ಸಂಸ್ಕೃತಭಾಷೆಯೊಂದಿಗಿನ ನಂಟು ಅಪಾರವಾದದ್ದು. ಕನ್ನಡ ವರ್ಣಮಾಲೆಯು ಸಂಸ್ಕೃತದಿಂದ ರೂಪುಗೊಂಡಿರುವುದರಿಂದ ವರ್ಣಗಳ ಉಚ್ಚಾರಣಾ ವಿಧಾನವನ್ನು ಸಂಸ್ಕೃತವರ್ಣೋಚ್ಚಾರಣಾ ಕ್ರಮದಿಂದದಿಂದ ಅರಿಯಬೇಕಾದುದು ಅವಶ್ಯ.

## 6.4 ವರ್ಣಗಳ ವರ್ಗೀಕರಣ

ಪ್ರಾಚೀನ ವೈಯಾಕರಣಿಗಳು ವರ್ಣಸಮ್ನಾಯ ಮಾಡುವಾಗ ಮುಖ್ಯವಾಗಿ ನಾಲ್ಕು ದೃಷ್ಟಿಕೋನಗಳನ್ನು ಗಮನದಲಿಟ್ಟುಕೊಂಡು ಕ್ರೋಡೀಕರಿಸಿದ್ದಾರೆ. ಅವುಗಳೆಂದರೆ ಮೊದಲನೆಯದು ಸ್ವರಗಳು, ಎರಡನೇಯದು ವ್ಯಂಜನಗಳು, ಮೂರನೇಯದು ಸ್ವರಮತ್ತು ವ್ಯಂಜನಾಂಶಗಳನ್ನು ಹೊಂದಿರುವತಹವುಗಳು ಮತ್ತು ನಾಲ್ಕನೇಯದು ಸ್ವತಂತ್ರ ಪ್ರಯೋಗ ಹೊಂದಿರದ ವಿಶಿಷ್ಟಧ್ವನದನ್ಯಂಶಗಳು. ಕ್ರಮವಾಗಿ ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

### 6.4.1 ಸ್ವರಗಳ ವರ್ಗೀಕರಣ

ಸ್ಥೂಲವಾಗಿ ವರ್ಣಗಳನ್ನು ಮೇಲಿನ ನಾಲ್ಕು ವರ್ಗಗಳಲ್ಲಿ ವರ್ಗೀಕರಿಸಬಹುದಾದರೂ ಪ್ರತಿಯೊಂದು ವರ್ಗದಲ್ಲಿ ಪುನಃ ಉಪವರ್ಗಗಳನ್ನು ಮಾಡಬಹುದು. ಸ್ವರಗಳ ವರ್ಗೀಕರಣಕ್ಕೆ ಸಂಬಂಧಪಟ್ಟಂತೆ ಈಕೆಳಗಿನಂತೆ ವರ್ಗೀಕರಣಮಾಡಲಾಗಿದೆ.

### 1-ಜಿಹ್ವೆಯಭಾಗಗಳನ್ನು ಅನುಸರಿಸಿ ಸ್ವರಗಳ ವರ್ಗೀಕರಣ[241]

ಸ್ವರಗಳವರ್ಗೀಕರಣದಲ್ಲಿ ಪ್ರಮುಖ ಆಧಾರ ಧ್ವನ್ಯೋತ್ಪತ್ತಿಸ್ಥಾನಗಳು, ಕರಣಗಳಾಗಿವೆ. ವಿಭಿನ್ನಸ್ವರಗಳ ಉಚ್ಚಾರಣೆಗಾಗಿ ಮುಖವಿವರವು ಬೇರೆಬೇರೆ ರೀತಿಯ ಸ್ವರೂಪಧಾರಣೆ ಮಾಡುತ್ತದೆ. ಮುಖವಿವರದಲ್ಲಿ ಪಶ್ಚಜಿಹ್ವೆಯಿಂದ ಆರಂಭವಾಗಿ **ಅಗ್ರ** ಮಧ್ಯ, ಮೇಲ್ಭಾಗದಲ್ಲಿ ನಾನಾರೀತಿಯ ಚಲನೆಯನ್ನು ಹೊಂದಿ ವಿಭಿನ್ನ ಸ್ವರಗಳು ಉದ್ಭವವಾಗುತ್ತವೆ. ಆದ್ದರಿಂದ ಸ್ವರಗಳ ಉಚ್ಚಾರಣೆಯಲ್ಲಿ ನಾಲಗೆಯನ್ನು ಮೂರು ಮುಖ್ಯಭಾಗಗಳಾಗಿ ವಿಭಜಿಸಲಾಗಿದೆ. ಅವು ಪಶ್ಚ ಜಿಹ್ವೆ, ಮಧ್ಯ ಜಿಹ್ವೆ ಮತ್ತು ಅಗ್ರ ಜಿಹ್ವೆ ಗಳಾಗಿವೆ. ಸ್ವರಗಳನ್ನು ಸ್ಥೂಲವಾಗಿ ನಾಲಗೆಯ ಭಾಗಕ್ಕನುಸರಿಸಿ ಪಶ್ಚ ಸ್ವರಗಳು, ಮಧ್ಯ ಸ್ವರಗಳು ಮತ್ತು ಅಗ್ರ ಸ್ವರಗಳು ಎಂದು ಕರೆಯುತ್ತಾರೆ. ಈ ಆಧಾರದ ಮೇಲೆ ಸ್ವರಗಳಲ್ಲಿ ಮೂರು ವರ್ಗಗಳನ್ನಾಗಿ ಮಾಡಲಾಗಿದೆ.

ಪಶ್ಚ ಸ್ವರಗಳು :ಉ,ಊ,ಒ,ಓ

ಮಧ್ಯ ಸ್ವರಗಳು :ಅ,ಆ.

ಅಗ್ರ ಸ್ವರಗಳು :ಇ,ಈ,ಎ,ಏ

### 2-ಜಿಹ್ವೆಯ ಚಲನಾಸ್ಥಿತಿ ಅನುಸರಿಸಿ ಸ್ವರಗಳವರ್ಗೀಕರಣ[242]

ಮೇಲಿನವರ್ಗೀಕರಣದಲ್ಲಿ ನಾಲಗೆಯ ಯಾವಭಾಗ ಸ್ವರದ ಉಚ್ಚಾರದಲ್ಲಿ ಭಾಗಿಯಾಗುತ್ತದೆಯೋ ಅದನ್ನು ಅನುಸರಿಸಿ ಸ್ವರಗಳನ್ನು ವರ್ಗೀಕರಣಮಾಲಾಗಿದೆ. ಈ ಭಾಗದಲ್ಲಿ ನಾಲಗೆಯು ಸ್ವರಗಳ ಉಚ್ಚಾರಣೆಯಲ್ಲಿ ಯಾವ ಸ್ವರೂಪದಲ್ಲಿ ಮೇಲ್ಭಾಗಕ್ಕೆ

---

[241] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಧ್ವನಿ ಪದದ ಅರ್ಥವಿವವರಣೆಯ ಭಾಗ ಪುಟ 310.

[242] ಭಾಷಾವಿಜ್ಞಾನಕೋಶ (ಸಂಸ್ಕೃತ-ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960 (ಸಂಸ್ಕೃತ) ಧ್ವನಿ ಪದದ ಅರ್ಥವಿವವರಣೆಯ ಭಾಗ ಪುಟ 310.

ಮಟದೇಳುತ್ತದೆ ಎನ್ನುವ ಸ್ವರೂಪ ಆಧರಿಸಿ ಸ್ವರಗಳನ್ನು ವರ್ಗೀಕರಣ ಮಾಡುವ ವಿಧಾನವಾಗಿದೆ. ಕೆಲವುಸ್ವರಗಳನ್ನು ಉಚ್ಚಾರಮಾಡುವಾಗ ನಾಲಗೆಯ ವಿಶಿಷ್ಟಭಾಗವು ಮೇಲೆಮಟದೆದ್ದಾಗ ಮುಖವಿವರ ಸಂವೃತಗೊಳ್ಳುತ್ತದೆ. ಇದನ್ನು ಸಂವೃತಸ್ವರಗಳೆಂದು ಕರೆಯಲಾಗಿದೆ. ಇನ್ನುಕೆಲವುಸ್ವರಗಳನ್ನು ಉಚ್ಚಾರ ಮಡುವಾಗ ಮುಖವಿವರ ವಿವೃತಗೊಳ್ಳುತ್ತದೆ ಅಂತಹ ಸ್ವರಗಳನ್ನು ವಿವೃತ ಸ್ವರಗಳೆಂದು ಕರೆಯುತ್ತಾರೆ. ಇವೆರಡೂ ಸ್ವರಗಳ ಉಚ್ಚಾರಣೆಯಲ್ಲಿ ಕೆಲವು ಸಂದರ್ಭದಲ್ಲಿ ಮುಖವಿವರವು ಅರ್ಧಸಂವೃತ ಮತ್ತು ಅರ್ಧವಿವೃತಗೊಳ್ಳುತ್ತದೆ. ಹೀಗೆ ನಾಲಗೆಯ ಚಲನಾಸ್ಥಿತಿ ಮತ್ತು ಮುಖವಿವರದಲ್ಲಿ ಕಂಡುಬರುವ ಬಾಹ್ಯ ನೋಟವನ್ನು ಅನುಸರಿಸಿ ನಾಲ್ಕು ರೀತಿಯಲ್ಲಿ ಸ್ವರಗಳನ್ನು ವಿಭಜಿಸಲಾಗಿದೆ. ಅವುಗಳೆಂದರೆ ಸಂವೃತಸ್ವರಗಳು, ಅರ್ಧ ಸಂವೃತಸ್ವರಗಳು, ವಿವೃತಸ್ವರಗಳು,ಅರ್ಧವಿವೃತ ಸ್ವರಗಳು.

ಸಂವೃತಸ್ವರಗಳು : ಇ,ಈ,ಉ,ಊ.

ಅರ್ಧ ಸಂವೃತಸ್ವರಗಳು :ಎ,ಏ,ಒ,ಓ.

ವಿವೃತಸ್ವರಗಳು : ಆ

ಅರ್ಧವಿವೃತ ಸ್ವರಗಳು : ಅ

**3–ಓಷ್ಠ್ಯದಸ್ಥಿತಿಯನ್ನು ಅನುಸರಿಸಿ ಸ್ವರಗಳ ವರ್ಗೀಕರಣ[243]**

ಸ್ವರಗಳನ್ನು ಉಚ್ಚಾರಮಾಡುವಾಗ ತುಟಿಯ ಸ್ವರೂಪವನ್ನು ಅಧರಿಸಿ ಸ್ವರಗಳನ್ನು ವರ್ಗೀಕರಿಸುವ ವಿಧಾನವನ್ನು ಓಷ್ಠದ ಸ್ಥಿತಿಯನ್ನು ಅನುಸರಿಸಿ ಸ್ವರಗಳ ವರ್ಗೀಕರಣ ಎಂದು ಕರಯಬಹುದು. ಮುಖ್ಯವಾಗಿ ಎರಡು ವಿಧಾನಗಳು ಒಂದು ವೃತ್ತಮುಖಿ ಅಥವಾ ವೃತ್ತಾಕಾರ ಇನ್ನೊಂದು ಅವೃತ್ತಮುಖಿ ಅಥವಾ ಅವೃತ್ತಾಕಾರ ಉದಾಹರಣೆಗೆ ಉ,ಊ ಗಳು ವೃತ್ತಾಕಾರದ ಸ್ವರಗಳಾದರೆ ಆ, ಏ ಇತ್ಯಾದಿ ಸ್ವರಗಳು ಅವೃತ್ತಾಕಾರ ಸ್ವರಗಳೆಂದು ವರ್ಗೀಕರಿಸಬಹುದಾಗಿದೆ. ಈ ಸ್ವರಗಳನ್ನು ಉಪ ವಿಭಾಗಗಳನ್ನಾಗಿ ಓಷ್ಠ್ಯವಿವೃತ ಸ್ವರ –ಈ,ಪೂರ್ಣವಿವೃತವಾಗಿ ಏ,ಸ್ವಲ್ಪ ವೃತ್ತಾಕಾರ ಆ,ಇತ್ಯಾದಿ

[243] ಅದೇ.

### 4–ಸ್ವರ ಉಚ್ಚಾರ ಗೊಳ್ಳುವ ಕಾಲವನ್ನು/ಮಾತ್ರಾವನ್ನು ಅನುಸರಿಸಿ ಸ್ವರಗಳ ವರ್ಗೀಕರಣ

ಸ್ವರಗಳನ್ನು ಉಚ್ಚಾರಮಾಡಲು ತೆಗೆದುಕೊಳ್ಳುವ ಸಮಯ ಅಥವಾ ಕಾಲವನ್ನು ಆಧಾರವಾಗಿಟ್ಟುಕೊಂಡು ಸ್ವರಗಳನನ್ನು ವರ್ಗೀಕರಿಸುವಿಕೆಯನ್ನು ಮಾತ್ರೆಗಳ ಅಧಾರದ ಮೇಲೆ ಸ್ವರಗಳವರ್ಗೀಕರಣ ಎಂದು ಕರೆಯಲಾಗಿದೆ. ಸ್ವರಗಳನ್ನು ಅಥವಾ ಧ್ವನಿಗಳನ್ನು ಉಚ್ಚಾರಮಾಡುವಾಗ ಅನೇಕರೀತಿಯಲ್ಲಿ ಸಮಯಗಳನ್ನು ಬಳಸುತ್ತಾರೆ. ಹ್ರಸ್ವ ದೀರ್ಘ,ಪ್ಲುತ ಎಂಬುದಾಗಿ ವರ್ಗೀಕರಿಸಲಾಗಿದೆ. 'ಹ್ರಸ್ವ'ಗಳೆಂದರೆ ಒಂದುಮಾತ್ರಾ ಕಾಲದಲ್ಲಿ ಉಚ್ಚರಿಸಲ್ಪಡುವ ಸ್ವರಗಳು, ಒಂದು ಮಾತ್ರಾಕಾಲ ವೆಂದರೆ ಸಾಮಾನ್ಯವಾಗಿ 'ಒಂದುಸಲ ಕಣ್ಣುಮುಚ್ಚಿತೆರೆಯಲು ಬೇಕಾಗುವಸಮಯಾಶವಕಾಶ'ವಾಗಿದೆ. ಒಂದು ಮಾತ್ರಾಕಾಲದ ಆಧಾರದ ಮೇಲೆ ಹ್ರಸ್ವ ಸ್ವರಗಳನ್ನು ಹೇಳಿದರೆ ಎರಡು ಮಾತ್ರಾಕಾಲದಲ್ಲಿ ಉಚ್ಚರಿತವಾಗುವ ಸ್ವರಗಳನ್ನು ದೀರ್ಘಸ್ವರಗಳೆಂದು ಕರೆಯುತ್ತಾರೆ. ಇದನ್ನೇ ಸಂಸ್ಕೃತ ಭಾಷೆಯಲ್ಲಿ "ಏಕಮಾತ್ರೋ ಭವೇದ್ಧ್ರಸ್ವೋ ದ್ವಿಮಾತ್ರೋ ದೀರ್ಘ ಉಚ್ಯತೆ" ಎಂದಿದ್ದಾರೆ. ಕನ್ನಡದಲ್ಲಿ ಕೇಶಿರಾಜನು ಶಬ್ದಮಣಿದರ್ಪಣ ಗ್ರಂಥದಲ್ಲಿ ಹ್ರಸ್ವಮೇಕಮಾತ್ರಕಂ 'ದ್ವಿಮಾತ್ರಮಂತದು ದೀರ್ಘಂ' ಎಂದು ಕರೆದಿದ್ದಾನೆ. ಪ್ಲುತವೆಂದರೆ 3 ಅಥವಾ ಮೂರಕ್ಕಿಂತ ಹೆಚ್ಚು ಮಾತ್ರಾಕಾಲದಲ್ಲಿ ಉಚ್ಚರಿತವಾಗುವ ಸ್ವರವಾಗಿದೆ. ಸಂಸ್ಕೃತ ಭಾಷೆಯಲ್ಲಿ ಹೆಚ್ಚಾಗಿ ಕಂಡು ಬರುತ್ತದಾದರೂ ಕನ್ನಡ ಭಾಷೆಯಲ್ಲಿ ಇದರ ಬಳಕೆ ಕಡಿಮೆ. ಉದಾಹರಣೆಗೆ: 'ಅ' ಹ್ರಸ್ವಸ್ವರ, 'ಆ' ದೀರ್ಘ ಸ್ವರ, 'ಊಃ' ಪ್ಲುತಸ್ವರವಾಗಿದೆ.

### 5–ನಾಸಿಕ ಮತ್ತು ಆಲಿಜಿಹ್ವೆಯನ್ನು ಅನುಸರಿಸಿ ಸ್ವರಗಳ ವರ್ಗೀಕರಣ[244]

ಕೆಲವು ಸ್ವರಗಳನ್ನು ಉಚ್ಚರಿಸುವಾಗ ಹವೆಯು ಜಿಹ್ವೆಯನ್ನು ಪ್ರಧಾನವಾಗಿ ಬಳಸಿ ಸಂಚಾರವಾಗಿ ಸ್ವರಗಳು ಉಚ್ಚಾರಗೊಳ್ಳುತ್ತವೆ. ಇನ್ನು ಕೆಲವು ಅಥವಾ ಅದೇ ಸ್ವರಗಳನ್ನು ಉಚ್ಚರಿಸುವಾಗ ಜಿಹ್ವೆಯ ಜೊತೆಗೆ ನಾಸಿಕ ವಿವರವನ್ನು ಬಳಸುತ್ತೇವೆ, ಇವುಗಳ

---

[244] ಅದೇ.

ಆಧಾರದ ಮೇಲೆ ಸ್ವರಗಳನ್ನು ಮೌಖಿಕ ಸ್ವರಗಳು ಮತ್ತು ನಾಸಿಕ್ಯ ಅಥವಾ ಅನಿನಾಸಿಕ ಸ್ವಗಳೆಂದು ವಿಭಜಿಸಬಹುದಾಗಿದೆ. ಶಬ್ದವೇ ಸೂಚಿಸುವಂತೆ ಮುಖವಿವರವನ್ನು ಮಾತ್ರ ಬಳಸಿ ಉಚ್ಚರಿಸಲ್ಪಡುವ ಸ್ವರಗಳು ಮೌಖಿಕ ಸ್ವರಗಳಾಗಿವೆ. ಮುಖವವಿವರದ ಜೊತೆಗೆ ನಾಸಿಕವನ್ನು ಬಳಸಿ ಉಚ್ಚರಿಸಲ್ಪಡುವ ಸ್ವರಗಳು ಅನುನಾಸಿಕ ಅಥವಾ ನಾಸಿಕ್ಯ ಸ್ವರಗಳಾಗಿವೆ. ಮೌಖಿಕ ಸ್ವರಗಳಿಗೆ ಉದಾಹರಣೆ; ಅ,ಆ,ಎ ಇತ್ಯಾದಿ. ಆ*,ಆ* ಇತ್ಯಾದಿ. ನಾಸಿಕ್ಯ ಸ್ವರಗಳು ಸಂಸ್ಕೃತಭಾಷೆಯಲ್ಲಿ ಹೇರಳವಾಗಿ ಕಂಡುಬರುತ್ತದೆ. ಕನ್ನಭಾಷೆಯಲ್ಲಿ ನಾವು ಗ್ರಾಂಥಿಕವಾಗಿ ಸ್ವರಗಳ ಜೊತೆಗೆ ಸೊನ್ನೆಯನ್ನು ಬಳಸುತ್ತೇವೆ. ಎಲ್ಲ ಸ್ವರಗಳಿಗೂ ಪ್ರತ್ಯೇಕವಾದ ನಾಸಿಕ್ಯಸ್ವರಗಳನ್ನು/ಅನುನಾಸಿಕಸ್ವರಗಳನ್ನು ಪರಿಗಣನೆಯನ್ನು ಕನ್ನಡ ಬಾಷೆಯಲ್ಲಿ ಮಾಡಿಲ್ಲ. ಎಲ್ಲ ಸ್ವರಗಳಿಗೆ ಏಕಸ್ವರೂಪದಲ್ಲಿ ಸೊನ್ನೆಯಸ್ನು ಸಂಕೇತವಾಗಿ ಕನ್ನಡಬಾಷೆಯಲ್ಲಿ ಬಳಸುತ್ತಾರೆ.

**6–ಸ್ವರ ತಂತ್ರಗಳ ಸ್ಥಿತಿಯನ್ನು ಅನುಸರಿಸಿ ಸ್ವರಗಳವರ್ಗೀಕರಣ[245]**

ಸ್ವರತಂತ್ರವ್ಯವಸ್ಥೆಯಲ್ಲಿ ವಿವಿಧಸ್ವರಗಳನ್ನು ಉಚ್ಚರಿಸುವಾಗ ಏಕರೀತಿಯಲ್ಲಿ ಸ್ಥಿತಿಗಳಿರುವುದಿಲ್ಲ. ಅವು ಈಕೆಳಗಿನ ಭಿನ್ನತೆಯನ್ನು ಹೊಂದುತ್ತವೆ.

**ಘೋಷ**

ಧ್ವನಿಪೆಟ್ಟಿಗೆಯಿಂದ ಹೊರಟ ಹವೆಯು ಮುಖವಿವರದಲ್ಲಿ ಧ್ವನ್ಯುತ್ಪಾದನೆ ಮಾಡುವಾಗ ಕರಣ ಮತ್ತು ಸ್ಥಾನಗಳನಡುವೆ ಕರಣಗಳು ಸ್ಥಾನಗಳ ಸಮೀಪಬಂದು ಪರಸ್ಪರ ಸ್ಪರ್ಶಿಸದೇ ಇದ್ದರೂ ಘರ್ಷಣೆಗೆ ಒಳಗಾಗುತ್ತದೆ. ಆಗ ಸ್ವರತಂತ್ರಗಳಲ್ಲಿ ಕಂಪನವುಂಟಾಗುತ್ತದೆ. ಇಂತಹ ಸ್ವರಗಳನ್ನು ಘೋಷ ಧ್ವನಿಗಳೆಂದು ಕರೆಯುತ್ತರೆ. ಉದಾಗರಣೆಗೆ ಬಹುತೇಕವಾಗಿ ಸ್ವರಗಳೆಲ್ಲ ಘೋಷಗಳಾಗಿವೆ.

---

[245] ಅದೇ.

**ಅಘೋಷಗಳು:**

ಘೋಷಧ್ವನಿಗಳಿಗೆ ವಿರುದ್ಧವಾದವುಗಳೇ ಅಘೋಷಗಳಾಗಿವೆ. ಮುಖವಿವರದಲ್ಲಿಯ ಸ್ಥಾನ ಮತ್ತು ಕರಣಗಳು ಪರಸ್ಪರ ಹತ್ತಿರಬಂದು ಘರ್ಷಣೆಗೆ ಒಳಗಾಗಿ ಘೋಷಧ್ವನಿಗಳು ಉಚ್ಚಾರಗೊಂಡರೆ ಇದಕ್ಕೆ ತದ್ವಿರುದ್ಧವಾಗಿ ಅಘೋಷಗಳ ಉಚ್ಚಾರಣೆಯಲ್ಲಿ ಸ್ಥಾನ ಮತ್ತು ಕರನಗಳು ಪರಸ್ಪರ ದೂರಸರಿದುಕೊಂಡು ಹವೆಯು ಸುಲಲಿತವಾಗಿ ಹೊರಹೋಗುವಂತೆ ಮಾಡಿ ಧ್ವನ್ಯುತ್ಪಾದನೆಗೆ ಕಾರಣವಾಗುತ್ತದೆ. ಯಾವುದೇ ಘರ್ಷಣೆಯಾಗಲೀ, ಸ್ವರತಂತ್ರದಲ್ಲಿ ಯಾವುದೇರೀತಿಯ ಕಂಪನವಾಗಲೀ ಸಂಭವಿಸುವುದಿಲ್ಲ. ನಿರಾತಂಕವಾಗಿ ಹವೆಯು ಮುಖವಿವರದಲ್ಲಿ ಚಲನೆಯಾಗುತ್ತಿರುತ್ತದೆ. ಅಘೋಷಸ್ವರಗಳು ಬಹುತೇಕ ಭಾಷೆಗಳಲ್ಲಿ ಕಂಡುಬರುವುದಿಲ್ಲ. ಹಿಂದಿ ಭಾಷೆಯಲ್ಲಿ ನಾವು ಇದನ್ನು ಗಮನಿಸಬಹುದಾಗಿದೆ. ಉ.ಇ.ಈ ಇತ್ಯಾದಿಗಳು ಸಾಮಾನ್ಯ ಸ್ವರಗಳಾದರೆ ಇವುಗಳನ್ನೇ ಇನ್ನೊಂದು ಸನ್ನಿವೇಶದಲ್ಲಿ ಅಘೋಷವಾಗಿಯೂ ಬಳಸುತ್ತಾರೆ, ಅಘೋಷ ಸ್ವರಗಳೆಂದು ಗುರುತಿಸಲಿಕ್ಕಾಗಿ ಇಂತಹ ಸ್ವರಗಳ ಅಡಿಯಲ್ಲಿ ಬಿಂದು ಅಥವ ಸೊನ್ನೆಯನ್ನು ಸಂಕೇತವಾಗಿ ಸೂಚಿಸಿರುತ್ತಾರೆ. ಉದಾಹರಣೆಗೆ : ಉ* ,ಈ* .

**6–ಸ್ವರೋಚ್ಚಾರಣೆಯ ಒತ್ತಡ ಅನುಸರಿಸಿ ಸ್ವರಗಳವರ್ಗೀಕರಣ**

ಸ್ವರಗಳನ್ನು ಉಚ್ಚರಿಸುವಾಗ ನಾವು ಎಲ್ಲ ಸ್ವರಗಳಿಗೂ ಒಂದೇರೀತಿಯ ಒತ್ತಡವನ್ನು ಹಾಕುವುದಿಲ್ಲ. ಕೆಲವನ್ನು 'ಶಿಥಿಲವಾಗಿ' ಮತ್ತೆ ಕೆಲವನ್ನು 'ಗಟ್ಟಿಯಾಗಿ' ಉಚ್ಚರಿಸುತ್ತೇವೆ, ಮತ್ತೆ ಕೆಲವನ್ನು ಇವೆರಡಕ್ಕೂ ಅಂದರೆ 'ಶಿಥಿಲ' ಮತ್ತು 'ಗಟ್ಟಿ' ಇವೆರಡರ ನಡುವೆ ಉಚ್ಚಾರ ಮಾಡುತ್ತೇವೆ ಇದನ್ನು 'ಮಧ್ಯ' ಎಂದು ಕರೆಯಲಾಗಿದೆ. ಉದಾಹರಣೆಗೆ ಅ,ಇ,ಉ ಇತ್ಯಾದಿಗಳನ್ನು ಶಿಥಿಲ ಸ್ವರಗಳೆಂದು ಕರೆಯಬಹುದು. ಆ,ಈ,ಊ ಇತ್ಯಾದಿಗಳು ಗಟ್ಟಿಸ್ವರಗಳಾಗಿವೆ. ಎ ಒ ಸ್ವರಗಳು ಮಧ್ಯಮ ಸ್ವರಗಳಾಗಿವೆ.

**8–ಸ್ವರಮೂಲವನ್ನು ಅನುಸರಿಸಿ ಸ್ವರಗಳ ವರ್ಗೀಕರಣಗಳ** [246]

---

[246] ಅದೇ.

ಸ್ವರಗಳನ್ನು ಗಮನಿಸಿದಾಗ ಕೆಲವು ಸ್ವತಂತ್ರ ಸ್ವರಗಳಾಗಿವೆ. ಇನ್ನು ಕೆಲವು ಸಂಯುಕ್ತ ಸ್ವರಗಳಾಗಿವೆ. ಹೀಗೆ ಸ್ವರಮೂಲವನ್ನು ಅನುಸರಿಸಿ ಸ್ವರಗಳನ್ನು ವರ್ಗೀಕರಿಸುವ ವಿಧಾನವನ್ನು ಸ್ವರಮೂಲ ವರ್ಗೀಕರಣ ಎಂದು ಕರೆಯಬಹುದಾಗಿದೆ. ಉದಾಹರಣೆಗೆ 'ಅ' ಇದೊಂದು ಸ್ವತಂತ್ರಸ್ವರವಾಗಿದೆ. ಇದಕ್ಕೆ ಬೇರೇ ಯಾವುದೇ ಮೂಲವಿಲ್ಲ ಆದ್ದರಿಂದ ಇದು ಸ್ವತಂತ್ರಸ್ವರವಾಗಿದೆ. ಆದರೆ 'ಎ' ಅಥವಾ 'ಒ' ಸ್ವರದ ರಚನೆ ಅಥವಾ ಮೂಲವನ್ನು ಹುಡುಕಹೊರಟರೆ ಅವು ಸಂಯುಕ್ತ ಸ್ವರಗಳೆಂದು ಹೇಳಬಹುದು. ಏಕೆಂದರೆ 'ಎ' ಸ್ವರವನ್ನು ಬಿಡಿಸಿದಾಗ ಅ+ಇ=ಎ ಎಂದು ಸಂಯುಕ್ತಸ್ವರವಾಗಿದೆ. ಅದೇರೀತಿ ಅ+ಉ=ಒ ಸ್ವರ ರೂಪುಗೊಳ್ಳುತ್ತೆ ಆದ್ದರಿಂದ ಇವೆರಡು ಸ್ವರಗಳು ಸಂಯುಕ್ತಸ್ವರಗಳಾಗಿವೆ.

**9–ಅಮೇರಿಕಾದ ಭಾಷಾವಿಜ್ಞಾನಿಗಳಪ್ರಕಾರ ಸ್ವರಗಳ ವರ್ಗೀಕರಣ**

ಜಿಹ್ವೆಯ ಏರಿಳಿತಗಳನ್ನು ಆಧರಿಸಿ ಭಾರತೀಯ ಭಾಷಾವಿಜ್ಞಾನಿಗಳು ಚಿಂತಿಸಿದಂತೆ ನಾಲಗೆಯ ಅಗ್ರ, ಮಧ್ಯ ಮತ್ತು ಪಶ್ಚ ಭಾಗಗಳನ್ನು ಅನುಸರಿಸಿ ಸ್ವರಗಳನ್ನು ವರ್ಗೀಕರಣ ಮಾಡಿದ್ದಾರೆ. ಬ್ಲಾಕ್ ಮತ್ತು ಟ್ರೇಗರ ಎನ್ನುವ ಪಾಶ್ಚಾತ್ಯ ವಿದ್ವಾಂಸನು ಜಿಹ್ವೆಯ ಏರಿಳಿತಗಳನನ್ನು ಆಧರಿಸಿ ಏಳು ಸ್ವರವಿಭಾಗಗಳನ್ನು ಹೇಳಿದ್ದಾನೆ. ಅವುಗಳೆಂದರೆ

| | |
|---|---|
| high, | ಉಚ್ಚಸ್ವರ |
| lower high, | ನಿಮ್ನತರ ಉಚ್ಚ ಸ್ವರ |
| higher mid, | ಉನ್ನತ ಮಧ್ಯ |
| mean mid, | ಮಧ್ಯ |
| lower mid, | ಅವನತ ಮಧ್ಯ |
| higher low, | ಉನ್ನತಾವನತ |
| low vowels | ಅವನತ |

### 6.4.2 ವ್ಯಂಜನಗಳ ವರ್ಗೀಕರಣ.

ವ್ಯಂಜನಗಳ ವರ್ಗೀಕರಣದಲ್ಲಿ ಧ್ವನ್ಯುತ್ಪಾದನಾಪ್ರಯತ್ನ, ಸ್ಥಾನ, ಸ್ವರತಂತ್ರ, ಪ್ರಾಣ, ಉಚ್ಚಾರಣಾಶಕ್ತಿ, ಅನುನಾಸಿಕತ್ವ, ಸಂಯುಕ್ತತೆ ಮತ್ತು ಅಸಂಯುಕ್ತತೆ ಇತ್ಯಾದಿಗಳ ಆಧಾರದ ಮೇಲೆ ವ್ಯಂಜನಗಳನ್ನು ವರ್ಗೀಕರಿಸಲಾಗಿದೆ.

**ಪ್ರಯತ್ನದ ಆಧಾರದಲ್ಲಿ ವ್ಯಂಜನಗಳ ವರ್ಗೀಕರಣ**

**ಪ್ರಯತ್ನದ ಆಧಾರದಲ್ಲಿ**

1. ಸ್ಪರ್ಶವ್ಯಂಜನಗಳು,
2. ಸಂಘರ್ಷಿವ್ಯಂಜನಗಳು,
3. ಸ್ಪರ್ಶಸಂಘರ್ಷಿವ್ಯಂಜನಗಳು,
4. ನಾಸಿಕ್ಯವ್ಯಂಜನಗಳು,
5. ಪಾರ್ಶ್ವಿಕವ್ಯಂಜನಗಳು,
6. ಲುಂಠಿತ ವ್ಯಂಜನಗಳು,
7. ಕಂಪನಯುಕ್ತ ವ್ಯಂಜನಗಳು,
8. ಕಂಪನಜಾತಸಂಘರ್ಷಿ ವ್ಯಂಜನಗಳು,
9. ಉತ್ಕ್ಷಿಪ್ತ ವ್ಯಂಜನಗಳು,
10. ಅರ್ಧ ಸ್ವರಗಳು ಅಥವಾ ಅರ್ಧ ವ್ಯಂಜನಗಳು ಇತ್ಯಾದಿ.

**1 ಸ್ಪರ್ಶ ವ್ಯಂಜನಗಳು**

ಈ ವರ್ಗದ ವ್ಯಂಜನಗಳನ್ನು ಸ್ಫೋಟ ಮತ್ತು ಸ್ಫೋಟಕ ಎಂದು ಕರೆಯುತ್ತಾರೆ. ಮುಖವಿವರದಲ್ಲಿಯ ಮೇಲಿನ ತುಟಿಯಿಂದ ಹಿಡಿದು ಕಂಠದವರೆಗಿನ ಅರ್ಧ ಚಂದ್ರಾಕೃತಿಯಂತಿರುವ ಮೇಲ್ಭಾಗ ಮತ್ತು ಮುಖವಿವರದಲ್ಲಿ ಕೆಳತುಟಿಯಿಂದ ಅರಂಭವಾಗಿ ಕಂಟದವರೆಗಿನ ಭಾಗಗಳು ಹವೆಯು ಮುಖವಿವರದಲ್ಲಿ ಪ್ರಸಾರವಾಗುವಾಗ ಸ್ಪರ್ಶಿಸುತ್ತವೆ. ಮೇಲಿನ ತುಟಿಯಿಂದ ಆರಂಭಿಸಿ ದಂತ ಇತ್ಯಾದಿ ಮುಖವಿವರದಲ್ಲಿ ಮೇಲ್ಭಾಗದಲ್ಲಿರುವ ಅಂಗಗಳಿಗೆ ಸ್ಥಾನಗಳೆಂದು ಕರೆಯುತ್ತಾರೆ. ಸ್ಥಾನಗಳೆಂದರೆ ಇನ್ನೊಂದು ಅರ್ಥದಲ್ಲಿ ಚಲಿಸಲಾರದ ಅಂಗಗಳಾಗಿವೆ. ಅಂದರೆ ಧ್ವನ್ಯುತ್ಪಾದನೆಯಲ್ಲಿ ಇವುಗಳು ಸ್ಥಿರವಾಗಿರುತ್ತವೆ. ಇನ್ನು ಮುಖವಿವರದಲ್ಲಿ ಕೆಳ

ತುಟಿಯಿಂದ ಆರಂಭಿಸಿ ನಾಲಗೆಯ ಸಹಿತ ಇರುವ ಅಂಗಾಂಗಗಳಿಗೆ ಕರಣಗಳು ಎಂದು ಕರೆಯುತ್ತಾರೆ. ಇವೆರಡು ಪರಸ್ಪರ ಸ್ಪರ್ಶಗೊಂಡು ಧ್ವನಿ ಉಗಮಕ್ಕೆ ಕಾರಣ ವಾಗುವುದರಿಂದ ಇವುಗಳನ್ನು ಸ್ಪರ್ಶವ್ಯಂಜನಗಳೆಂದು ಕರೆಯುತ್ತಾರೆ. ಅಂದರೆ ಧ್ವನಿಪೆಟ್ಟಿಗೆಯಿಂದ ಹೊರಟ ಹವೆಯು ಮುಖವಿವರದಲ್ಲಿ ಸಂಚಾರಮಾಡುವಾಗ ಮುಖವಿವರದ ಮೇಲಿನ ಸ್ಥಾನಗಳು ಮತ್ತ ಕೆಳಗಿನ ಕರಣಗಳ ಘರ್ಷಣೆಯಿಂದ ಒಮ್ಮೆಲೆ ಸ್ಫೋಟಗೊಂಡು ವ್ಯಂಜನಗಳು ಉತ್ಪತ್ತಿಯಾಗುತ್ತವೆ. ಇವುಗಳನ್ನು ಮೂರುಹಂತಗಳಲ್ಲಿ ಸ್ಪಷ್ಟೀಕರಿಸಬಹುದಗಿದೆ. ಒಂದು ಹವೆಯ ಆಗಮನ, ಅವುಗಳು ಸ್ಥಾನ ಮತ್ತು ಕರಣಗಳಿಗೆ ತಡೆಯಾಗುವಿಕೆ ಮತ್ತು ಇನ್ನೊಂದು ಅವುಗಳನ್ನು ಒಮ್ಮಲೇ ಹೊರಹಾಕುವುದು ಅಥವಾ ಹೊರ ಸಂಚಾರ ಗೊಳ್ಳುವಂತೆ ಮಾಡುವುದು ಈ ಕಾರಣ ದಿಂದ ಅಲ್ಲಿ ಒಮ್ಮೆಲೆ ಸ್ಫೋಟ ಉಂಟಾಗುತ್ತದೆ. ಆದ್ದರಿಂದ ಇವುಗಳನ್ನು ಸ್ಫೋಟವೆಂತಲೂ ಕರೆದಿದ್ದಾರೆ. ಸ್ಪರ್ಶಗಳ ಉಚ್ಚಾರಣೆಯಲ್ಲಿ ಕೆಲವು ಪೂರ್ಣವೂ ಕೆಲವು ಅಪೂರ್ಣ ಉಚ್ಚಾರಣೆಯನ್ನು ಹೊಂದುತ್ತವೆ. ಸಂಸ್ಕೃತ ವರ್ಣಮಾಲೆಯಲ್ಲಿ ಕಾದಯೋಮಾವಸಾನಾಃ ಸ್ಪರ್ಶಾಃಎಂದು ಹೇಳಿದ್ದಾರೆ. ಅಂದರೆ ಕ್ ವ್ಯಂಜನದಿಂದ ಆರಂಭಿಸಿ ಮ್ ದವರೆಗಿನ ವರ್ಣಗಳು ಸ್ಪರ್ಶಗಳು ಎಂದು ಹೇಳಿದ್ದಾರೆ ಮತ್ತು ಅನುನಾಸಿಕಗಳಾದ ಙ,ಞ,ಮ,ನ,ಣ ಗಳನ್ನು ಸ್ಪರ್ಶಗಳೆಂದು ಕರೆದಿಲ್ಲ. ಕನ್ನಡ ವರ್ಣಮಾಲೆಯಲ್ಲಿಯೂ ಸಂಸ್ಕೃತದಂತೆ ಇದೇ ರೀತಿಯ ವರ್ಗೀಕರಣವನ್ನು ಮಾಡಿದ್ದಾರೆ. ಇವುಗಳನ್ನು ಸ್ಪರ್ಶವೆಂದು ಕರೆದಿದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯವಿಚಾರವೆಂದರೆ 'ಚ'ವರ್ಗದಕುರಿತಾಗಿ 'ಚ'ವರ್ಗವನ್ನು ಉಚ್ಚಾರಮಾಡುವಾಗ ಉಳಿದ ಕವರ್ಗ,ಟವರ್ಗ,ಪವರ್ಗ,ತವರ್ಗಗಳಂತೆ ಸ್ಪಷ್ಟವಾದ ಸ್ಫೋಟ ಒಂಟಾಗದಿರುವುದು. 'ಕ' ಉಚ್ಚಾರ ಮತ್ತು 'ಚ' ಉಚ್ಚಾರಗಳು ಸ್ಥಾನ ಬಲದಿಂದ ವ್ಯತ್ಯಾಸವಿರುವುದೇನೋ ಸಹಜವಾದುದಾಗಿದೆ. ಸ್ಪರ್ಶದ ಮೂರು ಹಂತಗಳಾದ ಹವೆಯು ಮುಖವಿವರಕ್ಕೆ ಬರುವ ಹಂತ, ಸ್ಥಾನಕರಣಗಳಿಂದ ತಡೆಯಾಗುವ ಹಂತ ಮತ್ತು ಅವುಗಳ ನಂತರ ಸ್ಫೋಟ ಗೊಳ್ಳುವಹಂತ ಇವುಗಳಲ್ಲಿ ಮೊದಲ ಹಂತದಲ್ಲಿ ಸಾಮೀಪ್ಯವಿದ್ದರೂ ನಂತರದ ಎರಡು ಹಂತಗಳ ಪ್ರಕ್ರಿಯೆಯಲ್ಲಿ ವ್ಯತ್ಯಾಸವಿದೆ. ಸಂಪೂರ್ಣವಾಗಿ ಸ್ಫೋಟ ಉಂಟಾಗದಿರುವುದು. ಮತ್ತು ಅವರೋಧವಾಗದಿರುವುದು, ಕಂಡುಬರುತ್ತದೆ. ಆದ್ದರಿಂದ ಇವುಗಳು ಸಂಪೂರ್ಣ ಸ್ಪರ್ಶವ್ಯಂಜನಗಳಾಗಲಾರವು.

ಆದಾಗ್ಯೂ ಕೂಡ ವ್ಯಂಜನಾಂಶಗಳನ್ನು ಹೆಚ್ಚು ಹೊಂದಿರುವುದರಿಂದ ವ್ಯಂಜನಗಳ ಗುಂಪಿನಲ್ಲಿ 'ಚ'ವರ್ಗವನ್ನು ಸೇರಿಸಲಾಗಿದೆ.

**ಸಂಘರ್ಷಿ ವ್ಯಂಜನಗಳು:**

ಸಂಘರ್ಷ ವ್ಯಂಜನಗಳಲ್ಲಿ ಸ್ಪರ್ಶವ್ಯಂಜನಗಳಂತೆ ಹವೆಯು ಸಂಪೂರ್ಣವಾಗಿ ಅವರೋಧನಕ್ಕೆ ಒಳಪಡುವದಿಲ್ಲ. ಅಂದರೆ ಸ್ಪರ್ಶವಾಗುವುದಿಲ್ಲ. ಅದೇರೀತಿಯಲ್ಲಿ ಸ್ವರದ ರೀತಿಯಲ್ಲಿಯೂ ಉಚ್ಚಾರ ಹೊಂದುವುದಿಲ್ಲ. ಅದ್ದರಿಂದ ಸಂಘರ್ಷವ್ಯಂಜನಗಳ ಸ್ಥಿತಿ ಸ್ಪರ್ಶ ಮತ್ತು ಸ್ವರಗಳಿಗಿಂತ ಭಿನ್ನವಾಗಿದೆ. ಮತ್ತು ಸ್ವರಗಳ ಉಚ್ಚಾರ ಮತ್ತು ಸ್ಪರ್ಶವ್ಯಂಜನಗಳ ಉಚ್ಚಾರದ ನಡುವಿನ ಸ್ಥಿತಿಯಲ್ಲಿ ಉಚ್ಚಾರಗೊಳ್ಳುವುದರಿಂದ ಇದನ್ನು ಸಂಘರ್ಷವೆಂದು ಕರೆದಿದ್ದಾರೆ. ಸ್ವರ ಮತ್ತು ಸ್ಪರ್ಶ ವ್ಯಂಜನಗಳು ಉದ್ಭವವಾಗುವ ಸಂದರ್ಭದಲ್ಲಿ ಸ್ಥಾನ ಮತ್ತು ಕರಣಗಳು ಪರಸ್ಪರ ಸಂಘರ್ಷಗೊಂಡು ಧ್ವನಿಗಳು ಉತ್ಪತ್ತಿಯಾಗುತ್ತವೆ. ಆದ್ದರಿಂದ ಇಂತಹ ಧ್ವನಿಗಳನ್ನು ಸಂಘರ್ಷೀವ್ಯಂಜನಗಳೆಂದು ಕರೆಯುತ್ತಾರೆ. ಉದಾಹರಣೆಗೆ ನಾಲಗೆಯು ಮೇಲಿನ ದಂತ ಅಥವಾ ತಾಲವ್ಯ, ಮೂರ್ಧನ್ಯ ಭಾಗಗಳ ಸಮೀಪಬಂದು ಘರ್ಷಣೆಗೆ ಒಳಗಾಗುತ್ತದೆ ಅಂತಹ ಸಂದರ್ಭದಲ್ಲಿ ಹವೆ ಆ ಮಾರ್ಗದಲ್ಲಿ ಚಲಿಸುತ್ತಿರುತ್ತದೆ. ಆ ಸಂದರ್ಭದಲ್ಲಿ ಸಂಘರ್ಷವುಂಟಾದಾಗ ಸಂಘರ್ಷ ವ್ಯಂಜನಗಳು ಉಗಮವಾಗುತ್ತವೆ. ಫ, ವ,ಜ,ಸ,ಶ,ಖ,ಘ,ಹ ವ್ಯಂಜನಗಳು ಈ ವರ್ಗಕ್ಕೆ ಸೇರುತ್ತವೆ, ಸ, ಶ, ಷ ಗಳನ್ನು ಉಚ್ಚಾರ ಮಾಡುವಾಗ ಒಂದು ರೀತಿಯ ಶೀತ್ಕಾರ ಉಂಟಾಗುತ್ತದೆ. (ಹಿಸ್ಸಿಂಗ) ಸ್ಪರ್ಶ ವ್ಯಂಜನಗಳನ್ನು ಉಚ್ಚಾರ ಮಾಡುವುದಕ್ಕೂ ಇದಕ್ಕೂ ವ್ಯತ್ಯಾಸವಿದೆ. ಶ್ವಾಸದ ಅವರೋದನ ಸ್ಪರ್ಶವ್ಯಂಜನಗಳಿಗಿಂತ ಹೆಚ್ಚಾಗಿರುತ್ತದೆ. ಈ ಸಂದರ್ಭದಲ್ಲಿ ನಾಲಗೆಯ ಸ್ವರೂಪವನ್ನಾಧರಿಸಿ ಉತ್ಥಿತಪಾರ್ಶ್ವಸಂಘರ್ಷ ಮತ್ತು ಸಮಪಾರ್ಶ್ವಸಂಘರ್ಷಎಂಬುದಾಗಿ ವರ್ಗೀಕರಿಸಲಾಗಿದೆ. ಉದಾಹರಣೆಗೆ 'ಶ್' ವ್ಯಂಜನವನ್ನು ಉಚ್ಚಾರಮಾಡುವಾಗ ನಾಲಗೆಯ ಎರಡು ಕಿನಾರೆಗಳು ಬಾಗುತ್ತವೆ. ಮಧ್ಯಭಾಗ ಸ್ವಲ್ಪ ಮೇಲೆದ್ದು ನಿಲ್ಲುತ್ತದೆ. ಆದ್ದರಿಂದ 'ಶ್' ವನ್ನು ಉತ್ಥಿತಪಾರ್ಶ್ವಸಂಘರ್ಷ ವ್ಯಂಜನವೆಂದು ಕರೆಯುತ್ತಾರೆ. ಅದೇರೀತಿ 'ಸ' ವನ್ನು ಉಚ್ಚಾರ ಮಾಡುವಾಗ ನಾಲಗೆಯು ಸಮತಟ್ಟಾಗಿರುತ್ತದೆ.

ಆದ್ದರಿಂದ ಸ್ ವನ್ನು ಸಮಪಾರ್ಶ್ವಸಂಘರ್ಷ ಎಂದು ಕರೆಯುತ್ತಾರೆ. ಸಂಘರ್ಷ ವ್ಯಂಜನಗಳನ್ನು ಊಷ್ಮಗಳೆಂದೂ ಕರೆಯುತ್ತಾರೆ.

**ಸ್ಪರ್ಶ-ಸಂಘರ್ಷ ವ್ಯಂಜನಗಳು**

ಈ ವ್ಯಂಜನಗಳ ಉಚ್ಚಾರಣೆಯು ಸ್ಪರ್ಶವ್ಯಂಜನದಂತೆ ಆರಂಭವಾಗಿ ಸ್ಫೋಟದ ಸಂದರ್ಭದಲ್ಲಿ ನಿಧಾನಗತಿಯಲ್ಲಿ ಹವೆಯು ಹೊರಹೋಗುತ್ತ ಧ್ವನಿತರಂಗಗಳ ಕಂಪನವಾಗುತ್ತಿರುತ್ತದೆ. ಈ ಸಂದರ್ಭದಲ್ಲಿ ಸಂಘರ್ಷವು ಸಾಮಾನ್ಯ ಸಂಘರ್ಷ ವ್ಯಂಜನಕ್ಕಿಂತ ಹೆಚ್ಚು ಸಮಯದವರೆಗೆ ಸಾಗುತ್ತಿರುತ್ತದೆ. ಆದ್ದರಿಂದ ಇಂತಹ ವ್ಯಂಜನಗಳು ಸ್ಪರ್ಶ ಮತ್ತು ಸಂಘರ್ಷಗುಣ ಎರಡನ್ನೂ ಹೊಂದಿರುವುದರಿಂದ ಇಂತಹ ವ್ಯಂಜನಗಳು ಸ್ಪರ್ಶ-ಸಂಘರ್ಷವ್ಯಂಜನಗಳೆಂದು ಕರೆಯುತ್ತಾರೆ. ಚ,ಛ,ಜ,ಝ ವ್ಯಂಜನಗಳು ಸ್ಪರ್ಶಸಂಘರ್ಷ ವ್ಯಂಜನಗಳಾಗಿವೆ ಏಕೆಂದರೆ ಈ ವ್ಯಂಜನಗಳು ಉಚ್ಚಾರವಾಗುವಾಗ ಸ್ಪರ್ಶದ ರೀತಿಯಲ್ಲಿ ಆರಂಭವಾಗಿ ಸಂಘರ್ಷದರೀತಿಯಲ್ಲಿ ಕೊನೆಯಾಗುತ್ತದೆ. ಈ ಮೊದಲೇ ಹೇಳಿದಹಾಗೆ ಚವರ್ಗದ ವ್ಯಂಜನಗಳು ಉಳಿದ ಸ್ಪರ್ಶವ್ಯಂಜನಗಳಂತೆ ಉಚ್ಚಾರಣೆಯನ್ನು ಹೊಂದಿಲ್ಲ ವಿಶಿಷ್ಟವಾಗಿದೆ ಎಂಬುದನ್ನು ಗಮನಿಸಬಹುದಾಗಿದೆ.

ನಾಸಿಕ್ಯ ವ್ಯಂಜನಗಳು

ನಾಸಿಕ್ಯವ್ಯಂಜನಗಳು ಹೆಸರೇ ಸೂಚಿಸುವಂತೆ ಹವೆಯು ಮುಖವಿವರದಲ್ಲಿ ಚಲಿಸುವುದರ ಜೊತೆಗೆ ನಾಸಿಕದ ಮೂಲಕವೂ ಚಲಿಸುತ್ತದೆ. ಅಂದರೆ ನಾಸಿಕ್ಯ ವ್ಯಂಜನಗಳ ಉಚ್ಚಾರಣೆಯು ಸ್ಪರ್ಶವ್ಯಂಜನಗಳಂತೆ ಇದ್ದರೂ ಸ್ಪರ್ಶವ್ಯಂಜನಗಳಲ್ಲಿ ಹವೆಯು ಮುಖವಿವರದ ಬಾಯಿಯ ಮೂಲಕ ಮಾತ್ರ ಸಂಚಾರ ಗೊಳ್ಳುತ್ತದೆ. ಆದರೆ ನಾಸಿಕ ವ್ಯಂಜನಗಳ ಉಚ್ಚಾರಣೆಯಲ್ಲಿ ಬಾಯಿಯ ಜೊತೆಗೆ ಏಕಕಾಲದಲ್ಲಿ ನಾಸಿಕದ್ವಾರದ ಮೂಲಕವು ಹವೆಯು ಹೊರಸೂಸಲ್ಪಡುತ್ತದೆ. ಇಲ್ಲಿ ಸ್ಪರ್ಶದ ಮೂರು ಸ್ಥಿತಿಗಳಾದ ಹವೆಯ ಆಗಮನ ಮತ್ತು ಅವರೋಧನ ಮತ್ತು ಸ್ಫೋಟಗಳಲ್ಲಿ ಮೊದಲಸ್ಥಿತಿಯು ಸ್ಪರ್ಶ ಮತ್ತು ನಾಸಿಕ ವ್ಯಂಜನಗಳಲ್ಲಿ ಏಕರೂಪವಾಗಿದ್ದರೂ ಅವರೋಧನ ಮತ್ತು ಸ್ಫೋಟದ ಸಂದರ್ಭದಲ್ಲಿ ನಾಸಿಕ ದ್ವಾರ ಮತ್ತ ಬಾಯಿ ಎರಡೂ ತೆರೆದುಕೊಳ್ಳುತ್ತದೆ. ಬಾಯಿ ಮತ್ತು ನಾಸಿಕ ಈ ಎರಡು ಮಾರ್ಗಗಳಲ್ಲಿ ಗಾಳಿಯು ಸಂಚಾರ ವಾಗುತ್ತಿದ್ದರೂ ನಾಸಿಕ

ಭಾಗವೇ ಇಂತಹ ವ್ಯಂಜನಗಳಲ್ಲಿ ಮುಖ್ಯವಾಗಿರುವುದರಿಂದ ಇಂತಹ ವ್ಯಂಜನಗಳನ್ನು ನಾಸಿಕ್ಯವ್ಯಂಜನಗಳೆಂದು ಕರೆಯುತ್ತಾರೆ. ಸ್ಪರ್ಶವ್ಯಂಜನವರ್ಗಗಳ ಕೊನೆಯ ವ್ಯಂಜನಗಳನ್ನು ನಾಸಿಕ್ಯವ್ಯಂಜನಗಳೆಂದು ಕರೆಯುತ್ತಾರೆ, ಮ,ಙ,ಞ,ನ,ಣ ಗಳು ನಾಸಿಕ್ಯ ವ್ಯಂಜನಗಳಾಗಿವೆ, ನಾಲಗೆ ಮತ್ತು ತುಟಿಗಳ ಸಂಪರ್ಕದಿಂದ 'ಮ' ನಾಸಿಕ್ಯ ವ್ಯಂಜನವೂ, ನಾಲಗೆ ಮತ್ತು ಮೇಲಿನ ದಂತದ ಹಿಂಭಾಗದ ಸಂಪರ್ಕದಿಂದ 'ನ' ನಾಸಿಕ್ಯ ವ್ಯಂಜನವೂ , ನಾಲಗೆಯು ಮೂರ್ಧನ್ಯ ಭಾಗಕ್ಕೆ ತಾಡನವಾಗಿ 'ಣ' ನಾಸಿಕ್ಯ ವ್ಯಂಜನವೂ, ನಾಲಗೆ ಮತ್ತು ಕೋಮಲತಾಲು ಪರಸ್ಪರ ಸಂಪರ್ಕ ಹೊಂದಿ 'ಙ' ನಾಸಿಕ್ಯ ವ್ಯಂಜನವೂ, ಮತ್ತು ನಾಲಗೆಯು ತಾಲವ್ಯ ಭಾಗಕ್ಕೆ ಸಂಪರ್ಕ ಹೊಂದಿ 'ಞ' ನಾಸಿಕ್ಯ ವ್ಯಂಜನವೂ ಜನಿಸುತ್ತವೆ. ಇಲ್ಲಿ ಗಮನಿಸಬಹುದಾದ ಇನ್ನೊಂದು ಮುಖ್ಯವಿಚಾರವೆಂದರೆ ಸ್ಪರ್ಶ ವ್ಯಂಜನಗಳಂತೆ ಇಲ್ಲಿ ಹವೆಯು ಯಾವುದೇ ರೀತಿಯಘರ್ಷಣೆಗೆ ಒಳಗಾಗುವುದಿಲ್ಲ. ಸಹಜವಾಗಿಯೇ 'ಙ' ಮತ್ತು 'ಞ' ನಾಸಿಕ್ಯ ವ್ಯಂಜನಗಳನ್ನು ಉಚ್ಚಾರಮಾಡುವಾಗ ಕರಣ ಮತ್ತು ಸ್ಥಾನಗಳ ನಡುವೆ ಪರಸ್ಪರ ಸ್ಪರ್ಶವೂ ಗತಿಸುವುದಿಲ್ಲ. ಆದ್ದರಿಂದ ಇವು ಉಳಿದ ನಾಸಿಕ್ಯ ವ್ಯಂಜನಗಳಿಗಿಂತ ತುಸು ಭಿನ್ನವಾಗಿವೆ.

**ಪಾರ್ಶ್ವಿಕ ಅಥವಾ ಪಾರ್ಶ್ವವ್ಯಂಜನಗಳು**

ಪಾರ್ಶ್ವಿಕ ವ್ಯಂಜನಗಳೆಂದರೆ ಹವೆಯು ಮುಖವಿವರದಲ್ಲಿ ಪ್ರಸಾರವಾಗುವಾಗ ನಾಲಗೆಯ ಎರಡೂ ಪಾರ್ಶ್ವಗಳಲ್ಲಿ ಪ್ರಸಾರವಾಗಲ್ಪಡುತ್ತದೆ. 'ಲ' ಕಾರವನ್ನು ಉದಾಹರಣೆಯಾಗಿ ಹೇಳಬಹುದು. ಹವೆಯು ನಾಲಗೆಯ ಎರಡೂ ಪಾರ್ಶ್ವಗಳಲ್ಲಿ ಹೊರಸುಸಲ್ಪಡುತ್ತದೆ. ನಾಲಗೆಯ ತುದಿಯು ಮೇಲಿನ ದಂತದ ಹಿಂಭಾಗ ತಾಗಿ ಕೊಂಡಿರುತ್ತದೆ. ಆಗ ನಾಲಗೆಯ ಎರಡೂಬದಿಗಳಲ್ಲಿ ಹವೆಯು ಹೊರಹೋಗುತ್ತಿರುತ್ತದೆ. ಕನ್ನಡದಲ್ಲಿ 'ಳ' ವ್ಯಂಜನವನ್ನು ಉಚ್ಚಾರ ಮಾಡುವ ಸಂದರ್ಭದಲ್ಲಿ ಇದೇರೀತಿಯ ರಚನೆಯನ್ನು ಕಾಣಬಹುದಾಗಿದೆ.

**ಲುಂಠಿತ / ಲೋಡಿತ ವ್ಯಂಜನಗಳು.**

ಯಾವ ವ್ಯಂಜನಗಳನ್ನು ಉಚ್ಚಾರಮಾಡುವಾಗ ಸ್ಥಾನ ಮತ್ತು ಕರಣಗಳ ನಡುವೆ ಪರಸ್ಪರ ಲುಂಠನ ಅಥವಾ ಪುನರಾವರ್ತನವಾಗುವ ರೀತಿಯಲ್ಲಿ ಅವರೋಧನ ಘರ್ಷಣೆ

ಯಾಗುತ್ತಿರುತ್ತದೋ ಅಂತಹ ವ್ಯಂಜನಗಳನ್ನು ಲೋಡಿತ ಅಥವಾ ಲುಂಠಿತ ವ್ಯಂಜನಗಳೆಂದು ಕರೆಯುತ್ತಾರೆ. ಉದಾಹರಣೆಗೆ 'ರ' ಕಾರವನ್ನು ಉಚ್ಚಾರಮಾಡುವಾಗ ಮುಖವಿವರದಲ್ಲಿ ಹವೆಯು ಆಗಮನವಾಗಿ ಸ್ಥಾನ ಮತ್ತು ಕರಣಗಳು ಪರಸ್ಪರ ಘರ್ಷಣೆಗೆ ಒಳಗಾಗಿ ಒಂದೇರೀತಿಯ ಧ್ವನಿಯು ಪುನರವರ್ತನೆಯಾಗುವ ರೀತಿಯಲ್ಲಿ ಲುಂಠಿತ ಗೊಳ್ಳುತ್ತಿರುತ್ತದೆ. 'ರ' ಕಾರವು ಹೊರ ನೋಟಕ್ಕೆ ಒಂದೇ ವರ್ಣದ ರೀತಿಯಲ್ಲಿ ಉಚ್ಚಾರ ಸ್ವರೂಪದಂತೆ ಗೋಚರವಾಗುತ್ತಿದ್ದರೂ ಅದರ ಉಚ್ಚಾರಣಾ ಪ್ರಕ್ರಿಯೆಯನ್ನು ಗಮನಿಸಿದಾಗ 'ರ' ವರ್ಣವು ಸ್ಥಾನ ಮತ್ತು ಕರಣಗಳ ನಡುವೆ ಒಂದಕ್ಕಿಂತ ಹೆಚ್ಚುಸಲ ಪುನರಾವರ್ತನೆ ಆಗುವುದು ಕಂಡುಬರುತ್ತದೆ. ಹೀಗೆ ಸ್ಪರ್ಶಗಳು ಲುಂಠಿತಗೊಂಡು ಉಚ್ಚಾರಣೆಯಾದರೆ ಅಂತಹ ವ್ಯಂಜನಗಳನ್ನು ಲುಂಠಿತ ವ್ಯಂಜನಗಳೆಂದು ಕರೆಯುತ್ತಾರೆ. ಇವುಗಳಿಗೆ ಕಂಪನಯುಕ್ತ ವ್ಯಂಜನಗಳೆಂದೂ ಕರೆಯುತ್ತಾರೆ.

**ಅರ್ಧಸ್ವರ ಅಥವಾ ಅರ್ಧವ್ಯಂಜನಗಳು**

ಕೆಲವು ಧ್ವನಿಗಳು ವ್ಯಂಜನದ ಉಚ್ಚರಣಾ ಲಕ್ಷಣವನ್ನೂ ಮತ್ತ ಸ್ವರದ ಉಚ್ಚಾರಣಾ ಲಕ್ಷಣವನ್ನೂ ಹೊಂದಿರುತ್ತವೆ. ಅಂತಹ ಧ್ವನಿಗಳನ್ನು ಅರ್ಧ ಸ್ವರ ಅಥವಾ ಅರ್ಧ ವ್ಯಂಜನವೆಂತಲೂ ಕರೆಯಬಹುದಾಗಿದೆ. 'ಯ' ಮತ್ತು 'ವ' ಗಳನ್ನು ಉದಾಹರಣೆಯಾಗಿ ಹೆಸರಿಸಬಹುದಾಗಿದೆ. ಏಕೆಂದರೆ 'ಯ' ಮತ್ತು 'ವ' ಗಳನ್ನು ಉಚ್ಚಾರಮಾಡುವಾಗ ಇತರ ವ್ಯಂಜನಗಳನ್ನು ಉಚ್ಚಾರ ಮಾಡುವ ಸಂದರ್ಭದಲ್ಲಿ ಉಂಟಾಗುವ ಹಾಗೆ ಕರಣ ಮತ್ತು ಸ್ಥಾನಗಳ ನಡುವೆ ಯಾವುದೇ ರೀತಿ ಸ್ಪರ್ಶ ಸಂಭವಿಸುವುದಿಲ್ಲ. ಸ್ವರಗಳ ಉಚ್ಚಾರದಂತೆ ನಾಲಗೆಯ ಏರಿಳಿತ ಸಂಭವಿಸಬಹುದೇ ಹೊರತು ಅವುಗಳ ತಾಡನವಾಗುವುದಿಲ್ಲ. ಅದ್ದರಿಂದ ಇವುಗಳನ್ನು ಸ್ವರದ ಗುಂಪಿಗೂ ಸೇರಿಸಬಹುದಾಗಿದೆ. ಅದೇರೀತಿ ಶಬ್ದ ರಚನೆಯನ್ನು ಗಮನಿಸಿದಾಗ ಸ್ವರಗಳ ಭಾಷೆಯಲ್ಲಿ ಪ್ರಯೋಗವಾಗುವಿಕೆಯನ್ನು ಗಮನಿಸಿದಾಗ ಸ್ವರಗಳು ಸ್ವತಂತ್ರವಾಗಿ ಶಬ್ದದ ಮೊದಲು ಆರಂಭದ ಸ್ವರವಾಗಿ ಬರುತ್ತೇವೆಯೇ ಹೊರತು ಶಬ್ದದ ಮಧ್ಯ, ಅಥವಾ ಅಂತ್ಯಗಳಲ್ಲಿ ಬರಲಾರವು. ಕೇವಲ ವ್ಯಂಜನಗಳ ಸಹಯೊಗದೊಂದಿಗೆ ಮಾತ್ರ ಸ್ವರಗಳು ಶಬ್ದದ ಆದಿ, ಮಧ್ಯ, ಮತ್ತು ಅಂತ್ಯಗಳಲ್ಲಿ ಬರುತ್ತವೆ, ಈ ದೃಷ್ಟಿಯಿಂದ ಗಮನಿಸುವುದಾರೆ 'ಯ' ಮತ್ತು 'ವ' ಗಳು ಉಳಿದ ವ್ಯಂಜನಗಳ ರೀತಿಯಲ್ಲಿ ಶಬ್ದ ಆದಿಯಲ್ಲಿಯೂ, ಮಧ್ಯದಲ್ಲಿಯೂ, ಮತ್ತು

ಅಂತ್ಯದಲ್ಲಿಯೂ ಸ್ವತಂತ್ರವಾಗಿ ಬರುತ್ತವೆ. ಆದ್ದರಿಂದ ಇವುಗಳು ವ್ಯಂಜನಗಳ ಲಕ್ಷಣವನ್ನು ಹೊಂದಿವೆ, ವರ್ಣದ ಉಚ್ಚಾರಣೆಯ ದೃಷ್ಟಿಯಿಂದ ಸ್ವರದ ಲಕ್ಷಣವನ್ನು ಹೊಂದಿದ್ದರೆ ಅವು ಪ್ರಾಯೋಗಿಕವಾಗಿ ಭಾಷಾ ಬಳಕೆಯ ದೃಷ್ಟಿಯಿಂದ ವ್ಯಂಜನಗಳ ಲಕ್ಷಣಹೊಂದಿವೆ.

**ಸ್ಥಾನಗಳ ಆಧಾರದ ಮೇಲೆ ವ್ಯಂಜನಗಳ ವರ್ಗೀಕರಣ**

ಸ್ಥಾನಗಳೆಂದರೆ ಹಿಂದಿನ ಶೀರ್ಷಿಕೆಯಲ್ಲಿ ವಿವರಿಸಿದ ಹಾಗೆ ಅರ್ಥದಲ್ಲಿ ಇಲ್ಲಿ ಬಳಸಲಿಲ್ಲ. ಅಲ್ಲಿ ಮುಖವಿವರದ ಅಂಗಾಂಗಗಳ ಬಗ್ಗೆ ಸಾಮಾನ್ಯ ಪರಿಭಾಷೆಯಲ್ಲಿ ಬಳಸಲಾಗಿದೆ. ಆದರೆ ಈ ಶೀರ್ಷಿಕೆಯಡಿಯಲ್ಲಿ ಸ್ಥಾನದ ಅರ್ಥವನ್ನು ಧ್ವನಿಯ ಉಚ್ಚಾರಣೆಯಲ್ಲಿ ಚಲಿಸಲಾರದ ಮತ್ತು ಸ್ಥಿರವಾಗಿರುವ ಮುಖವಿವರದ ಅಂಗಾಂಗಗಳು ಎಂದು ಅರ್ಥೈಸಲಾಗಿದೆ. ಆದ್ದರಿಂದ ಸ್ಥಾನಗಳ ಮೂಲಕ ಧ್ವನಿಗಳ ವರ್ಗೀಕರಣ ವೆಂದರೆ ಮುಖವಿವರದಲ್ಲಿ ಚಲಿಸಲಾರದ ಮೇಲಿನ ತುಟಿಯಿಂದ, ಮೇಲ್ದಂತ, ತಾಲು, ಮತ್ತಿತರ ಸ್ಥಾನಗಳನ್ನು ಆಧರಿಸಿ ಆಯಾಸ್ಥಾನಗಳಲ್ಲಿ ಉತ್ಪತ್ತಿಯಾಗುವ ವ್ಯಂಜನಗಳನ್ನು ಆಯಾಸ್ಥಾನದ ಹೆಸರಿನಲ್ಲಿಯೇ ವರ್ಗೀಕರಣಮಾಡುವುದಾಗಿದೆ. ಮುಖ್ಯವಾದ ಕೆಲವು ಪ್ರಕಾರಗಳು ಈಕೆಳಗಿನಂತಿವೆ.

**ಅ) ಸ್ವರಯಂತ್ರಮುಖಿ ವ್ಯಂಜನಗಳು**

ಯಾವ ವ್ಯಂಜನಗಳನ್ನು ಸ್ವರಯಂತ್ರದ ಮೂಲಕ ಉಚ್ಚಾರಮಾಡುತ್ತೇವೆಯೋ ಅಂತಹ ವ್ಯಂಜನಗಳಿಗೆ ಸ್ವರಯಂತ್ರಮುಖೀ ವ್ಯಂಜನಗಳೆಂದು ಕರೆಯುತ್ತಾರೆ. ಉದಾಹರಣೆಗೆ 'ಹ' ವ್ಯಂಜನವನ್ನು ಸ್ವರಯಂತ್ರಮುಖಿ ವ್ಯಂಜನವೆಂದು ಕರೆಯುತ್ತಾರೆ. ಜೊತೆಗೆ ಕಾಕಲ್ಯ ಮತ್ತು ಉರಸ್ಯ ಸ್ಥಾನಗಳು ಕೂಡ ಬಳಕೆಯಾಗುವುದರಿಂದ ಕಾಕಲ್ಯ ವ್ಯಂಜನವೆಂದೂ, ಉರಸ್ಯವ್ಯಂಜನವೆಂದೂ ಕರೆಯುತ್ತಾರೆ.

**ಆ) ಉಪ ಅಲಿಜಿಹ್ವೆ ವ್ಯಂಜನಗಳು**

ಸ್ವರಯಂತ್ರ ಮತ್ತು ಅಲಿಜಿಹ್ವ ನಡುವೆ ಇರುವ ಧ್ವನ್ಯುತ್ಪಾದನಾ ಸ್ಥಾನವನ್ನು ಉಪ ಅಲಿಜಿಹ್ವೆ ಎಂದು ಕರೆಯಲಾಗಿದೆ. ಆದರೆ ಈ ಸ್ಥಾನಗಳಲ್ಲಿ ಉಚ್ಚಾರವಾಗುವ ಧ್ವನಿಗಳು

ಭಾರತೀಯ ಭಾಷೆಗಳಲ್ಲಿ ಗೋಚರವಾಗುವುದಿಲ್ಲ. ಅರಬ್ಬೀ ಮತ್ತು ದಕ್ಷಿಣಆಫ್ರಿಕಾ ಭಾಷೆಗಳಲ್ಲಿ ಇಂತಹ ರಚನೆಗಳನ್ನು ಕಾಣಬಹುದಾಗಿದೆ. ಉದಾಹರಣೆಗೆ ಅರಬ್ಬೀ ಭಾಷೆಯಲ್ಲಿ 'ಬದೀ ಹೈ' ಎನ್ನುವಲ್ಲಿ ಮತ್ತು 'ಐನ್' ಎಂಬುದನ್ನು ಉಚ್ಚಾರ ಮಾಡುವಲ್ಲಿ ಉಪ ಆಲಿಜಿಹ್ವೆ ಬಳಸುತ್ತಾರೆ.

**ಇ)ಆಲಿಜಿಹ್ವೀಯ ವ್ಯಂಜನಗಳು**

ಆಲಿಜಿಹ್ವೆಯ ಸಹಯೋಗದೊಂದಿಗೆ ಉಚ್ಚಾರಗೊಳ್ಳುವ ವ್ಯಂಜನಗಳನ್ನು ಆಲಿಜಿಹ್ವೆ ವ್ಯಂಜನಗಳೆಂದು ಕರೆಯುತ್ತಾರೆ. ನಾಲಗೆಯ ಪಶ್ಚಭಾಗಕ್ಕಿಂತಲೂ ಹಿಂಭಾಗವನ್ನು ಅಲಿಜಿಹ್ವಾಭಾಗ ಎಂದು ಕರೆಯುತ್ತಾರೆ ಅಲ್ಲಿ ಉಚ್ಚಾರವಾಗುವ ವ್ಯಂಜನಗಳಾಗಿವೆ. ಇವುಗಳಿಗೆ ಜಿಹ್ವಾಮೂಲೀಯ ವ್ಯಂಜನಗಳೆಂದೂ ಕರೆಯುತ್ತಾರೆ. ಉದಾಹರಣೆಗೆ :ಕ, :ಖ ಗಳು. ಜಿಹ್ವಾಮೂಲೀಯಗಳನ್ನು ಕನ್ನಡದ ಕೇಶಿರಾಜನೂ ಉಲ್ಲೇಖಿಸಿದ್ದಾನೆ.

**ಈ) ಕೋಮಲ ತಾಲವ್ಯ ವ್ಯಂಜನಗಳು:**

ಈ ಉಚ್ಚಾರಣಾಸ್ಥಾನವನ್ನು 'ಕಂಠ್ಯ' ಎಂದೂ ಕರೆಯುತ್ತಾರೆ. ಯಾವ ವ್ಯಂಜನಗಳು ಕಂಠಸ್ಥಾನದಲ್ಲಿ ಉಚ್ಚಾರಣೆಯನ್ನು ಹೊಂದುತ್ತವೆಯೋ ಅಂತಹ ವ್ಯಂಜನಗಳಿಗೆ ಕೋಮಲತಾಲವ್ಯ ಅಥವಾ ಕಂಠ್ಯ ವ್ಯಂಜನಗಳೆಂದು ಕರೆಯುತ್ತಾರೆ. ನಾಲಗೆಯ ಪಶ್ಚಭಾಗವು ಮೇಲಿನ ಕೋಮಲತಾಲುವಿಗೆ ಸ್ಪರ್ಶಿಸಿ ಒಮ್ಮೆಲೆ ಸ್ಫೋಟಿಸಿ ಕಂಠ್ಯ ವ್ಯಂಜನಗಳು ಜನಿಸುತ್ತವೆ. ಉದಾಹರನೆಗೆ ಕ,ಖ,ಗ,ಘ,ಙ ಇವುಗಳನ್ನು ಕಂಠ್ಯ ವ್ಯಂಜನಗಳೆಂದು ಕರೆಯುತ್ತಾರೆ.

**ಉ)ಮೂರ್ಧನ್ಯವ್ಯಂಜನಗಳು**

ಮೂರ್ಧನ್ಯ ಭಾಗಗಳೆಂದರೆ ಮುಖವಿವರದಲ್ಲಿ ಮಧ್ಯ ಜಿಹ್ವೆಯ ಮೇಲ್ಭಾಗದಲ್ಲಿರುವ ಧ್ವನ್ಯುತ್ಪಾದನಾ ಸ್ಥಾನಗಳು. ನಿಶ್ವಾಸ ಕ್ರಿಯೆ ನಡೆಯುತ್ತಿರುವಾಗ ಹವೆಯನ್ನು ನಾಲಗೆಯು ತುದಿಯು ಮೂರ್ಧನ್ಯಭಾಗದೊಡನೆ ಒಂದು ಸಲ ತಡೆಹಿಡಿದು ಒಮ್ಮೆಲೇ ಸ್ಫೋಟಗೊಳ್ಳುವಂತೆ ಮಾಡುತ್ತದೆ ಆಗ ಮೂರ್ಧನ್ಯವ್ಯಂಜನಗಳು ಹುಟ್ಟುತ್ತವೆ.

ಪಾಣಿನಿಯು ಇಂತಹ ವ್ಯಂಜನಗಳನ್ನು ಸ್ಪಷ್ಟವಾಗಿ ಸೂತ್ರದಮೂಲಕ ವಿವರಿಸಿದ್ದಾನೆ. 'ಋಟುರಷಾಣಾಂ ಮೂರ್ಧಾ' ( ಅಂದರೆ ಋ, ಟವರ್ಗ (ಟ,ಠ,ಡ,ಢ,ಣ) ರ, ಮತ್ತು ಷ ಗಳು ಮೂರ್ಧನ್ಯಸ್ಥಾನದಲ್ಲಿ ಹುಟ್ಟುತ್ತವೆ.) ಎಂದು ಹೇಳಿದ್ದಾನೆ.

**ಊ)ತಾಲವ್ಯ ಅಥವಾ ಕಠೋರ ತಾಲವ್ಯ ವ್ಯಂಜನಗಳು**

ಯಾವ ವ್ಯಂಜನಗಳನ್ನು ಉಚ್ಚಾರ ಮಡುವಾಗ ತಾಲವ್ಯವನ್ನು ಸ್ಥಾನ ಬಳಸಿಕೊಂಡು ಉಚ್ಚಾರ ಮಾಡುತ್ತೇವೆಯೋ ಅಂತಹ ವ್ಯಂಜನಗಳಿಗೆ ತಾಲವ್ಯ ವ್ಯಂಜನಗಳೆಂದು ಕರೆಯುತ್ತೇವೆ. ನಾಲಗೆಯ ಅಗ್ರಭಾಗವು ಮೇಲ್ಭಾಗದ ತಾಲವ್ಯಸ್ಥಾನಕ್ಕೆ ಸ್ಪರ್ಶಿಸಿ ಹವೆಯನ್ನು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡುತ್ತದೆ ಇಲ್ಲಿ ತಾಲುವನ್ನು ಸ್ಥಾನಮಾಡಿಕೊಂಡು ವ್ಯಂಜನಗಳು ಉದ್ಗಮವಾಗುತ್ತವೆಯಾದ ಕಾರಣ ವ್ಯಂಜನಗಳಿಗೆ ತಾಲವ್ಯ ವ್ಯಂಜನಗಳೆಂದು ಕರೆಯುತ್ತಾರೆ. ಪಾಣಿನಿಯು ತಾಲವ್ಯ ಸ್ಥಾನ ಆಧರಿಸಿ ಉತ್ಪತ್ತಿಯಾಗುವ ಧ್ವನಿಗಳನ್ನು ಕುರಿತು 'ಇಚುಯಶಾನಾಂ ತಾಲು' ಎಂದು ಹೇಳಿದ್ದಾನೆ (ಇ,ಚವರ್ಗ (ಚ,ಛ,ಜ,ಝ,ಞ) ,ಯ,ಶ ಇವು ತಾಲವ್ಯ ಧ್ವನಿಗಳೆಂದು ಕರೆದಿದ್ದಾನೆ.)

**ಎ) ವರ್ತ್ಸ್ಯ ವ್ಯಂಜನಗಳು :**

ಯಾವ ಧ್ವನಿಗಳನ್ನು ಉಚ್ಚಾರ ಮಾಡುವಾಗ ವರ್ತ್ಸ್ಯಸ್ಥಾನವನ್ನು ಬಳಸಿ ಉಚ್ಚಾರ ಮಾಡುತ್ತೇವೆಯೋ ಅಂತಹ ವ್ಯಂಜನಗಳನ್ನು ವರ್ತ್ಸ್ಯವ್ಯಂಜನಗಳೆಂದು ಕರೆಯುತ್ತೇವೆ. ನ,ಲ,ರ,ಸ, ಹಾಗೆಯೇ ಚ ವರ್ಗ ಈ ಪ್ರಕಾರದ ವ್ಯಂಜನಗಳೆಂದು ಕರೆಯುತ್ತಾರೆ. ಶ್ ವ್ಯಂಜನವನ್ನು ವರ್ತ್ಯ ವ್ಯಂಜನದ ಗುಂಪಿಗೆ ಸೇರಿಸುತ್ತಾರೆ.

**ಏ)ದಂತ್ಯ ವ್ಯಂಜನಗಳು**

ದಂತದ ಸಹಾಯದಿಂದ ಉಚ್ಚರಿತವಾಗುವ ವ್ಯಂಜನಗನ್ನು ದಂತ್ಯ ವ್ಯಂಜನಗಳೆಂದು ಕರೆಯುತ್ತಾರೆ. ನಾಲಗೆಯು ಮೇಲ್ದಂತದ ಹಿಂಭಾಗವನ್ನು ಸ್ಪರ್ಶಿಸಿ ಒಮ್ಮಲೆ ಹವೆಯನ್ನು ಹೊರದೂಡಿದಾಗ ಉಚ್ಚರಿತವಾಗುವ ವ್ಯಂಜನಗಳನ್ನು ದಂತ್ಯ ವ್ಯಂಜನಗಳೆಂದು ಕರೆಯುತ್ತಾರೆ. ಪಾಣಿನಿಯು 'ಲೃತುಲಸಾನಾಂ ದಂತಾಃ' ಕರೆದಿದ್ದಾನೆ.

(ಲೃ, ತ ವರ್ಗ(ತ,ಥ,ದ,ಧ,ನ) ಲ, ಸ, ವ್ಯಂಜನ ಗಳನ್ನು ದಂತ್ಯ ವ್ಯಂಜನಗಳೆಂದು ಕರೆದಿದ್ದಾರೆ.)

**ಒ) ದಂತೋಷ್ಠ ವ್ಯಂಜನಗಳು**

ಯಾವವ್ಯಂಜನಗಳನ್ನು ಉಚ್ಚಾರಮಾಡುವಾಗ ದಂತ್ಯ ಮತ್ತು ಓಷ್ಠ ಎರಡೂ ಸ್ಥಾನಗಳನ್ನು ಬಳಸುತ್ತಾ ಧ್ವನ್ಯುತ್ಪಾದನೆಯನ್ನು ಮಾಡುತ್ತೇವೆಯೋ ಅಂತಹ ವ್ಯಂಜನಗಳನ್ನು ದಂತೋಷ್ಠ್ಯ ವ್ಯಂಜನಗಳೆಂದು ಕರೆಯುತ್ತಾರೆ. ವ ದಂತೋಷ್ಠ್ಯಧ್ವನಿಯಾಗಿದೆ.

**ಓ) ಓಷ್ಠ್ಯ ವ್ಯಂಜನಗಳು**

ಓಷ್ಠ ಗಳೆಂದರೆ ತುಟಿಗಳೆಂದು ಅರ್ಥ. ಓಷ್ಠ್ಯ ವ್ಯಂಜನಗಳೆಂದರೆ ತುಟಿಗಳ ಸಹಾಯದಿಂದ ಉಚ್ಚಾರಗೊಳ್ಳುವ ವ್ಯಂಜನಗಳೆಂದು ಅರ್ಥ. ಪಾಣಿನಿಯು ಇದನ್ನು ಸೂತ್ರ ಬದ್ದವಾಗಿ 'ಉಪುಪಧ್ಮಾನೀಯಾನಾಂ ಓಷ್ಠೌ' ಎಂದು ಕರೆದಿದ್ದಾನೆ. ಉದಾ: ಪವರ್ಗ, ಉಪಧ್ಮಾನೀಯ, ಉ ವರ್ಣ ಇತ್ಯಾದಿ.

## ಸ್ವರ ತಂತ್ರಗಳ ಆಧಾರದ ಮೇಲೆ ವ್ಯಂಜನಗಳ ವರ್ಗೀಕರಣ

ಸ್ವರತಂತ್ರ ಆಧಾರದ ಮೇಲೆ ವ್ಯಂಜನಗಳನ್ನು ಎರಡು ರೀತಿಯಲ್ಲಿ ವರ್ಗಿಕರಿಸ ಬಹುದಾಗಿದೆ.ಒಂದು ಘೋಷ ವ್ಯಂಜನಗಳು ಮತ್ತು ಅಘೊಷ ವ್ಯಂಜನಗಳು. ಘೋಷ ವ್ಯಂಜನಗಳನ್ನು ಉಚ್ಚಾರಮಾಡುವಾಗ ಸ್ವರತಂತ್ರಗಳು ಹವೆಯನ್ನು ಹೊರಸೂಸುವಾಗ ಸ್ಥಾನ ಮತ್ತು ಕರಣಗಳು ಪರಸ್ಪರ ಸಮೀಪಬಂದು ಹವೆಯು ಕಂಪನಕ್ಕೊಳಗಾಗಿ ವ್ಯಂಜನಗಳು ಉಚ್ಚಾರಗೊಳ್ಳಲ್ಪಡುತ್ತವೆ. ಮತ್ತು ಇನ್ನು ಕೆಲವು ವ್ಯಂಜನಗಳನ್ನು ಉಚ್ಚಾರ ಮಾಡುವಾಗ ಸ್ಥಾನ ಮತ್ತು ಕರಣಗಳ ನಡುವೆ ಪರಸ್ಪರ ಯಾವುದೇ ರೀತಿಯ ಕಂಪನ ಉಂಟಾಗುವುದಿಲ್ಲ. ಅಂತಹ ವ್ಯಂಜನಗಳನ್ನು ಅಘೋಷ ವ್ಯಂಜನಗಳೆಂದು ಕರೆಯುತ್ತಾರೆ. ಅಘೋಷ ವ್ಯಂಜನಗಳು ಯಾವುದೆಂದರೆ ಪ್ರತಿಯೊಂದು ವರ್ಗೀಯವ್ಯಂಜನಗಳ ಮೊದಲ, ಎರಡನೇಯ ವ್ಯಂಜನಗಳನ್ನು ಅಘೋಷ ವ್ಯಂಜನಗಳೆಂದು ಕರೆಯುತ್ತಾರೆ. ಅದೇರೀತಿ ಪ್ರತಿಯೊಂದು ವರ್ಗೀಯ ವ್ಯಂಜನಗಳ ಮೂರು, ನಾಲ್ಕನೆಯ ಮತ್ತು ಐದನೆಯ ವ್ಯಂಜನಗಳು ಘೋಷ ವ್ಯಂಜನಗಳೆಂದು

ಕರೆಯುತ್ತಾರೆ. ಕ,ಖ,ಚ,ಛ,ಟ,ಠ,ತ,ಥ,ಪ,ಫ,ಗಳು ಅಘೋಷ ವ್ಯಂಜನಗಲಾದರೆ ,ಗ,ಘ,ಙ,ಜ,ಝ,ಞ,ಡ,ಢ,ಣ,ದ,ಧ,ನ,ಬ,ಭ,ಮ ಇವು ಘೋಷ ವ್ಯಂಜನಗಳಾಗಿವೆ.

**ಶ್ವಾಸದ ತೀವ್ರತೆ ಅಥವಾ ಶಕ್ತಿಯ ಆಧಾರದ ಮೇಲೆ ವ್ಯಂಜನಗಳ ವರ್ಗೀಕರಣ**

ಪ್ರತಿಯೊಂದು ಧ್ವನಿ ಉಚ್ಚಾರಣೆಯು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ, ಸೂಕ್ಷ್ಮವಾಗಿ ಗಮನಿಸಿದಾಗ ಎಲ್ಲರೂ ಒಂದೇ ಧ್ವನಿಯನ್ನು ಏಕರೀತಿಯಾಗಿ ಉಚ್ಚರಿಸಲಾರರು. ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆಯಿರುತ್ತದೆ. ಅದೇರೀತಿ ನಾವು ಧ್ವನಿಗಳನ್ನು ಉಚ್ಚಾರ ಮಾಡುವಾಗ ಕೆಲವು ಧ್ವನಿಗಳನ್ನು ಹೆಚ್ಚುಹವೆಯನ್ನು ಬಳಸಿ ಉಚ್ಚಾರಮಾಡುತ್ತೇವೆ. ಇನ್ನು ಕೆಲವು ಧ್ವನಿಗಳಿಗೆ ಸ್ವಲ್ಪ ಕಡಿಮೆ ಹವೆಯನ್ನು ಬಳಸುತ್ತೇವೆ. ಶ್ವಾಸ ಅಥವಾ ಹವೆಯನ್ನು ಪಡೆದುಕೊಳ್ಳುವ ಸ್ವರೂಪವು ಭಿನ್ನವಾಗಿರುತ್ತದೆ, ಅವೆಲ್ಲವನ್ನು ನಿರ್ದಿಷ್ಟವಾಗಿ ತೋರಿಸುವುದು ಅಸಾಧ್ಯ ಮತ್ತು ಅನವಶ್ಯಕ ವಾದುದಾಗಿದೆ. ಪ್ರಸ್ತುತ ಶೀರ್ಷಿಕೆಗೆ ಸಂಬಂಧಿಸಿದಂತೆ ಪ್ರಾಣ ಎಂದರೆ ವಾಯು ಎಂದರ್ಥ ಧ್ವನ್ಯುಚ್ಚಾರನೆಯಲ್ಲಿ ವಾಯುವಿನ ತೀವ್ರತೆಯನ್ನು ಗಮನಿಸಿ ವ್ಯಂಜನಗಳನನ್ನು ವರ್ಗೀಕರಿಸುವ ವಿಧಾನ ಇದಾಗಿದೆ. ಉದಾಹರಣೆಗೆ ಅಲ್ಪಪ್ರಾಣ ಮತ್ತು ಮಹಾಪ್ರಾಣ ವ್ಯಂಜನಗಳು. ಶಬ್ದವೇ ಸೂಚಿಸುವಂತೆ ಅಲ್ಪಪ್ರಾಣವೆಂದರೆ ಸ್ವಲ್ಪ ಉಸಿರಿನಿಂದ ಉಚ್ಚಾರವಾಗುವಂತಹವು. ಅದೇರೀತಿ ಮಹಾಪ್ರಾಣವೆಂದರೆ ಹೆಚ್ಚು ಉಸಿರಿನಿಂದ ಉಚ್ಚರಿತವಾಗುವ ವ್ಯಂಜನಗಳು. ಸಾಮಾನ್ಯವಾಗಿ ಮಹಾಪ್ರಾಣ ವ್ಯಂಜನಗಳನ್ನು ಉಚ್ಚಾರಮಾಡುವಾಗ ಪ್ರತಿಯೊಂದು ವ್ಯಂಜನದ ಆರಂಭದಲ್ಲಿ 'ಹ' ವ್ಯಂಜನವು ಅಗಮ್ಯವಾಗಿ ಉಚ್ಚಾರವಗುತ್ತದೆ, ಆದ್ದರಿಂದ ಮಹಾಪ್ರಾಣ ವ್ಯಂಜನಗಳನ್ನು 'ಹ' ಯುಕ್ತ ವ್ಯಂಜನವೆಂದೂ ಕರೆಯುತ್ತಾರೆ. ಅದೇರೀತಿ ಅಲ್ಪಪ್ರಾಣ ವ್ಯಂಜನಗಳನ್ನು ಉಚ್ಚಾರ ಮಾಡುವಾಗ 'ಹ' ರಹಿತವಾಗಿ ಉಚ್ಚಾರಮಾಡುತ್ತೇವೆ, ಆದ್ದರಿಂದ ಅವುಗಳನ್ನು 'ಹ' ರಹಿತ ವ್ಯಂಜನಗಳೆಂದು ಕರೆಯುತ್ತಾರೆ. ಉದಾಹರಣೆಗೆ 'ಖ' ಎನ್ನುವ ವ್ಯಂಜನದ ಉಚ್ಚಾರಣೆ ಕ್+ಹ = ಖ, 'ಘ' ವ್ಯಂಜನದ ಉಚ್ಚಾರಣೆ, ಗ+ಹ =ಘ ಇತ್ಯಾದಿ. ಉದಾಹರಣೆಯನ್ನು ಗಮನಿಸಿದಾಗ ಇದು ಸ್ಪಷ್ಟಗೊಳ್ಳುತ್ತದೆ. ಅಲ್ಪಪ್ರಾಣಗಳು ಕ,ಗ,ಙ,ಚ,ಜ,ಞ,ಟ,ಡ,ಣ,ತ,ದ,ನ,ಪ,ಬ,ಮ. ಮಹಾಪ್ರಾಣಗಳು:ಖ.ಘ.ಛ,ಝ.ಠ.ಢ.ಥ.ಧ, ಫ.ಭ ಗಳಾಗಿವೆ.

### ಉಚ್ಚಾರಣಾ ಶಕ್ತಿಯನ್ನು ಆಧರಿಸಿ ವ್ಯಂಜನಗಳ ವರ್ಗೀಕರಣ

ಈ ಆಧಾರದ ಅಡಿಯಲ್ಲಿ ವ್ಯಂಜನಗಳನ್ನು ಸಶಕ್ತ ವ್ಯಂಜನಗಳು, ಅಶಕ್ತ ವ್ಯಂಜನಗಳು, ಮತ್ತು ಮಧ್ಯಮ ವ್ಯಂಜನಗಳೆಂದು ಮೂರುರೀತಿಯಾಗಿ ವರ್ಗೀಕರಿಸಬಹುದಾಗಿದೆ. ಕೆಲವು ಧ್ವನಿಗಳನ್ನು ಉಚ್ಚಾರಮಾಡುವಾಗ ಮುಖವಿವರದ ಮಾಂಸಖಂಡಗಳು ಬಿಗಿದು ಕೊಳ್ಳುತ್ತವೆ. ಅಥವಾ ದೃಢವಾಗುತ್ತವೆ. ಅಂತಹ ವ್ಯಂಜನಗಳನ್ನು ಸಶಕ್ತ ವ್ಯಂಜನಗಳೆಂದು ಕರೆದರೆ ಇನ್ನು ಕೆಲವು ವ್ಯಂಜನಗಳನ್ನು ಉಚ್ಚಾರ ಮಾಡುವಾಗ ಮುಖವಿವರ ಮೃದು ಗೊಳ್ಳುತ್ತದೆ. ಅಂತಹ ವ್ಯಂಜನಗಳನ್ನು ಅಶಕ್ತ ವ್ಯಂಜನಗಳೆಂದು ಕರೆಎಯುತ್ತರೆ. ಶಿಥಿಲವಾಗಿ ಧ್ವನಿಗಳು ಉಚ್ಚಾರ ಗೊಳ್ಳುತ್ತವೆ. ಕೇಶಿರಾಜ ಶಬ್ದಮಣಿದರ್ಪಣದಲ್ಲಿ ಶಿಥಿಲ ಸ್ವರೂಪವನ್ನು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅದೇರೀತಿ ಸಶಕ್ತ ಮತ್ತು ಅಶಕ್ತ ಎರಡರ ಗುಣಲಕ್ಷಣಗಳನ್ನು ಹೊಂದಿರುವ ಧ್ವನಿಗಳನ್ನು ಮಧ್ಯಮ ಎಂದು ಕರೆದಿದ್ದಾರೆ. ಉದಾಹರಣೆಗೆ ಸಶಕ್ತ ವ್ಯಂಜನಗಳಿಗೆ ಸ,ಟ, ಇತ್ಯಾದಿ, ಅಶಕ್ತ ವ್ಯಂಜನಗಳಿಗೆ ಲ,ರ, ಇತ್ಯಾದಿ ಮತ್ತು ಮಧ್ಯಮ ವ್ಯಂಜನಗಳಿಗೆ ಚ,ಶ ಇತ್ಯಾದಿ. 'ಸ' ವ್ಯಂಜನ ಉಚ್ಚಾರ ಮಾಡುವ ಸಂದರ್ಭದಲ್ಲಿ ಮುಖವಿವರವು ದೃಢವಾಗಿದ್ದರೆ 'ಲ' ವನ್ನು ಉಚ್ಚಾರ ಮಾಡುವಾಗ ಮೃದುಗೊಳ್ಳುತ್ತದೆ. ಅದೇರೀತಿ 'ಚ' ವನ್ನು ಉಚ್ಚಾರ ಮಾಡುವಾಗ ಸಶಕ್ತ ಮತ್ತು ಅಶಕ್ತ ಎರಡೂ ಸಮ್ಮಿಶ್ರಣಗೊಂಡು ಮಧ್ಯಮ ವ್ಯಂಜನವಾಗಿ ಬಳಕೆಯಾಗುತ್ತದೆ.

## ಅಧ್ಯಾಯ – 7 : ಉಪಸಂಹಾರ.

'ಧ್ವನಿ ಅಕ್ಷರ ವರ್ಣಮಾಲೆ' ಅಧ್ಯಯನವು ಕನ್ನಡದ ಇಂದಿನ ಅಳಿವು ಉಳಿವಿನ ಸಂಘರ್ಷದ ಹೋರಾಟದಲ್ಲಿ ವಾಸ್ತವತೆಯನ್ನು ಪಡೆಯುತ್ತದೆ. ಧ್ವನಿ, ಅಕ್ಷರ, ವರ್ಣಮಾಲೆ ಓದುಗರ ಉಚ್ಚಾರಣಾಸ್ಪಷ್ಟತೆಯನ್ನು ತಿದ್ದುವುದರಲ್ಲಿ ಸಂಶಯವಿಲ್ಲ. ಪ್ರಾಚೀನ ಮತ್ತು ಆಧುನಿಕ ದೃಷ್ಟಿಕೋನವನ್ನು ತೌಲನಿಕವಾಗಿ ಚಿಂತಿಸಿರುವುದರಿಂದ ಕನ್ನಡಕ್ಕೊಂದು ಶಾಸ್ತ್ರೀಯ ಚೌಕಟ್ಟನ್ನು ರೂಪಿಸಲು ಈ ಅಧ್ಯಯನ ಖಂಡಿತವಾಗಿಯೂ ತನ್ನದೇ ಕೊಡುಗೆ ನೀಡುತ್ತದೆ. ಕನ್ನಡಭಾಷೆಗೊದು ಶಾಸ್ತ್ರೀಯ ನೆಲೆಗಟ್ಟನ್ನು ನಿರ್ಮಿಸಿಕೊಟ್ಟಿದ್ದು ಸಂಸ್ಕೃತ ಭಾಷೆ. ವ್ಯಾಕರಣ, ಸಾಹಿತ್ಯ, ಯಾವ ಪ್ರಕಾರದಲ್ಲಿ ಯೋಚಿಸಿದರೂ ಸಂಸ್ಕೃತ ಭಾಷೆಯ ಕೊಡುಗೆ ಅಪಾರವಾದದ್ದು. ಇಂದಿನ ಕನ್ನಡಭಾಷೆ ನೂರಾರು ತೆರನಾಗಿ ಅನ್ಯಭಾಷೆಗಳ ಪ್ರಭಾವಕ್ಕೊಳಗಾಗಿ ವಿಭಿನ್ನ ತೆರನಾಗಿ ಬೆಳೆಯುತ್ತಿದೆ. ಈ ಅಧ್ಯಯಯನದ ಫಲವಾಗಿ ಕಾಲಾಂತರದಲ್ಲಿ ಕನ್ನಡಭಾಷೆ ಏಕರೂಪಿ ಸಂಚಾರಮಾರ್ಗವನ್ನು ಕಂಡುಕೊಳ್ಳುತ್ತದೆ. ಏಕೆಂದರೆ ಮಗು, ಯಾವುದೇ ಭಾಷೆಗೆ ಸೇರಿದ್ದಾಗಿದ್ದರೂ ಮೊದಲು ಶಾಸ್ತ್ರೀಯವಾಗಿ ಕಲಿಯುವುದು ಆಯಾ ಭಾಷೆಯ ವರ್ಣಮಾಲೆಗಳನ್ನು. ಇಂದು ಕನ್ನಡ ಭಾಷೆಯಲ್ಲಿ ವರ್ಣಮಾಲೆಯು ಗ್ರಾಂಥಿಕವಾಗಿ ಏಕರೂಪಿಯಾಗಿದೆ. ಆದರೆ ಪ್ರಾಯೋಗಿಕವಾಗಿ ಉಚ್ಚಾರಣೆಗಿಳಿದಾಗ ನೂರಾರು ವ್ಯತ್ಯಾಸಗಳನ್ನು ಕಾಣಬಹುದು. ಇದಕ್ಕೆ ಅನೇಕ ಕಾರಣಗಳಿವೆ. ಮುಖ್ಯವಾಗಿ ಅನ್ಯಭಾಷಾ ಪ್ರಭಾವ. ಉದಾಹರಣೆಗೆ ಬೆಳಗಾವಿ ಪ್ರಾಂತ್ಯಕ್ಕೆ ಹೋದರೆ ಅಲ್ಲಿ ಮರಾಠಿ ಮಿಶ್ರಿತ ಕನ್ನಡಭಾಷೆಯು ಕಂಡುಬಂದರೆ ಬಳ್ಳಾರಿ ಜಿಲ್ಲೆಗೆ ಹೋದರೆ ತೆಲಗು ಮಿಶ್ರಿತ ಕನ್ನಡಭಾಷೆ ಕಾಣಬಹುದಾಗಿದೆ. ನಮ್ಮ ದೌರ್ಬಲ್ಯವೆಂದರೆ ಅನ್ಯಭಾಷೆಯ ಪದಗಳನ್ನು ಕಲಿಯುವಾಗ ನಮ್ಮ ಕನ್ನಡಭಾಷಾ ಶಬ್ದರಚನಾ ಸ್ವರೂಪವನ್ನು ಮರೆತು ಅನ್ಯಭಾಷೆಯ ಶೈಲಿಯಲ್ಲಿಯೇ ಮಾತನಾಡಲು ಆರಂಭಿಸುವಂತದ್ದು. ಉದಾಹರಣೆಗೆ ನಾವು ತುಳುನಾಡಿಗೆ ಬಂದಿದ್ದೇವೆ. ಇಲ್ಲಿ ಬಂದಾಗ ಸಹಜವಾಗಿಯೇ ಇಲ್ಲಿಯ ತುಳುಭಾಷಾ ಪದಗಳನ್ನು ಅನುಸರಿಸುತ್ತೇವೆ. ಅಲ್ಪಸ್ವಲ್ಪ ತಪ್ಪಾದರೂ ಅದನ್ನು ಕಾಲಾಂತರದಲ್ಲಿ ತುಳುಭಾಷೆಯ ಶೈಲಿಯಲ್ಲಿಯೇ ರೂಢಿಸಿಕೊಳ್ಳುತ್ತೇವೆ. ಹೀಗೆ ಅನ್ಯದೇಶೀಯ ಪ್ರಭಾವಕ್ಕೊಳಗಾಗಿ ಕನ್ನಡಭಾಷಿಗರು ತಮ್ಮ ವರ್ಣಮಾಲೆಯ ವರ್ಣ ಅಥವಾ

ಅಕ್ಷರಗಳನ್ನು ತಪ್ಪಾಗಿ ಉಚ್ಚರಿಸುವ ಸಾಧ್ಯತೆಗಳು ಹೇರಳವಾಗಿದ್ದರೆ, ಪ್ರಾದೇಶಿಕವಾಗಿ ಹಬ್ಬಿರುವ ಅಸಂಖ್ಯಾತ ಜಾತಿಗಳು, ಅವುಗಳ ಉಪಜಾತಿಗಳೆಲ್ಲ ಒಂದೊಂದು ಭಾಷಾಶೈಲಿಯನ್ನು ರೂಢಿಸಿಕೊಂಡು ಕನ್ನಡ ಒಡೆದ ಮನೆಯಂತಾಗಲಿಕ್ಕೆ ಕಾರಣವಾಗಿವೆ. ಈ ಹಿನ್ನೆಲೆಯಲ್ಲಿ ಕನ್ನಡವರ್ಣಮಾಲೆಯ ವರ್ಣಗಳು, ಅವುಗಳಗುಣಲಕ್ಷಣಗಳು, ಪ್ರತಿಯೊಂದು ವರ್ಣವನ್ನು ಸಶಾಸ್ತ್ರೀಯವಾಗಿ ಸಂಸ್ಕೃತಾಶ್ರಯದಿಂದ ಮಾದರಿಯನ್ನು ನೀಡಿ ವಿವರಿಸಿರುವುದು ಕನ್ನಡ ವರ್ಣಮಾಲೆಯ ಕಲಿಕೆಗೊಂದು ಮಾದರಿ ಒದಗಿಸಿದೆ ಎಂದರೆ ತಪ್ಪಾಗದು. ಕನ್ನಡ ಭಾಷೆಯ ವರ್ಣಮಾಲೆಯ ವಿವಿಧ ಮಜಲುಗಳಾದ ಧ್ವನಿಗಳ ಸಂಖ್ಯೆ, ಮೂಲ ಕನ್ನಡ ಭಾಷೆಯ ವರ್ಣಗಳು, ಅವುಗಳ ಸ್ವರೂಪ , ಧ್ವನಿವ್ಯತ್ಯಾಸ ಮತ್ತಿತರ ಅಧ್ಯಯನಗಳು ಹೇರಳವಾಗಿ ನಡೆದಿವೆ. ಮುಖ್ಯವಾಗಿ ನಮ್ಮ ತೊಡಕಾಗಿದ್ದದ್ದು ಅವುಗಳನ್ನು ಹೇಗೆ ಉಚ್ಚಾರಮಾಡಬೇಕು ಎಂಬುದು ಸರಿಯಾಗಿ ತಿಳಿಯದಿರುವುದು ಮತ್ತು ಅದನ್ನು ಗೊತ್ತಿದ್ದರೂ ಅಲಕ್ಷಿಸುವಂತದ್ದು. ಆದರೆ ಈ ಅಧ್ಯಯನವು ಸಾಮಾನ್ಯ ವ್ಯಕ್ತಿ ಅಂದರೆ ಭಾಷಾ ಅಧ್ಯಯನ ಮಾಡುವವ ಮಾತ್ರವಲ್ಲ ಇತರಭ್ಯಾಸಿಗಳೂ ಸುಲಭವಾಗಿ ಇದರ ಪ್ರಯೋಜನ ಪಡೆಯುತ್ತಾರೆಂಬ ನಂಬಿಕೆಯಿದೆ. ಪ್ರತಿಯೊಂದು ವರ್ಣದ ಉಚ್ಚಾರಣೆಯನ್ನು ಸಚಿತ್ರದ ಮೂಲಕ ತೋರಿಸಲಾಗಿದೆ. ಇದರಿಂದ ವರ್ಣಗಳ ಉಚ್ಚಾರಣೆಯನ್ನು ಹೊಸದಾಗಿ ಕಲಿಯುವವರಿಗೆ ಮಾತ್ರವಲ್ಲ. ಈಗಾಗಲೇ ವರ್ಣಮಾಲೆಯನ್ನು ಕಲಿತು ರೂಢಿಸಿಕೊಂಡವರಿಗೂ ತಮ್ಮ ಉಚ್ಚಾರಣೆಯನ್ನು ತಾವೇ ಮೌಲ್ಯಮಾಪನ ಮಾಡಿಕೊಳ್ಳಲು ಅವಕಾಶ ಕಲ್ಪಿಸಿದೆ. ಆತ್ಮವಿಶ್ವಾಸದಿಂದ ಭಾಷೆಯನ್ನು ಬಳಸಲು ಇದು ನೆರವಾಗುತ್ತದೆ. ಸ್ವರಗಳು, ವ್ಯಂಜನಗಳು, ಯೋಗವಾಹಗಳು ಹೀಗೆ ವರ್ಣಮಾಲೆಯ ವಿಶಿಷ್ಟವಾದ ಅಂಶಗಳನ್ನೆಲ್ಲ ಸವಿವರವಾಗಿ ವಿವರಿಸಲಾಗಿದೆ. ಧ್ವನ್ಯಂಗಗಳ ಆಧಾರದ ಮೇಲೆಯೇ ಕನ್ನಡ ಭಾಷೆಯ ವರ್ಣಮಾಲೆ ರಚಿಸಲ್ಪಟ್ಟಿದೆ ಎಂಬುದನ್ನು ಸಾಧಾರವಾಗಿ ನಿರೂಪಿಸಲಾಗಿದೆ. ಅಕ್ಷರದ ಉಚ್ಚಾರದ ಅಡಿಪಾಯ ವರ್ಣಮಾಲೆಯ ಕಲಿಯುವ ಸಂದರ್ಭದಲ್ಲಿಯೇ ಎಂಬುದನ್ನು ಗಮನಿಸಿದರೆ ಈ ಅಧ್ಯಯನ ಉಪಯುಕ್ತ ವಾದುದಾಗಿದೆ. ಇಂದಿನ ಶಿಕ್ಷಕ ಸಮುದಾಯ, ವಿದ್ಯಾರ್ಥಿ ಸಮುದಾಯಕ್ಕೆ ಈಅಧ್ಯಯನ ಪೂರಕವಾಗಿ ವರ್ಣಮಾಲೆಯ ಅಧ್ಯಯನಕ್ಕೊಂದು

ಮಾದರಿ ಮೈಲುಗಲ್ಲಾಗಲಿದೆ. ಕನ್ನಡ ವರ್ಣಮಾಲೆಯ ವರ್ಣಗಳ ಧ್ವನ್ಯುತ್ಪಾದನಾ ಸ್ಥಾನಗಳನ್ನು ಈ ಕೆಳಗಿನ ಚಿತ್ರದಲ್ಲಿ ಚಿತ್ರದಲ್ಲಿ ವೀಕ್ಷಿಸ ಬಹುದಾಗಿದೆ.



ಕನ್ನಡಭಾಷೆಯ ಪ್ರಸಕ್ತ ವರ್ಣಮಾಲೆಯ ವರ್ಣಗಳ ಗುಣಲಕ್ಷಣಗಳನ್ನು ಈ ಕೆಳಗಿನ ಕೋಷ್ಟಕದಮೂಲಕಕ್ರೋಡೀಕರಿಸಲಾಗಿದೆ.

# ಪ್ರಚಲಿತ ಕನ್ನಡವರ್ಣಮಾಲೆಯಲ್ಲಿರುವ ಸ್ವರಗಳ ಕ್ರೋಢೀಕೃತ ಗುಣಲಕ್ಷಣಗಳು

| ಕ್ರ. ಸಂ. | ಸ್ವರ | ಪಶ್ಚ /ಮಧ್ಯ /ಅಗ್ರ | ಸಂವೃತ್ತ/ ವಿವೃತ್ತ | ಹ್ರಸ್ವ / ದೀರ್ಘ | ಘೋಷ/ ಅಘೋಷ | ಶಿಥಿಲ / ಮಧ್ಯ / ಗಟ್ಟಿ | ಉಚ್ಚ ಸ್ವರ/ಉನ್ನತ ಉಚ್ಚ ಸ್ವರ/ಉನ್ನತ ಮಧ್ಯ/ಮಧ್ಯ/ಅವನತ ಮಧ್ಯ/ಉನ್ನತಾವನತ/ ಅವನತ. | ಸ್ವತಂತ್ರ/ಸಂಯುಕ್ತ | ಉಚ್ಚಾರಣಾ ಸ್ಥಾನ | ಕರಣ |
|---|---|---|---|---|---|---|---|---|---|---|
| 1 | ಅ | ಮಧ್ಯ | ಅವೃತ್ತ | ಹ್ರಸ್ವ | ಘೋಷ | ಶಿಥಿಲ | ಮಧ್ಯ | ಸ್ವತಂತ್ರ | ಕಂಠ | ನಾಲಗೆ |
| 2 | ಆ | ಪಶ್ಚ | ಅವೃತ್ತ | ದೀರ್ಘ | ಘೋಷ | ಗಟ್ಟಿ | ಉನ್ನತಾವನತ | ಸಂಯುಕ್ತ | ಕಂಠ | ನಾಲಗೆ |
| 3 | ಇ | ಅಗ್ರ | ಅವೃತ್ತ | ಹ್ರಸ್ವ | ಘೋಷ | ಶಿಥಿಲ | ಉನ್ನತ | ಸ್ವತಂತ್ರ | ತಾಲು | ನಾಲಗೆ |
| 4 | ಈ | ಅಗ್ರ | ಅವೃತ್ತ | ದೀರ್ಘ | ಘೋಷ | ಗಟ್ಟಿ | ಉನ್ನತ ಮಧ್ಯ | ಸಂಯುಕ್ತ | ತಾಲು | ನಾಲಗೆ |
| 5 | ಉ | ಪಶ್ಚ | ಸವೃತ್ತ | ಹ್ರಸ್ವ | ಘೋಷ | ಶಿಥಿಲ | ಉನ್ನತ | ಸ್ವತಂತ್ರ | ಓಷ್ಠ | ನಾಲಗೆ |
| 6 | ಊ | ಪಶ್ಚ | ಸವೃತ್ತ | ದೀರ್ಘ | ಘೋಷ | ಗಟ್ಟಿ | ಉನ್ನತಾವನತ | ಸಂಯುಕ್ತ | ಓಷ್ಠ | ನಾಲಗೆ |
| 7 | ಋ | ಮಧ್ಯ | ಅವೃತ್ತ | ಹ್ರಸ್ವ | ಘೋಷ | ಶಿಥಿಲ | ಮಧ್ಯ | ಸಂಯುಕ್ತ | ಮೂರ್ಧನ್ಯ | ನಾಲಗೆಯ ತುದಿಯ ಅಡಭಾಗ |
| 8 | ಎ | ಅಗ್ರ | ಅವೃತ | ಹ್ರಸ್ವ | ಘೋಷ | ಮಧ್ಯ | ಉನ್ನತ | ಸಂಯುಕ್ತ | ಕಂಠತಾಲು | ನಾಲಗೆಯತುದಿ. |
| 9 | ಏ | ಅಗ್ರ | ಅವೃತ | ದೀರ್ಘ | ಘೋಷ | ಗಟ್ಟಿ | ಅವನತ | ಸಂಯುಕ್ತ | ಕಂಠತಾಲು | ನಾಲಗೆಯತುದಿ. |
| 10 | ಐ | ಅಗ್ರ ಮಧ್ಯ* | ಅವೃತ | ದೀರ್ಘ | ಘೋಷ | ಗಟ್ಟಿ | ಅವನತ | ಸಂಯುಕ್ತ | ಕಂಠತಾಲು | ನಾಲಗೆಯತುದಿ. |
| 11 | ಒ | ಪಶ್ಚ | ಸವೃತ್ತ | ಹ್ರಸ್ವ | ಘೋಷ | ಮಧ್ಯ | ಉನ್ನತ ಮಧ್ಯ | ಸಂಯುಕ್ತ | ಕಂಠೋಷ್ಠ | ನಾಲಗೆಯತುದಿ. |
| 12 | ಓ | ಪಶ್ಚ | ಸವೃತ್ತ | ದೀರ್ಘ | ಘೋಷ | ಗಟ್ಟಿ | ಅವನತ ಮಧ್ಯ | ಸಂಯುಕ್ತ | ಕಂಠೋಷ್ಠ | ನಾಲಗೆಯತುದಿ. |
| 13 | ಔ | ಪಶ್ಚ ಮಧ್ಯ* | ಸವೃತ್ತ | ದೀರ್ಘ | ಘೋಷ | ಗಟ್ಟಿ | ಅವನತೋನ್ನತ | ಸಂಯುಕ್ತ | ಕಂಠೋಷ್ಠ | ನಾಲಗೆಯತುದಿ. |

## ಪ್ರಚಲಿತ ಕನ್ನಡವರ್ಣಮಾಲೆಯಲ್ಲಿರುವ ವ್ಯಂಜನಗಳ ಕ್ರೋಢೀಕೃತ ಗುಣಲಕ್ಷಣಗಳು

| ಕ್ರ. ಸಂ. | ವ್ಯಂಜನ | ಪ್ರಯತ್ನ | ಉಚ್ಚಾರಣಾ ಸ್ಥಾನ | ಕರಣ | ಘೋಷ/ಅಘೋಷ | ಅಲ್ಪಪ್ರಾಣ/ ಮಹಾಪ್ರಾಣ | ಅನುನಾಸಿಕ/ನಿರನುನಾಸಿಕ | ವ್ಯಂಜನ/ಅರೆವ್ಯಂಜನ | ಉಚ್ಚಾರಣಾ ಸ್ವರೂಪ |
|---|---|---|---|---|---|---|---|---|---|
| 1 | ಕ | ಸ್ಪರ್ಶ | ಕಂಠ | ಪಶ್ಚಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಪಶ್ಚ ಜಿಹ್ವೆ ಮತ್ತುಕಂಠಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 2 | ಖ | ಸ್ಪರ್ಶ | ಕಂಠ | ಪಶ್ಚಜಿಹ್ವೆ | ಅಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 3 | ಗ | ಸ್ಪರ್ಶ | ಕಂಠ | ಪಶ್ಚಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | |

| | | | | | | | | | |
|---|---|---|---|---|---|---|---|---|---|
| 4 | ಘ | ಸ್ಪರ್ಶ | ಕಂಠ | ಪಶ್ಚಜಿಹ್ವೆ | ಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 5 | ಙ | ಸ್ಪರ್ಶ | ಕಂಠ | ಪಶ್ಚಜಿಹ್ವೆ | ಘೋಷ | ಅಲ್ಪಪ್ರಾಣ | ಅನುನಾಸಿಕ | ವ್ಯಂಜನ | ಮೇಲಿನಂತೆ ಮಾಡುವಾಗ ಮುಖವಿವರದ ಜೊತೆಗೆನಾಸಿಕ ಮಾರ್ಗವು ತೆರೆದಿರುತ್ತದೆ. |
| 6 | ಚ | ಸ್ಪರ್ಶ | ತಾಲು | ಮಧ್ಯಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಮಧ್ಯ ಜಿಹ್ವೆ ಮತ್ತು ತಾಲವ್ಯಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 7 | ಛ | ಸ್ಪರ್ಶ | ತಾಲು | ಮಧ್ಯಜಿಹ್ವೆ | ಅಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 8 | ಜ | ಸ್ಪರ್ಶ | ತಾಲು | ಮಧ್ಯಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | |
| 9 | ಝ | ಸ್ಪರ್ಶ | ತಾಲು | ಮಧ್ಯಜಿಹ್ವೆ | ಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 10 | ಞ | ಸ್ಪರ್ಶ | ತಾಲು | ಮಧ್ಯಜಿಹ್ವೆ | ಘೋಷ | ಅಲ್ಪಪ್ರಾಣ | ಅನುನಾಸಿಕ | ವ್ಯಂಜನ | ಮೇಲಿನಂತೆ ಮಾಡುವಾಗ ಮುಖವಿವರದ ಜೊತೆಗೆನಾಸಿಕ ಮಾರ್ಗವು ತೆರೆದಿರುತ್ತದೆ. |
| 11 | ಟ | ಸ್ಪರ್ಶ | ಮೂರ್ಧನ್ಯ | ಅಗ್ರಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿ |

| | | | | | | | | | |
|---|---|---|---|---|---|---|---|---|---|
| 12 | ಠ | ಸ್ಪರ್ಶ | ಮೂರ್ಧನ್ಯ | ಅಗ್ರಜಿಹ್ವೆ | ಅಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | ಅಗ್ರಜಿಹ್ವೆ ಮತ್ತು ಮೂರ್ಧನ್ಯಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 13 | ಡ | ಸ್ಪರ್ಶ | ಮೂರ್ಧನ್ಯ | ಅಗ್ರಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | |
| 14 | ಢ | ಸ್ಪರ್ಶ | ಮೂರ್ಧನ್ಯ | ಅಗ್ರಜಿಹ್ವೆ | ಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 15 | ಣ | ಸ್ಪರ್ಶ | ಮೂರ್ಧನ್ಯ | ಅಗ್ರಜಿಹ್ವೆ | ಘೋಷ | ಅಲ್ಪಪ್ರಾಣ | ಅನುನಾಸಿಕ | ವ್ಯಂಜನ | ಮೇಲಿನಂತೆ ಮಾಡುವಾಗ ಮುಖವಿವರದ ಜೊತೆಗೆನಾಸಿಕ ಮಾರ್ಗವು ತೆರೆದಿರುತ್ತದೆ. |
| 16 | ತ | ಸ್ಪರ್ಶ | ದಂತ್ಯ | ಅಗ್ರಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಅಗ್ರ ಜಿಹ್ವೆ ಮತ್ತು ಮೇಲ್ದಂತದಹಿಂಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 17 | ಥ | ಸ್ಪರ್ಶ | ದಂತ್ಯ | ಅಗ್ರಜಿಹ್ವೆ | ಅಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 18 | ದ | ಸ್ಪರ್ಶ | ದಂತ್ಯ | ಅಗ್ರಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | |
| 19 | ಧ | ಸ್ಪರ್ಶ | ದಂತ್ಯ | ಅಗ್ರಜಿಹ್ವೆ | ಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 20 | ನ | ಸ್ಪರ್ಶ | ದಂತ್ಯ | ಅಗ್ರಜಿಹ್ವೆ | ಘೋಷ | ಅಲ್ಪಪ್ರಾಣ | ಅನುನಾಸಿಕ | ವ್ಯಂಜನ | ಮೇಲಿನಂತೆ ಮಾಡುವಾಗ ಮುಖವಿವರದ ಜೊತೆಗೆನಾಸಿಕ ಮಾರ್ಗವು ತೆರೆದಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 21 | ಪ | ಸ್ಪರ್ಶ | ಕೆಳಗಿನ ಓಷ್ಠ | ಮೇಲಿನ ಓಷ್ಠ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಪಕ್ಷ ಮೇಲಿನ ತುಟಿಮತ್ತು ಕೆಳಗಿನ ತುಟಿಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 22 | ಫ | ಸ್ಪರ್ಶ | ಕೆಳಗಿನ ಓಷ್ಠ | ಮೇಲಿನ ಓಷ್ಠ | ಅಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 23 | ಬ | ಸ್ಪರ್ಶ | ಕೆಳಗಿನ ಓಷ್ಠ | ಮೇಲಿನ ಓಷ್ಠ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | |
| 24 | ಭ | ಸ್ಪರ್ಶ | ಕೆಳಗಿನ ಓಷ್ಠ | ಮೇಲಿನ ಓಷ್ಠ | ಘೋಷ | ಮಹಾಪ್ರಾಣ | ನಿರನುನಾಸಿಕ | ವ್ಯಂಜನ | |
| 25 | ಮ | ಸ್ಪರ್ಶ | ಕೆಳಗಿನ ಓಷ್ಠ | ಮೇಲಿನ ಓಷ್ಠ | ಘೋಷ | ಅಲ್ಪಪ್ರಾಣ | ಅನುನಾಸಿಕ | ವ್ಯಂಜನ | ಮೇಲಿನಂತೆ ಮಾಡುವಾಗ ಮುಖವಿವರದ ಜೊತೆಗೆನಾಸಿಕ ಮಾರ್ಗವು ತೆರೆದಿರುತ್ತವೆ. |
| 26 | ಯ | ಈಷತ್‌ಸ್ಪೃಷ್ಟ | ತಾಲು | ಅಲಿಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ಅರೆವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿ ಸ್ಥಾನ ಮತ್ತು ಕರಣಗಳು ಪರಸ್ಪರ ಹತ್ತಿರ ಬಂದಾಗ ಉಚ್ಚಾರ ಮಾಡಬಹುದಾಗಿದೆ. |

| | | | | | | | | |
|---|---|---|---|---|---|---|---|---|
| 27 | ರ | ಕಂಪಿತ | ಮೂರ್ಧನ್ಯ | ಮಧ್ಯಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿ ಅಗ್ರಜಿಹ್ವೆ ಮತ್ತು ಮೂರ್ಧನ್ಯಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 28 | ಲ | ಪಾರ್ಶ್ವಿಕ | ದಂತ್ಯ | ಅಗ್ರಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಅಗ್ರ ಜಿಹ್ವೆ ಮತ್ತು ಮೇಲ್ದಂತದಹಿಂಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 29 | ವ | ಈಷತ್‌ಸ್ಪೃಷ್ಟ | ದಂತೋಷ್ಠ | ಓಷ್ಠ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ಅರೆವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿ ಸ್ಥಾನ ಮತ್ತು ಕರಣಗಳು ಪರಸ್ಪರ ಹತ್ತಿರ ಬಂದಾಗ ಉಚ್ಚಾರ ಮಾಡಬಹುದಾಗಿದೆ. |
| 30 | ಶ | ಘರ್ಷ | ತಾಲು | ಮಧ್ಯಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಮಧ್ಯ ಜಿಹ್ವೆ ಮತ್ತು ತಾಲವ್ಯಭಾಗವು ಒಮ್ಮೆ |

| | | | | | | | | | |
|---|---|---|---|---|---|---|---|---|---|
| | | | | | | | | | ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 31 | ಷ | ಘರ್ಷ | ಮೂರ್ಧನ್ಯ | ಅಗ್ರಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿ ಅಗ್ರಜಿಹ್ವೆ ಮತ್ತು ಮೂರ್ಧನ್ಯಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 32 | ಸ | ಅರ್ಧಸ್ಪೃಷ್ಟ | ದಂತ್ಯ | ಮಧ್ಯಜಿಹ್ವೆ | ಅಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಅಗ್ರ ಜಿಹ್ವೆ ಮತ್ತು ಮೇಲ್ದಂತದಹಿಂಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |
| 33 | ಹ | ಅರ್ಧಸ್ಪೃಷ್ಟ | ಕಂಠ | ಪಶ್ಚ ಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿಪಶ್ಚ ಜಿಹ್ವೆ ಮತ್ತುಕಂಠಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |

| | | | | | | | | | |
|---|---|---|---|---|---|---|---|---|---|
| 34 | ಳ | ಸ್ಪರ್ಶ | ಮೂರ್ಧನ್ಯ | ಅಗ್ರಜಿಹ್ವೆ | ಘೋಷ | ಅಲ್ಪಪ್ರಾಣ | ನಿರನುನಾಸಿಕ | ವ್ಯಂಜನ | ಶ್ವಾಸವನ್ನು ಹೊರಮುಖವಾಗಿ ಸಂಚಾರವಾಗುವಂತೆ ಮಾಡಿ ಅಗ್ರಜಿಹ್ವೆ ಮತ್ತು ಮೂರ್ಧನ್ಯಭಾಗವು ಒಮ್ಮೆ ತಡೆದು ಸ್ಫೋಟಗೊಳ್ಳುವಂತೆ ಮಾಡಿದಾಗ ಉಚ್ಚಾರ ಮಾಡಬಹುದಾಗಿದೆ. |

## ಅಧ್ಯಾಯ 8 ಪರಾಮರ್ಶನ ಗ್ರಂಥಗಳು


1 'ಭಗವತ್ಪತಂಜಲಿ–ವಿರಚಿತ ವ್ಯಾಕರಣ ಮಹಾಭಾಷ್ಯ' ಹಿಂದಿ ಅನುವಾದ ಮತ್ತು ವಿವರಣೆ, ಪ್ರಥಮ ನವಾಹ್ನಿಕ,ಚಾರುದೇವ ಶಾಸ್ತ್ರಿ, 3/54 ರೂಪನಗರ ದೆಹಲಿ. ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಏಳನೇ ಆವೃತ್ತಿ, 2009. ಪುಟ ಸಂಖ್ಯೆ 1 ರಿಂದ 119.

2 "ಭಾಷಾವಿಜ್ಞಾನ ಕಿ ಆಧುನಿಕ ಪರಂಪರಾ ಔರ್ ಪಾಣಿನಿ" .ಡಾ ರಾಮದೇವ ತ್ರಿಪಾಠಿ,ಬಿಹಾರ–ರಾಷ್ಟ್ರಭಾಷಾ–ಪರಿಷದ್ ಪಾಟ್ನಾ ವಾಲ್ಮಿಕಿ ಪ್ರಕಾಶನ ಪಾಟ್ನಾ, ಪ್ರಥಮ ಆವೃತ್ತಿ, 1977, ಪುಟ ಸಂಖ್ಯೆ 1 ರಿಂದ 359.

3 ಕೇಶಿರಾಜದರ್ಪಣ', ವ್ಯಾಖ್ಯಾನ: ಪ್ರೊ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಸಂ. ಡಾ. ಪಾದೇಕಲ್ಲು ವಿಷ್ಣುಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ, 1999. ಪುಟ ಸಂಖ್ಯೆ 21 ರಿಂದ 122.

4 ಭಟ್ಟೋಜಿ ದಿಕ್ಷಿತ ವಿರಚಿತ "ವೈಯಾಕರಣ ಸಿದ್ಧಾಂತ ಕೌಮುದಿ",ಸಂಜ್ಞಾ ಕಾರಕ ಪ್ರಕರಣಗಳು, ಡಾ. ವಿ.ಕೆ. ಹಂಪಿಹೊಳಿ, ಹರ್ಷ ಪ್ರಕಾಶನ ಕುಮಟಾ, ಮೊದಲ ಆವೃತ್ತಿ 1991.ಭೂಮಿಕಾ ಭಾಗ ಮತ್ತು ಸಂಜ್ಞಾ ಪ್ರಕರಣ ಪುಟ ಸಂಖ್ಯೆ 1 ರಿಂದ 20.

5 ಪಾಣಿನೀಯ ಶಿಕ್ಷಾ (ಹಿಂದಿ ವ್ಯಾಖ್ಯಾ), ವಿದ್ಯಾಸಾಗರ ಡಾ. ದಾಮೋದರ ಮಹತೋ ಭಾಗಲಪುರ ,ಬಿಹಾರ, ಶ್ರೀ ಜೈನೇಂದ್ರ ಪ್ರೆಸ್ ಎ 45 ನಾರಾಯಣಾ, ದೆಹಲಿ , ಮೊದಲ ಆವೃತ್ತಿ, 1990. ಸಮಗ್ರವಾಗಿ ಎಲ್ಲ ಪುಟಗಳು.

6 ವೈಯಾಕರಣ ಸಿದ್ಧಾಂತ ಕೌಮುದೀ (ಕನ್ನಡ ವ್ಯಾಖ್ಯಾನ), ಬಾಲಬೋಧಿನೀ, ವಿದ್ವಾನ್ ಜಿ.ಕೃಷ್ಣಮೂರ್ತಿ ಭಟ್ಟ,ಅಲಂಕಾರಶಾಸ್ತ್ರ ಅಧ್ಯಾಪಕರು, ಮೈಸೂರು, ಮುದ್ರಣ ಅಲಂಕಾರಪ್ರಿಂಟರ್ಸ ಬಸವೇಶ್ವರರಸ್ತೆ ಮೈಸೂರು, ಪ್ರಥಮಮುದ್ರಣ

1965.ಸಂಜ್ಞಾ ಪ್ರಕರಣ ಮತ್ತು ಪರಿಭಾಷಾ ಪ್ರಕರಣಗಳು ಪುಟಸಂಖ್ಯೆ 1 ರಿಂದ 56.

7 ಶಬ್ದಮಣಿದರ್ಪಣ ಸಂಗ್ರಹ,ಸಂಪಾದಕರು ಪ್ರೊ. ಬಿ.ಟಿ.ಸಾಸನೂರ ಹಾಗೂ ಡಾ. ಎಂ. ಎಂ. ಕಲಬುರ್ಗಿ,ಪ್ರಕಾಶಕರು : ಮನೋಹರ ಘಾಣೇಕರ್ ಸಮಾಜ ಪುಸ್ತಕಾಲಯ ಧಾರವಾಡ, ಏಳನೆಯ ಮುದ್ರಣ, ಜೂನ್ 2000. ಪುಟ ಸಂಖ್ಯೆ 1 ರಿಂದ 11.

೮. ಭಾಷಾವಿಜ್ಞಾನಕೋಶ (ಸಂಸ್ಕೃತ–ಹಿಂದಿ ಶಬ್ದಕೋಶ), ಬೋಲಾನಾಥ ತಿವಾರಿ, ಬನಾರಸ್, 1960. ಪುಟ ಸಂಖ್ಯೆ 4 ರಿಂದ 13, ಪುಟ ಸಂಖ್ಯೆ 75 ರಿಂದ 90, ಪುಟ ಸಂಖ್ಯೆ 252 ರಿಂದ 255, ಪುಟ ಸಂಖ್ಯೆ 270 ರಿಂದ 277, ಪುಟ ಸಂಖ್ಯೆ 282 ರಿಂದ 305, ಪುಟ ಸಂಖ್ಯೆ 307 ರಿಂದ 333, ಪುಟ ಸಂಖ್ಯೆ 415 ರಿಂದ 423, ಪುಟ ಸಂಖ್ಯೆ 487 ರಿಂದ 503, ಪುಟ ಸಂಖ್ಯೆ 657 ರಿಂದ 665.

9. ಕನ್ನಡಲಿಪಿಯಉಗಮವಿಕಾಸ, ಡಾ.ಎ.ವಿ.ನರಸಿಂಹಮೂರ್ತಿ, ಕನ್ನಡ ಆಧಯಯನ ಸಂಸ್ಥೆ ಮೂಸೂರು ವಿಶ್ವ ವಿದ್ಯಾಲಯ, ಎರಡನೆಯಮುದ್ರಣ, 1975, ಪುಟ 10 ರಿಂದ 123.

10 ಪ್ರಾಚೀನ ಕನ್ನಡ ವ್ಯಾಕರಣಗಳು, ಎಂ.ವಿ.ಸೀತಾರಾಮಯ್ಯ,ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮೈಸೂರು ವಿಶ್ವ ವಿದ್ಯಾಲಯ,1988, ಎರಡನೇ ಆವೃತ್ತಿ. ಪುಟ ಸಂಖ್ಯೆ 1 ರಿಂದ 144.

11 ದ್ರಾವಿಡ ಭಾಷಾವ್ಯಾಸಂಗ , ಡಾ. ಸಂಗಮೇಶ ಸವದತ್ತಿಮಠ, ರೂಪರಶ್ಮಿ ಪ್ರಕಾಶನ ಕಲ್ಬುರ್ಗಿ. ಆರನೇ ಆವೃತ್ತಿ 1996, ಪುಟ ಸಂಖ್ಯೆ 16 ರಿಂದ 97.

12 ಸರಳ ಸಂಸ್ಕೃತ ವ್ಯಾಕರಣ, ಡಾ. ಮಹಾದೇವ ನಾರಾಯಣ ಜೋಷಿ,ಸಂಸ್ಕೃತವಿಭಾಗ, ಕ.ವಿ.ವಿ ಧಾರವಾಡ, ಪ್ರಕಾಶಕರು ಎಂ.ಆರ್. ನಾರಾಯಣರಾವ್, ಆಕಳವಾಡಿ ಬುಕ್ ಡಿಪೋ, ಧಾರವಾಡ, ಪ್ರಥಮ ಮುದ್ರಣ

1996, ಅಧ್ಯಾಯ ಒಂದು ಪೀಠಿಕೆ, ಮಾಹೇಶ್ವರ ಸೂತ್ರಗಳು , ವರ್ಣಗಳು ಭಾಗಗಳು, ಪುಟ ಸಂಖ್ಯೆ 1 ರಿಂದ 23.

13 'ಕನ್ನಡ ಶಬ್ದ ರಚನೆ', ಡಿ.ಎನ್.ಶಂಕರ ಭಟ್, ಕನ್ನಡ ಸಂಘ, ಕ್ರೈಸ್ತ ಕಾಲೇಜು, ಕುವೆಂಪುನಗರ, ಬೆಂಗಳೂರು, ಮೊದಲ ಆವೃತ್ತಿ, 1999, ಪುಟ ಸಂಖ್ಯೆ 1 ರಿಂದ 33.

14 ಭಾಷಾ ವಿಹಾರ, ಡಾ.ಎ. ಮುರಿಗೆಪ್ಪ, ಬೃಂದಾವನ ಪ್ರಕಾಶನ ಮೈಸೂರು, ಮೊದಲ ಆವೃತ್ತಿ, 1993, ಸಮಾಜದಲ್ಲಿ ಭಾಷೆ, ಭಾಷಾ ಪ್ರಭೇದಗಳ ಅಧ್ಯಯನದ ಪ್ರಯೋಜನಗಳು, ಬೀದರ್ ಜಿಲ್ಲೆ ಕನ್ನಡ  ಇತ್ಯಾದಿ ಭಾಗಗಳು, ಪುಟ ಸಂಖ್ಯೆ 1 ರಿಂದ 30

15 ತಮಿಳು ಭಾಷಾ ಚರಿತ್ರೆ, ಡಾ. ತಂಗ ಮಣಿಯನ್, ತಮಿಳು ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು ವಿ.ವಿ. ಮಾಣಿಕ್ಕಂ ಪ್ರಕಾಶನ ಮೈಸೂರು, ಮೊದಲ ಆವೃತ್ತಿ, 1991, ಭಾಷಾ ಚರಿತ್ರೆ ಮತ್ತು ನೆರವಾಗುವ ಅಂಶಗಳು ಪುಟ ಸಂಖ್ಯೆ 3 ರಿಂದ 19.

16 'ಕನ್ನಡ ವಿಶ್ವಕೋಶ'ಸಂಪುಟ 1,ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವ ಸಂಪಾದಕರು ದೇ. ಆವರೇಗೌಡ, ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1969, ಪುಟ ಸಂಖ್ಯೆ 1, 160 ರಿಂದ 164 ಹಾಗೂ 637ನೇ ಪುಟಗಳು.

17 'ಕನ್ನಡ ವಿಶ್ವಕೋಶ'ಸಂಪುಟ 2, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವ ಸಂಪಾದಕರು ದೇ. ಆವರೇಗೌಡ, ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1970, ಪುಟ ಸಂಖ್ಯೆ 178, 468, 535, 820, 830 ಹಾಗೂ 845ನೇ ಪುಟಗಳು.

18 'ಕನ್ನಡ ವಿಶ್ವಕೋಶ'ಸಂಪುಟ 3, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಗೌರವ ಸಂಪಾದಕರು ದೇ. ಆವರೇಗೌಡ, ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1971, ಪುಟ ಸಂಖ್ಯೆ 134, 248, 325, 425, 472 ಹಾಗೂ 496ನೇ ಪುಟಗಳು.

19 'ಕನ್ನಡ ವಿಶ್ವಕೋಶ'ಸಂಪುಟ 5, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪ್ರಧಾನ ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1972, ಪುಟ ಸಂಖ್ಯೆ 761 ಹಾಗೂ 853ನೇ ಪುಟಗಳು.

20 'ಕನ್ನಡ ವಿಶ್ವಕೋಶ'ಸಂಪುಟ 7, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪ್ರಧಾನ ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1974, ಪುಟ ಸಂಖ್ಯೆ 7, 77, 624 ಹಾಗೂ 633ನೇ ಪುಟಗಳು.

21 'ಕನ್ನಡ ವಿಶ್ವಕೋಶ'ಸಂಪುಟ 8, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪ್ರಧಾನ ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1975, ಪುಟ ಸಂಖ್ಯೆ 466, 470, 751 ಹಾಗೂ 765ನೇ ಪುಟಗಳು.

22 'ಕನ್ನಡ ವಿಶ್ವಕೋಶ'ಸಂಪುಟ 9, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪ್ರಧಾನ ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1977, ಪುಟ ಸಂಖ್ಯೆ 54, 58, 459, 479 ಹಾಗೂ 886ನೇ ಪುಟಗಳು.

23 'ಕನ್ನಡ ವಿಶ್ವಕೋಶ'ಸಂಪುಟ 10, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪ್ರಧಾನ ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1980, ಪುಟ ಸಂಖ್ಯೆ 1 ಹಾಗೂ 686ನೇ ಪುಟಗಳು.

24 'ಕನ್ನಡ ವಿಶ್ವಕೋಶ'ಸಂಪುಟ 11, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪ್ರಧಾನ ಸಂಪಾದಕರು ಡಾ. ಹಾ.ಮಾ.ನಾಯಕ, ಕ್ರಿ.ಶ.1983, ಪುಟ ಸಂಖ್ಯೆ 768ನೇ ಪುಟ.

25 'ಕನ್ನಡ ಭಾಷೆಯ ಚರಿತ್ರೆ' ಡಾ. ಕೆ. ಕಂಪೇಗೌಡ, ಪ್ರಧ್ಯಾಪಕರು, ಭಾಷಾ ವಿಜ್ಞಾನ, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ ಮೈಸೂರು ವಿಶ್ವವಿದ್ಯಾಲಯ, ಪ್ರಕಾಶಕರು ಮೈಸೂರು,ಭಾಷಾ ಭಾರತೀ ಮೈಸೂರು 9, ಮೊದಲ ಆವೃತ್ತಿ 1994, ಪುಟ ಸಂಖ್ಯೆ : 1 ರಿಂದ 260

26 'ಸಾಮವೇದದ ಅಂತರಂಗ' ಅರ್ ಎಲ್. ಕಶ್ಯಪ್, ಮೊದಲ ಆವೃತ್ತಿ 2007, ಪ್ರಕಾಶಕರು: ಶ್ರೀ ಅರೋಬಿಂದೋ ಕಪಾಲಿಶಾಸ್ತ್ರಿ ಇನ್‌ಸ್ಟಿಟ್ಯೂಟ್ ಆಫ್ ವೇದಿಕ್ ಕಲ್ಚರ್ ಜಯನಗರ ಬೆಂಗಳೂರು, ಪೀಠಿಕಾ ಭಾಗದಿಂದ ಸಾಮಗಾನ ಮತ್ತು ಯೋನಿ ಮಂತ್ರಗಳ ಮೂಲ ಪಾಠ ಪುಟ ಸಂಖ್ಯೆ 1 ರಿಂದ 29.

27 'ಕನ್ನಡ ಭಾಷಾ ಶಾಸ್ತ್ರ' ಡಾ. ರಾ. ಯ. ಧಾರವಾಡಕರ, ಆರನೆಯ ಪರಿಷ್ಕೃತಿ, ವಿಸ್ತ್ರತ ಮುದ್ರಣ 1987, ಪ್ರಕಾಶಕರು ಗೀತಾ ಬುಕ್ ಹೌಸ್ ಮೈಸೂರು, ಪುಟ ಸಂಖ್ಯೆ 1 ರಿಂದ 292.

28 'ಕನ್ನಡ ಸಾಹಿತ್ಯ ಕೋಶ' ಸಂಪಾದಕರು ರಾಜಪ್ಪ ದಳವಾಯಿ, ತುಮಕೂರು, ಪ್ರಕಾಶಕರು ಅವಿಸಂ(ರಿ), ಅನುವನಹಳ್ಳಿ, ಶಿವನಿ ಅಂಚೆ, ತರೀಕೆರೆ ತಾ. ಚಿಕ್ಕಮಗಳೂರು, ಎರಡನೆಯ ಆವೃತ್ತಿ 1998, ಪುಟ ಸಂಖ್ಯೆ 277 ರಿಂದ 284, ಪುಟ ಸಂಖ್ಯೆ 420 ರಿಂದ 428

29 'ಭಾಷಾವಿಜ್ಞಾನದ ಮೂಲ ತತ್ವಗಳು' ಡಾ. ಎಂ. ಚಿದಾನಂದ ಮೂರ್ತಿ,ನಾಲ್ಕನೇ ಮುದ್ರಣ 1993, ಪ್ರಕಾಶಕರು ಡಿ.ವಿ.ಕೆ. ಮೂರ್ತಿ ಮೈಸೂರು, ಪುಟ ಸಂಖ್ಯೆ 9 ರಿಂದ 62.

30 'ಸಸ್ವರ ವೇದಮಂತ್ರಾಃ' ಪರಿಷ್ಕರ್ತರು ಸ್ವಾಮಿ ಚಿದಾನಂದ,ಶ್ರೀ ರಾಮಕೃಷ್ಣಾಶ್ರಮ ಯಾದವಗಿರಿ, ಮೈಸೂರು, ಎಂಟನೇ ಪ್ರಕಾಶನ 1995, ಪುಟ ಸಂಖ್ಯೆ 11 ರಿಂದ 119.

31 'ಕನ್ನಡ ಛಂದಃ ಸ್ವರೂಪ' ಡಾ. ಓ.ವಿ.ವೆಂಕಟಾಚಲ ಶಾಸ್ತ್ರೀ, , ಪ್ರಕಾಶಕರು ಡಿ.ವಿ.ಕೆ. ಮೂರ್ತಿ ಮೈಸೂರು, ಎರಡನೇ ಪರಿಷ್ಕೃತ ಮುದ್ರಣ1996, ಪುಟ ಸಂಖ್ಯೆ 15.

32 'ಸುಭಾಷ್ ನಿಘಂಟು' ಪ್ರೊ ॥ ಎಲ್.ಎಸ್. ಶೇಷಗಿರಿರಾವ್,ಮುದ್ರಕರು ಲಕ್ಷ್ಮೀ ಮುದ್ರಣಾಲಯ, ಚಾಮರಾಜ ಪೇಟೆ, ಬೆಂಗಳೂರು, ಏಳನೇ ಆವೃತ್ತಿ 2004.

33 ಕನ್ನಡ ಭಾಷಾವ್ಯಾಸಂಗ , ಡಾ. ಸಂಗಮೇಶ ಸವದತ್ತಿಮಠ, ರೂಪರಶ್ಮಿ ಪ್ರಕಾಶನ ಕಲ್ಬುರ್ಗಿ, ಆರನೇ ಆವೃತ್ತಿ 1998, ಪುಟ ಸಂಖ್ಯೆ 1 ರಿಂದ 115

34 'ಭಾರತೀಯ ಕಾವ್ಯಮಿಮಾಂಸೆ' ತೀ.ನಂ.ಶ್ರೀಕಂಠಯ್ಯ, ಪ್ರಕಾಶಕರು ಪ್ರಸಾರಾಂಗ ಮೈಸೂರುವಿಶ್ವ ವಿದ್ಯಾಲಯ ಐದನೇ ಮುದ್ರಣ1990, ಧ್ವನಿ ಪ್ರಸ್ಥಾನ ಭಾಗ ಪುಟ ಸಂಖ್ಯೆ 36 ರಿಂದ 57.

35 'ಶ್ರೀಮದ್ಭಗವದ್ಗೀತೆ' ಗೀತಾ ಪ್ರೆಸ್, ಗೋರಖಪುರ, 23 ನೇ ಆವೃತ್ತಿ 2009, ಅಧ್ಯಾಯ ನಾಲ್ಕು ಮತ್ತು 18. ಪುಟ ಸಂಖ್ಯೆ 79 ರಿಂದ 95, ಪುಟ ಸಂಖ್ಯೆ 258 ರಿಂದ 285.

36 'ಸಮಗ್ರ ಹೊಸಗನ್ನಡ ವ್ಯಾಕರಣ' ಐ.ಎಸ್. ಅರಳಗುಪ್ಪಿ, ನಿವೃತ್ತ ಶಿಕ್ಷಕರು ಧಾರವಾಡ, ಪ್ರಕಾಶಕರು ಸಮಾಜ ಪುಸ್ತಕಾಲಯ ಧಾರವಾಡ, ಮೊದಲ ಆವೃತ್ತಿ 1996, ಪುಟ ಸಂಖ್ಯೆ 1 ರಿಂದ 11.

37 concise Oxford English Dictionary , Eleventh Edition2004, Catherine Soanes, oxford university press, New York.

38 'ಕನ್ನಡ ಪದಗಳ ಒಳರಚನೆ', ಡಿ.ಎನ್.ಶಂಕರ ಭಟ್, ಭಾಷಾಪ್ರಕಾಶನ, ಮೈಸೂರು, ಮೊದಲ ಆವೃತ್ತಿ, 1999, ಪುಟ ಸಂಖ್ಯೆ 13 ರಿಂದ 17

39 ಹೊಸಗನ್ನಡ ವ್ಯಾಕರಣ, ಛಂದಸ್ಸು, ವ್ಯಾವಹಾರಿಕ ಕನ್ನಡ, ಡಾ. ಓ. ಇ. ವೆಂಕಟಾಚಲ ಶಾಸ್ತ್ರಿ , ಡಾ. ಕೆ.ಆರ್.ಗಣೇಶ್, ಪ್ರೊ. ಅಶ್ವತ್ಥನಾರಾಯಣ , ಕನ್ನಡ ಸಾಹಿತ್ಯಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ದ್ವಿತೀಯ ಮುದ್ರಣ2001, ಪುಟ ಸಂಖ್ಯೆ 1 ರಿಂದ 7.

40 'ಕನ್ನಡ ಬೆಳೆದುಬಂದ ಬಗೆ' ಡಾ. ಉಪ್ಪಂಗಳ ರಾಮ ಭಟ್ಟ, ಅಕಲಂಕ ಪ್ರಕಾಶನ (ರಿ) ಉಡುಪಿ,2008, ಕನ್ನಡ ಬೆಳೆದು ಬಂದ ಬಗೆ ಭಾಗ ಪುಟ ಸಂಖ್ಯೆ 1 ರಿಂದ 9.

41 'ಐಚ್ಛಿಕ ಕನ್ನಡ ಭಾಗ 2' ಪ್ರಧಾನ ಸಂಪಾದಕರು, ಮಾಲಿ ಮುದ್ದಣ್ಣ, ಮುಖ್ಯ ಸಂಪಾದಕರು ಪ್ರೊ. ಬಿ.ಆರ್. ರಾಮಚಂದ್ರ ಗೌಡ ಬೆಂಗಳೂರು, ನವೀನ ಪ್ರಕಾಶನ ರಾಜಮಹಲ್ ಗುಟ್ಟಹಳ್ಳಿ ಬೆಂಗಳೂರು 3, 1998, ಪುಟ ಸಂಖ್ಯೆ 169 ರಿಂದ 179.

42 ಸಿದ್ಧಾಂತಕೌಮುದೀ- ಬಾಲ ಮನೋರಮಾ, ಪ್ರಥಮ ಭಾಗ, ಚೌಖಂಭಾ ಸಂಸ್ಕೃತ ಸಂಸ್ಥಾನ ವಾರಣಾಸಿ, ಶ್ರೀ ವಾಸುದೇವದೀಕ್ಷಿತ ಬಾಲ ಮನೋರಮಾ, ಪುಟ ಸಂಖ್ಯೆ 3 ರಿಂದ 70.

43 'ಸಂಶೋಧನೆಯ ವಿಧಿ- ವಿಧಾನಗಳು' ಡಾ. ಬಿ. ಪ್ರಭಾಕರ ಶಿಶಿಲ,ಪ್ರಗತಿ ಪ್ರಕಾಶನ ಸುಳ್ಯ, 07-07-07. ಸಮಗ್ರ ಅಧ್ಯಯನ.

44 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಡಾ. ಎಂ. ಚಿದಾನಂದ ಮೂರ್ತಿ, ಪ್ರಕಾಶಕರು: ನಿರ್ದೇಶಕರು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು. 1979, ಎರಡನೇ ಮುದ್ರಣ, ಪುಟ ಸಂಖ್ಯೆ 16, ಐದು ಮತ್ತು ಆರನೇ ಸಾಲು.